# ವಲಸಿಗರ ನೆಲೆ
# ಮರಿಯಮ್ಮನಹಳ್ಳಿ ಸಂಕಥನ

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕ
ಗುರುಪ್ರಸಾದ್ ಹೆಚ್.ಎಸ್.

ಮಾರ್ಗದರ್ಶಕರು
ಪ್ರೊ. ಮಂಜುನಾಥ ಬೇವಿನಕಟ್ಟಿ



ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೬-೦೭

# ವಲಸಿಗರ ನೆಲೆ
# ಮರಿಯಮ್ಮನಹಳ್ಳಿ ಸಂಕಥನ

(ಪಿಎಚ್.ಡಿ. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)

ಸಂಶೋಧಕ

**ಗುರುಪ್ರಸಾದ್ ಹೆಚ್.ಎಸ್.**

ಮಾರ್ಗದರ್ಶಕರು

**ಪ್ರೊ. ಮಂಜುನಾಥ ಬೇವಿನಕಟ್ಟಿ**



**ಜಾನಪದ ಅಧ್ಯಯನ ವಿಭಾಗ**
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೦೬-೦೭

# ದೃಢೀಕರಣ ಪತ್ರ

ಶ್ರೀ ಗುರುಪ್ರಸಾದ್.ಹೆಚ್.ಎಸ್ ಅವರು 'ವಲಸಿಗರ ನೆಲೆ: ಮರಿಯಮ್ಮನಹಳ್ಳಿ ಸಂಕಥನ' ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಜಾನಪದ ಅಧ್ಯಯನ ವಿಭಾಗಕ್ಕೆ ಅರ್ಪಿಸಲೆಂದು ನನ್ನ ಮಾರ್ಗದರ್ಶನದಲ್ಲಿ ಸಿದ್ಧ ಪಡಿಸಿದ್ದಾರೆ. ಈ ಮಹಾಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲಿ, ಉದ್ದೇಶಗಳಿಗಾಗಲಿ ಇವರು ಒಪ್ಪಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

(ಮಂಜುನಾಥ ಬೇವಿನಕಟ್ಟಿ)
ಪ್ರಾಧ್ಯಾಪಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ದಿನಾಂಕ: 29/10/2002

ಸ್ಥಳ: ವಿದ್ಯಾರಣ್ಯ

# ಪ್ರಮಾಣ ಪತ್ರ

**'ವಲಸಿಗರ ನೆಲೆ: ಮರಿಯಮ್ಮನಹಳ್ಳಿ ಸಂಕಥನ'** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ.ಮಂಜುನಾಥ ಬೇವಿನಕಟ್ಟಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಸಮಾಜ ವಿಜ್ಞಾನಗಳ ನಿಕಾಯದ ಜಾನಪದ ಅಧ್ಯಯನ ವಿಭಾಗಕ್ಕೆ ಪಿಎಚ್.ಡಿ., ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

G P H.S.

**ಗುರುಪ್ರಸಾದ್. ಹೆಚ್.ಎಸ್.**
ಸಂಶೋಧನಾ ವಿದ್ಯಾರ್ಥಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ದಿನಾಂಕ: 22-10-07
ಸ್ಥಳ: ವಿದ್ಯಾರಣ್ಯ

# ಅರಿಕೆ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಎ.,ಪಿಎಚ್.ಡಿ. ಸಂಯೋಜಿತ ಪದವಿಯ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಕುಲಪತಿಗಳಾಗಿದ್ದ ಡಾ.ಎಚ್.ಜೆ.ಲಕ್ಕಪ್ಪಗೌಡ, ಡಾ.ಬಿ.ಎ.ವಿವೇಕ ರೈ. ಪ್ರಸ್ತುತ ಕುಲಪತಿಗಳಾಗಿರುವ ಡಾ.ಕೆ.ವಿ.ನಾರಾಯಣ, ಕುಲಸಚಿವರಾಗಿದ್ದ ಡಾ.ಕರೀಗೌಡ ಬೀಚನಹಳ್ಳಿ, ಪ್ರಸ್ತುತ ಕುಲಸಚಿವರಾದ ವಿ.ಶಂಕರ್, ಅಧ್ಯಯನಾಂಗದ ನಿರ್ದೇಶಕರಾದ ಡಾ.ಪಾಂಡುರಂಗಬಾಬು ಅವರುಗಳಿಗೆ ಕೃತಜ್ಞತೆಗಳು.

ನನಲ್ಲಿ ಸಂಶೋಧಾನಾಸಕ್ತಿಯನ್ನು ಗುರುತಿಸಿ ನನ್ನನ್ನು ಸಂಶೋಧನೆಗೆ ತೊಡಗಿಸಿ ತುಂಗಾಭದ್ರ ಆಣೆಕಟ್ಟಿನಲ್ಲಿ ಮುಳುಗಡೆಯಾದ ಅರಳಿಹಳ್ಳಿ, ನಾರಾಯಣದೇವರ ಕೆರೆಗಳಂತಹ ಅನೇಕ ಗ್ರಾಮಗಳು ಹತ್ತಿರದ ಮರಿಯಮ್ಮನಹಳ್ಳಿಗೆ ವಲಸೆ ಬಂದು ತಮ್ಮ ಮೂಲ ಸಂಸ್ಕೃತಿಯೊಂದಿಗೆ ಒಂದು ಹೊಸ ಕೂಡುಸಂಸ್ಕೃತಿಯ ಬಗ್ಗೆ ಅಧ್ಯಯನಕ್ಕೆ ಪ್ರೇರೇಪಿಸಿದ ನನ್ನ ಗುರುಗಳು ಹಾಗೂ ಮಾರ್ಗದರ್ಶಕರು ಆಗಿರುವ ಡಾ.ಮಂಜುನಾಥ ಬೇವಿನಕಟ್ಟಿ ಅವರಿಗೆ ವಿಭಾಗದ ಗುರುಗಳಾದ ಪ್ರೊ.ಸ.ಚಿ.ರಮೇಶ್, ಪ್ರವಾಚಕರಾದ ಡಾ.ಮೊಗಳ್ಳಿ ಗಣೇಶ್, ಮುಖ್ಯಸ್ಥರಾದ ಡಾ.ಹೆಬ್ಬಾಲೆ ಕೆ.ನಾಗೇಶ್, ಡಾ.ಸಿ.ಟಿ.ಗುರುಪ್ರಸಾದ್, ಡಾ.ಹರಿಶ್ಚಂದ್ರ ದಿಗ್ಸಂಗೀಕರ್ ಮತ್ತು ಮಾನವಶಾಸ್ತ್ರ ವಿಭಾಗದ ಅಧ್ಯಾಪಕರಾದ ಡಾ.ತಾರಿಹಳ್ಳಿ ಹನುಮಂತಪ್ಪ ಡಾ.ಎಲ್.ಶ್ರೀನಿವಾಸ್ ಅವರಿಗೆ, ಸಿಬ್ಬಂದಿ ವರ್ಗದವರಾದ ವಿರುಪಾಕ್ಷಯ್ಯ, ಬಸವರಾಜು.ಸಿ ಮತ್ತು ನಬಿ ಇವರುಗಳಿಗೆ ನನ್ನ ಕೃತಜ್ಞತೆಗಳು.

ಅಧ್ಯಯನದ ಕಾಲಾವಧಿಯಲ್ಲಿ ಚರ್ಚೆ ಹಾಗೂ ಬರವಣಿಗೆಯಲ್ಲಿ ಸಹಕರಿಸಿದ ನನ್ನ ಸಹಪಾಠಿಗಳಾದ ಡಾ.ಲಕ್ಷ್ಮೀದೇವಿ, ಡಾ.ತಾರಾಮತಿ, ಸುಮಂಗಲಾ ಅತ್ತೀಗೇರಿ, ಸುನಂದ ಮೂಲಿಮನಿ, ಬಿ.ಕೃಷ್ಣವೇಣಿ, ಹೆಚ್.ಎಸ್.ಜಗದೀಶ್‌ಕುಮಾರ್, ಬಸವರಾಜು, ಗುರುರಾಜ್ ಮುಗಳಿ, ಸವಿತ, ನೇತ್ರ, ಓಬಯ್ಯ, ಇಸ್ಮಾಯಿಲ್ ಜಬ್ಬೀರ್, ಮಾರ್ಕಂಡೇಯ, ಬಿ.ಬಾಬು, ರಾಧಮ್ಮ, ಸುಮಲತಾ, ಎರಿಸ್ವಾಮಿ ಇವರುಗಳಿಗೆ ನನ್ನ ಕೃತಜ್ಞತೆಗಳು.

ನನ್ನ ವಿದ್ಯಾಭ್ಯಾಸಕ್ಕೆ ಮೊದಲಿನಿಂದಲೂ ಶ್ರಮಿಸುತ್ತಿರುವ ತಂದೆಯವರಾದ ಹೆಚ್.ಶ್ರೀನಿವಾಸ್‌ರಾವ್, ತಾಯಿ ಪದ್ಮಾವತಮ್ಮ, ಅಣ್ಣಂದಿರಾದ ಹೆಚ್.ಎಸ್.ಶ್ರೀಹರಿಪ್ರಸಾದ್, ಹೆಚ್.ಎಸ್.ಶ್ರೀಹರಪ್ರಸಾದ್, ಶ್ರೀತ್ರಿಮೂರ್ತಿಪ್ರಸಾದ್, ಅಕ್ಕಂದಿರಾದ ಸಾವಿತ್ರಿ ಪುರಾಣಿಕ್, ಗೀತಾಶ್ರೀ ರಾಘವೇಂದ್ರ ಮತ್ತು ಆದರ್ಶ, ನಮೃತ, ಭಾವಂದಿರಾದ ನರಹರಿ ಪುರಾಣಿಕ, ರಾಘವೇಂದ್ರ, ಮತ್ತು ಸ್ನೇಹಿತರಾದ ರವಿ, ಶ್ರೀಧರ, ಸೋಮಶೇಖರ್, ಜಿಲಾನ್, ಮತ್ತು ವೆಂಕಟೇಶ್ ಕ್ಷೇತ್ರ ಕಾರ್ಯದಲ್ಲಿ ನನಗೆ ಮಾಹಿತಿ ನೀಡಿ ಸಹಕರಿಸಿದ ಎಲ್ಲಾ ಮರಿಯಮ್ಮನಹಳ್ಳಿಯ ಕಲಾವಿದರಿಗೂ ಹಾಗೂ ವಕ್ತೃಗಳಿಗೆ ಕೃತಜ್ಞತೆಗಳು.

ಅಕ್ಷರ ಸಂಯೋಜಿಸಿದ ಮಾನಸ ಗ್ರಾಫಿಕ್ಸ್, ಹೆಚ್.ಪಿ.ಸಿ. ಹಾಗೂ ಬೈಂಡ್ ಮಾಡಿ ಕೊಟ್ಟ ಕ್ರಿಯೇಟರ್ಸ್ ಅವರುಗಳಿಗೆ ನನ್ನ ಕೃತಜ್ಞತೆಗಳು

ಗುರುಪ್ರಸಾದ್ ಹೆಚ್.ಎಸ್.

# ಪರಿವಿಡಿ


* ದೃಢೀಕರಣ ಪತ್ರ
* ಪ್ರಮಾಣ ಪತ್ರ
* ಅರಿಕೆ

ಅಧ್ಯಾಯ ೧: **ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ**

೧.೧: ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೧.೨: ಅಧ್ಯಯನದ ವಿಧಿ ವಿಧಾನಗಳು

೧.೩: ಇದುವರೆಗೂ ನಡೆದ ಅಧ್ಯಯನಗಳು

ಅಧ್ಯಾಯ ೨: **ಗ್ರಾಮದ ಸ್ವರೂಪ**

೨.೧: ಗ್ರಾಮದ ಪ್ರಾಚೀನತೆ – ಹೆಸರಿನ ಮೂಲ

೨.೨: ಗ್ರಾಮದ ಭೌತಿಕ ಮಾಹಿತಿಗಳು

೨.೩: ಮರಿಯಮ್ಮನಹಳ್ಳಿ ಹೋಬಳಿ ಸಂಬಂಧ ಪಟ್ಟ ಮಾಹಿತಿ

೨.೪: ಮರಿಯಮ್ಮನಹಳ್ಳಿ ವ್ಯಾಪ್ತಿಗೆ ಒಳಪಡುವ ಗ್ರಾಮಗಳು

೨.೫: ಸಮುದಾಯಗಳು

ಅಧ್ಯಾಯ ೩: **ಸಾಮಾಜಿಕ ಜೀವನ**

೩.೧: ಕುಟುಂಬ ಪದ್ಧತಿ

೩.೨: ಮನೆ ಕಟ್ಟಡ ಶೈಲಿ

೩.೩: ಆಹಾರ ಪದ್ಧತಿ

೩.೪: ನ್ಯಾಯ ಪದ್ಧತಿ

೩.೫: ಜನಪದ ವೈದ್ಯ

೩.೬: ಬೇಟೆ

೩.೭: ಕಲೆಗಳು

೩.೮: ಜನಪದ ಕ್ರೀಡೆಗಳು

೩.೯: ಗ್ರಾಮದ ದೈವಗಳು

ಅಧ್ಯಾಯ ೪: **ಆಚರಣೆಗಳು**

೪.೧: ಜೀವನಾವರ್ತನದ ಆಚರಣೆಗಳು

೪.೧.೧: ಸೀಮಂತಕಾರ್ಯ

೪.೧.೨: ನಾಮಕರಣ ಶಾಸ್ತ್ರ

೪.೧.೩: ಮುಂಜಿ, ಉಪನಯನ

೪.೧.೪: ಋತುಮತಿ
೪.೧.೫: ಮದುವೆ
೪.೧.೬: ಸಾವಿನ ಸಂದರ್ಭದ ಆಚರಣೆ
೪.೨: ವಾರ್ಷಿಕಾವರ್ತನದ ಆಚರಣೆ
೪.೨.೧: ಲೋಕಪ್ಪನ ಆಚರಣೆ
೪.೨.೨: ಹೇಲದಮ್ಮನ ಆಚರಣೆ
೪.೨.೩: ರಥದಮ್ಮ
೪.೨.೪: ಚಂಗಳೀಕಮ್ಮ ಮತ್ತು ಕ್ಯಾತಪ್ಪ
೪.೨.೫: ಗುಳೇದ ಲಕ್ಕಮ್ಮ
೪.೨.೬: ಗುಳೆ ಹೋಗುವುದು
೪.೨.೭: ಗರತಿ ದೇವರು
೪.೨.೮: ಯುಗಾದಿ
೪.೨.೯: ನಾಗರ ಪಂಚಮಿ
೪.೨.೧೦: ಗೋಕುಲಾಷ್ಟಮಿ
೪.೨.೧೧: ಗಣೇಶ ಚತುರ್ಥಿ
೪.೨.೧೨: ನೂಲು ಹುಣ್ಣಿಮೆ
೪.೨.೧೩: ಚೋಮಾಸ
೪.೨.೧೪: ಕ್ರಿಸ್‌ಮಸ್
೪.೨.೧೫: ದೀಪಾವಳಿ
೪.೨.೧೬: ದಸರಾ
೪.೨.೧೭: ಹೋಳಿಹಬ್ಬ
೪.೨.೧೮: ಬಕ್ರೀದ್
೪.೨.೧೯: ರಮ್‌ಜಾನ್
೪.೨.೨೦: ಈದ್‌ಮಿಲಾದ್
೪.೨.೨೧: ಮೊಹರಂ
೪.೨.೨೨: ಕಾರ ಹುಣ್ಣಿಮೆ
೪.೩: ನಂಬಿಕೆಗಳು
೪.೪: ವಿಧಿ-ನಿಷೇಧಗಳು

ಅಧ್ಯಾಯ ೫: ಆರ್ಥಿಕ ಜೀವನ
೫.೧: ಪಾರಂಪರಿಕ ಉದ್ಯೋಗಗಳು
೫.೨: ಅವಲಂಬಿತ ಉದ್ಯೋಗಗಳು

ಅಧ್ಯಾಯ ೬: ಸಾಹಿತ್ಯ ಮತ್ತು ಭಾಷೆ

೬.೧: ಜನಪದ ಕಥೆಗಳು

೬.೨: ಜನಪದ ಗೀತೆಗಳು

೬.೩: ಗಾದೆಗಳು

೬.೪: ಒಗಟುಗಳು

೬.೫: ಭಾಷೆ

ಅಧ್ಯಾಯ ೭: ರಾಜಕೀಯ ಜೀವನ

ಅಧ್ಯಾಯ ೮: ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳು

ಅಧ್ಯಾಯ ೯: ಉಪಸಂಹಾರ

ಅನುಬಂಧಗಳು

ಆಧಾರ ಗ್ರಂಥಗಳು

ವಕ್ತೃಗಳ ವಿವರ

ಛಾಯಚಿತ್ರಗಳು

## ಅಧ್ಯಾಯ ೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಜಾನಪದದ ಪರಿಕಲ್ಪನೆಗಳು ವಿಸ್ತರಗಣೆಗೊಳ್ಳುತ್ತಿರುವ ದಿನಗಳಲ್ಲಿ ಜಾನಪದ ಅಧ್ಯಯನದ ಒಂದು ಘಟಕವಾಗಿ ವಲಸಿಗರ ನೆಲೆ: ಮರಿಯಮ್ಮನಹಳ್ಳಿ ಸಂಕಥನ ಎಂಬ ಶೀರ್ಷಿಕೆಯೇ ನಮ್ಮ ಜಾನಪದ ಅಧ್ಯಯನದ ಒಂದು ಘಟ್ಟದಿಂದ ಇನ್ನೊಂದು ಘಟ್ಟಕ್ಕೆ ಬೆಳೆದು ನಿಂತು ಸಿಂಹಾವಲೋಕನ ನಡೆಸುತ್ತಿರುವುದರ ಸೂಚನೆಯಾಗುತ್ತದೆ. ಏಕೆಂದರೆ ಪ್ರಾರಂಭದ ದಿನಗಳಲ್ಲಿ ಜಾನಪದ ಅಧ್ಯಯನ ಕೇವಲ ಜನಪದ ಗೀತೆಗಳಿಗೆ ಮಾತ್ರ ಸೀಮಿತವಾಗಿತ್ತು. ನಂತರ ಬುಡಕಟ್ಟು ಜಾನಪದದತ್ತ ಹೊರಳಿ, ನಂತರ ನಗರ ಜಾನಪದದ ಪರಿಕಲ್ಪನೆ ಬಂದ ಈ ದಿನಗಳಲ್ಲಿ ಗ್ರಾಮ ಅಧ್ಯಯನಗಳು ನಮಗೆ ಪೂರಕವಾಗಿ ನಿಲ್ಲುತ್ತವೆ. ಆದ್ದರಿಂದ ಇವುಗಳ ಅಧ್ಯಯನ ನಡೆಯಬೇಕಾಗಿದೆ.

ಬುಡಕಟ್ಟು ಸಂಸ್ಕೃತಿಯಾಗಲಿ, ಗ್ರಾಮೀಣ ಸಂಸ್ಕೃತಿಯಾಗಲಿ, ನಾಗರೀಕ ಸಂಸ್ಕೃತಿಯಾಗಲಿ ವಾಸ್ತವ ಜಗತ್ತಿನಲ್ಲಿ ತಮ್ಮದೇ ಆದ ಶುದ್ಧ ಸಂಸ್ಕೃತಿಯನ್ನು, ಜಾನಪದವನ್ನು ಸಂಪೂರ್ಣ ಜೀವಂತವಾಗಿರಿಸಿಕೊಂಡಿದೆ ಎಂದು ಹೇಳಲಿಕ್ಕಾಗುವುದಿಲ್ಲ. ವೈಜ್ಞಾನಿಕ ಸಾಧನ, ಸಂಪರ್ಕಗಳಿಂದಾಗಿ ನಾಗರೀಕತೆಯ ಪ್ರಭಾವ ಗ್ರಾಮೀಣರ ಮೇಲೆ ಅಲ್ಲದೇ ಬುಡಕಟ್ಟು ಜನಪದರ ಮೇಲೂ ಆಗಿದೆ. ಅಂದರೆ ಗ್ರಾಮೀಣರು ಶುದ್ಧ ಗ್ರಾಮೀಣರಾಗಿ ಉಳಿದಿಲ್ಲ. ಹಾಗೆಯೇ ಮುಂದುವರೆದ ನಾಗರೀಕನ ಅಂತರಾಳದಲ್ಲಿ ಆದಿಮಾನವ ಅಡಗಿಕೊಂಡಿದ್ದಾನೆ. ಇದನ್ನು ಆತನ ಸಾಮಾಜಿಕ ಬದುಕು, ಜೀವನಾವೃತ್ತಿಯ ಆಚರಣೆ ಮತ್ತು ವಾರ್ಷಿಕಾವರ್ತನದ ಆಚರಣೆಗಳ ಮೂಲಕ ಗುರುತಿಸಬಹುದು. ಇದನ್ನೇ Palmer and Lloyd ಎಂಬ ವಿದ್ವಾಂಸರು "It is said that if you scratch civilization you find savage" ನಾಗರೀಕತೆಯನ್ನು ಕೆರೆದು ನೋಡಿದಾಗ ಅಲ್ಲಿ ಒಬ್ಬ ಅನಾಗರೀಕ ಕಾಣಿಸಿಕೊಳ್ಳುತ್ತಾನೆ (ಉದ್ಧೃತ : ಗೋವಿಂದರಾಜ ಟಿ., ೧೯೯೩, ಪು.೨) ಎಂದು ವಿವರಿಸುತ್ತಾನೆ.

ಎರಡು ಕಾರಣಗಳಿಂದ ಈಗ ಶಾಸ್ತ್ರೋಕ್ತವಾಗಿ ಭಾರತದ ಹಳ್ಳಿಗಳನ್ನು ಅಭ್ಯಾಸಿಸುವ ಅಗತ್ಯವಿದೆ. ಪ್ರಥಮ ಹಾಗೂ ಮುಖ್ಯ ಕಾರಣವೆಂದರೆ, ಭಾರತದ ಹಳ್ಳಿಗಳು ಈ ನಾಡಿನ ಪ್ರಾಚೀನ ಸಂಸ್ಕೃತಿಯನ್ನು ಆ ಸಂಸ್ಕೃತಿಯಲ್ಲಡಕವಾಗಿರುವ ಅಪೂರ್ವ ಮೌಲ್ಯಗಳನ್ನು ಕಾಲ ಪುರುಷನ ಕ್ರೂರದಬ್ಬಾಳಿಕೆಯಿಂದ ರಕ್ಷಿಸಿಕೊಂಡು ಬಂದಿವೆ. ಈ ಸಾಂಸ್ಕೃತಿಕ ಸಂಪತ್ತನ್ನು ಕಂಡು ಇಂದು ಔದ್ಯೋಗಿಕ ದೃಷ್ಟಿಯಿಂದ ಮುಂದುವರೆದಿರುವ ಪಶ್ಚಿಮ ಜಗತ್ತಿನ ಜನತೆಯು ಆಶ್ಚರ್ಯಪಟ್ಟಿದೆ. ನಾವು ಈ ವಿಶೇಷ ಅವಕಾಶಗಳನ್ನು ಬಳಸಿಕೊಂಡು ನಮ್ಮ ಜಾನಪದ ಅಧ್ಯಯನವನ್ನು ಇನ್ನಷ್ಟು ಗಟ್ಟಿಗೊಳಿಸಿಕೊಳ್ಳುವ ಪ್ರಯತ್ನ ಮಾಡಬೇಕಾಗಿದೆ.

ಭಾರತದ ಗ್ರಾಮಗಳು ಶಾಸ್ತ್ರೋಕ್ತವಾಗಿ ಅಭ್ಯಾಸಿಸುವ ಅಗತ್ಯವಿರುವಂತೆ ಬೆಳೆಯುತ್ತಿರುವ ನಗರಗಳಲ್ಲಿನ ಜಾನಪದವನ್ನು ಅಭ್ಯಾಸಿಸುವ ಅಗತ್ಯವಿದೆ. ಭಾರತದ ಸಣ್ಣ ಪಟ್ಟಣಗಳು ಶೀಘ್ರಗತಿಯಲ್ಲಿ ಅಸ್ತಿತ್ವವನ್ನು ಕಂಡುಕೊಳ್ಳುವ ಅವಶ್ಯಕತೆ ಜರೂರಾಗಿದೆ. ಹೀಗಿದ್ದರೂ ನಮ್ಮಲ್ಲಿ ಸಮಾಜವಿಜ್ಞಾನದ ಹಿನ್ನೆಲೆಯಲ್ಲಿ ನಗರ ಹಾಗೂ ಗ್ರಾಮಗಳ ಅಧ್ಯಯನ ನಡೆದಷ್ಟು ವ್ಯಾಪಕವಾಗಿ ನಗರ ಮತ್ತು ಗ್ರಾಮಗಳ ಕುರಿತು ಅಧ್ಯಯನ ನಡೆದಿಲ್ಲ. ಒಂದು ಕಾಲಕ್ಕೆ ಜನಪದ ಗೀತೆಗಳ ಸಂಗ್ರಹ ಕಾರ್ಯಕ್ಕಷ್ಟೇ ಸೀಮಿತವಾಗಿದ್ದ ಕರ್ನಾಟಕ ಜಾನಪದ ಕ್ಷೇತ್ರ, ಕಾಲಕಳೆದಂತೆ ಅದರ ಅಧ್ಯಯನ ಇತರ ಅಂಶಗಳ ಕಡೆಗೂ ಗಮನಹರಿಸಿತು. ಹಾಗಾಗಿ ಜಾನಪದದ ಬಗೆಗಿನ ಪರಿಕಲ್ಪನೆಗಳು ಇಂದು ಬಹಳಷ್ಟು ಬದಲಾಗಿವೆ. ಜಾನಪದ ಎಂದರೆ ಜನಪದ ಗೀತೆ, ಕಥೆ ಅಷ್ಟೇ ಎಂಬ ಮನೋಭಾವನೆ ಹೋಗಿ ಜಾನಪದದ ಎಲ್ಲಾ ಅಂಗ, ಉಪಾಂಗಗಳನ್ನು ಅದರ ಸಂಕೀರ್ಣತೆಯೊಂದಿಗೆ ಅಧ್ಯಯನ ಮಾಡಬೇಕೆಂಬ ಪ್ರವೃತ್ತಿ ಇಂದು ವಿಶೇಷವಾಗಿ ಕಂಡು ಬರುತ್ತದೆ. ಅಷ್ಟೇ ಅಲ್ಲ, ಜಾನಪದ ಕೇವಲ ಹಳ್ಳಿಗಳಲ್ಲಿ ಮಾತ್ರವಲ್ಲ, ಪಟ್ಟಣ ಮತ್ತು ನಗರಗಳಲ್ಲಿ ಇದೆ. ಎಲ್ಲಾ ವರ್ಗದ ಜನರಲ್ಲೂ ಇದೆ ಎಂಬ ವಿಶಾಲ ದೃಷ್ಟಿಕೋನ ಇಂದು ಲಭ್ಯವಾಗಿದೆ. ಅಂದರೆ ಸಂಸ್ಕೃತಿಯ ಅಧ್ಯಯನದಲ್ಲಿ ಬುಡಕಟ್ಟಿನ ಅಧ್ಯಯನದಷ್ಟೇ ನಗರ ಜೀವನದ ಅಧ್ಯಯನ, ಹಾಗೆಯೇ ಒಂದು ಗ್ರಾಮದ ಅಧ್ಯಯನವೂ ಅರ್ಥಪೂರ್ಣವಾಗುತ್ತದೆ. ಹಾಗಾಗಿ ಈಚಿನ ದಿನಗಳಲ್ಲಿ ಜಾನಪದದ ವಿದ್ಯಾರ್ಥಿಗಳು ಗ್ರಾಮ ಅಧ್ಯಯನದತ್ತ ವಾಲಿಕೊಳ್ಳುತ್ತಿದ್ದಾರೆ.

ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿರುವ ವಲಸಿಗರ ನೆಲೆ: ಮರಿಯಮ್ಮನಹಳ್ಳಿ ಸಂಕಥನಕ್ಕೆ ಪ್ರಾಚೀನವಾದ ಹಿನ್ನೆಲೆ ಇದ್ದಾಗಲೂ ಇತ್ತೀಚೆಗೆ ಕೆಲವು ಕಾರಣಗಳಿಂದ ಬೇರೆ ಬೇರೆ ಸ್ಥಳಗಳಿಂದ ಇಲ್ಲಿಗೆ ಬಂದು ನೆಲೆ ನಿಂತವರ ಸಂಖ್ಯೆಯೇ ಜಾಸ್ತಿ.

**ತುಂಗೆ-ಭದ್ರೆಯರ ಒಡಲು :**

ನಯನ ಮನೋಹರ ಚಿಕ್ಕಮಗಳೂರು ಜಿಲ್ಲೆಯ ಪಶ್ಚಿಮ ಘಟ್ಟಗಳ ಬೆಟ್ಟದಲ್ಲಿ ಹುಟ್ಟುವ ಅವಳಿ ಸಹೋದರಿಯರು ಹರಿ-ಹರಿಯುತ್ತಾ ತುಂಗೆ-ಭದ್ರೆಯರೆಂಬ ಹೆಸರು ಪಡೆಯುವರು, ತುಂಗೆಯು ಶೃಂಗೇರಿಯ ಶ್ರೀಶಾರದಾಂಬೆಯ ಪಾದದಡಿಗಳಲ್ಲಿ ಹರಿದರೆ ಭದ್ರೆಯು ಹಿಂದೂ-

ಮುಸ್ಲಿಂ ಸೌಹಾರ್ದ ಬೆಳಗಲು ಕಾರಣರಾದ ಬಾಬಾ ಮತ್ತು ಶ್ರೀದತ್ತರ ದರ್ಶನ ಪಡೆದು ಬುಡನಗಿರಿಯ ಬೆಟ್ಟಗಳ ಸಾಲಿನ ಬುಡದಲ್ಲಿ ಹರಿದು ಭದ್ರಾವತಿ, ಹೊಳೆ ಹೊನ್ನಾಳಿಗಳ ಮಾರ್ಗವಾಗಿ ಮುಂದೆ ಸಾಗುವಳು, ಇಬ್ಬರು ಸಹೋದರಿಯರು ಶಿವಮೊಗ್ಗದ ಕೂಡ್ಲಿಯ ಹತ್ತಿರ ಮತ್ತೆ ಒಂದಾಗಿ ಭೂತಾಯಿಯ ಮಡಿಲಿಗೆ ಹಸಿರಿನ ಹಂದರ ಹಾಕುತ್ತ ತಮ್ಮ ಎಡಬಲ ದಡಗಳಲ್ಲಿ ಶೈವ, ವೈಷ್ಣವ, ಶಾಕ್ತ ಹೀಗೆ ಹಲವಾರು ಪರಮ ಪುಣ್ಯಕ್ಷೇತ್ರಗಳಿಗೆ ಮತಗಳೆಂಬ ಬೇದಗಳಿಲ್ಲದೆ ಆಶ್ರಯ ನೀಡುವರು. ಪರಮಪಾವನೆಯಾದ ತುಂಗೆ-ಭದ್ರೆಯ ಮಡಿಲಲ್ಲಿ ಮಲಗಿದರೆ (ಸ್ನಾನ ಮಾಡಿದರೆ) ಮಾಡಿದ ಪಾಪವೆಲ್ಲ ಮುಕ್ತಿಯಾಗುವುದು. ತುಂಗೆ-ಭದ್ರೆಯ ದಡದಲ್ಲಿ ಮೈದೋರಿ ಇಳೆಗೆ ದಿವ್ಯತೆಯ ಬೆಳಕಾಗಿ ಬದುಕಿದ ಸಂತ ಮಹಾತ್ಮರ ಸಂಖ್ಯೆ ಅಗಣ್ಯ. ಲೋಕ ಪ್ರಸಿದ್ಧರಾದ ಅನೇಕ ವಿದ್ವನ್ಮಣಿಗಳು, ವಿವಿಧ ಕಲಾ ಪಂಡಿತರು, ವೀರ ವೀರಾದಿಗಳು, ಜಗತ್ ವಿಖ್ಯಾತ ಅರಸು ಮನೆತನಗಳು ಸ್ಥಾಪಿತಗೊಂಡಿದ್ದವು.

**ತುಂಗಯೋಜನೆ :**

ಚಿಕ್ಕಮಗಳೂರು ಜಿಲ್ಲೆಯ ಪಶ್ಚಿಮ ಘಟ್ಟಗಳ ವರಹ ಬೆಟ್ಟದ ಗಂಗಾ ಮೂಲ ಎಂಬಲ್ಲಿ ಹುಟ್ಟಿ ಹರಿಯುವ ತುಂಗೆಗೆ ಶಿವಮೊಗ್ಗ ತಾಲ್ಲೂಕಿನ ಗಾಜನೂರು ಎಂಬಲ್ಲಿ ಅಣೆಕಟ್ಟನ್ನು ಕಟ್ಟಲಾಗಿದೆ. ಗಚ್ಚಿನಿಂದ ಕಟ್ಟಲಾದ ಈ ಅಣೆಕಟ್ಟಿನ ಉದ್ದ ೩೫೦ಮೀಟರ್, ಅಗಲ ೧೮೦ಮೀಟರ್, ಮಣ್ಣಿನ ಕಟ್ಟೆಯನ್ನು ನದಿ ಪಾತ್ರಕ್ಕಿಂತ ೧೨.೬ ಮೀಟರ್ ಎತ್ತರದಲ್ಲಿ ಕಟ್ಟಲಾಗಿದೆ. ಆಣೆಕಟ್ಟೆಯಿಂದ ಎಡದಂಡೆ ಕಾಲುವೆ ೧೦೦ ಕಿ.ಮೀ ಮತ್ತು ಬಲದಂಡೆ ಕಾಲುವೆ ೫೩ ಕಿ.ಮೀ ಉದ್ದವಾಗಿದ್ದು, ಇವು ಶಿವಮೊಗ್ಗ ತಾಲೂಕು ಮತ್ತು ದಾವಣಗೆರೆ ಜಿಲ್ಲೆಯ ಹೊನ್ನಾಳು ತಾಲೂಕಿನ ೮,೭೦೦ಹೆಕ್ಟೇರ್ ಜಮೀನಿಗೆ ನೀರೊದಗಿಸುತ್ತವೆ.

**ಭದ್ರಾ ಯೋಜನೆ :**

ಭದ್ರಾ ಯೋಜನೆಯನ್ನು ಚಿಕ್ಕಮಗಳೂರು ಜಿಲ್ಲೆಯ ಲಕ್ಕವಳ್ಳಿ ಬಳಿ ಭದ್ರಾ ನದಿಗೆ ಅಡ್ಡಲಾಗಿ ಆಣೆಕಟ್ಟನ್ನು ಕಟ್ಟಿ ಭದ್ರಾ ಜಲಾಶಯವನ್ನು ನಿರ್ಮಿಸಲಾಗಿದೆ. ಈ ಆಣೆಕಟ್ಟಿನ ಉದ್ದ ೪೪೦ಮೀಟರ್, ಎತ್ತರ ೫೬ಮೀಟರ್, ಇದನ್ನು ನಿರ್ಮಿಸಲು ಒಟ್ಟು ೪೦.೮೧ಕೋಟಿ ರೂಪಾಯಿಗಳು ತಗುಲಿವೆ. ಈ ಯೋಜನೆಯ ಎಡದಂಡೆ ಕಾಲುವೆ ೭೭ ಕಿ.ಮೀ. ಮತ್ತು ಬಲದಂಡೆ ಕಾಲುವೆ ೧೦೦ ಕಿ.ಮೀ ಉದ್ದವಾಗಿವೆ. ಇವು ಚಿಕ್ಕಮಗಳೂರು ಶಿವಮೊಗ್ಗ, ದಾವಣಗೆರೆ, ಚಿತ್ರದುರ್ಗ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ೮,೫೦೦ಹೆಕ್ಟೇರ್ (ಎಡದಂಡೆ) ಮತ್ತು ೯೭,೭೦೦ ಹೆಕ್ಟೇರ್ (ಬಲದಂಡೆ) ಭೂಮಿಗೆ ನೀರು ಒದಗಿಸುತ್ತದೆ. ಇದರ ಜೊತೆಗೆ ೨೫ ಮೆ.ವ್ಯಾಟಿನ ವಿದ್ಯುತ್ತನ್ನು ಉತ್ಪಾದಿಸುತ್ತವೆ.

**ತುಂಗ-ಭದ್ರಾ ಆಣೆಕಟ್ಟು :**

ಮೆಸೋಪೊಟೇಮಿಯ, ಸಿಂಧೂಗಳಂತಹ ಅದೆಷ್ಟೋ ನಾಗರಿಕತೆಗಳು ನದಿ ಮುಖಜ ಭೂಮಿಯಲ್ಲಿ ನೆಲೆಗೊಂಡಿದ್ದವು ಎನ್ನುವುದು ಇತಿಹಾಸದ ಪುಟಗಳಿಂದ ತಿಳಿದುಬರುತ್ತದೆ. ಇದರಂತೆ

ತುಂಗ-ಭದ್ರಾ ನದಿ ದಡದ ಮೇಲೆ ಹೊಸಪೇಟೆ ನಗರವು ವಿಜಯನಗರದ ಅರಸರಿಂದ ಸ್ಥಾಪಿತವಾಯಿತು ಎನ್ನುವುದು ಶಾಸನಾಧಾರಗಳಿಂದ ತಿಳಿಯಬಹುದು. ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ ಹೊಸಪೇಟೆ ಇಂದು ತಾಲೂಕು ಕೇಂದ್ರ ಸ್ಥಳ. ಇಂದಿನ ಈ ಹೊಸಪೇಟೆ ಅಂದು ನಾಗಲಾಪುರವೆಂಬ ಪ್ರಾಚೀನ ಹೆಸರಿನಿಂದ ಪ್ರಸಿದ್ಧಿಯಾಗಿತ್ತು.

ತುಂಬಿ ಹರಿಯುವ ತುಂಗ-ಭದ್ರಾ ನದಿಯನ್ನು ವಿಜಯನಗರದ ಅರಸರು ಸೂಕ್ತರೀತಿಯಲ್ಲಿ ನೀರಾವರಿಗೆ ಬಳಸಿಕೊಂಡು, ಅನೇಕ ಕಡೆ ಕೆರೆ-ಕಾಲುವೆಗಳನ್ನು ನಿರ್ಮಿಸಿ ವ್ಯವಸಾಯಕ್ಕೆ ಅನುಕೂಲ ಮಾಡಿಕೊಟ್ಟಿದ್ದರು. ದೇಸಿ ಅರಸರ ಆಳ್ವಿಕೆಯ ನಂತರ ಬಂದ ಇಂಗ್ಲೀಷರು ಕನ್ನಡ ನಾಡಿಗೆ ಅನೇಕ ಮಹತ್ತರ ಕೊಡುಗೆಗಳನ್ನು ನೀಡಿದರು. ಇಂದಿನ ಹೊಸಪೇಟೆ ನಗರದ ಸಮೀಪಕ್ಕೆ ಕ್ರಿ.ಶ.೧೮೫೫ರಲ್ಲಿ ಸರ್ ಆರ್ಥರ್ ಕಾಟನ್‌ರಿಂದ ತುಂಗ-ಭದ್ರಾ ಆಣೆಕಟ್ಟಿನ ಅನುಮೋದನೆಯಾಯಿತು. ಇವರಿಂದ ಸೂಚಿತವಾದ ಈ ಯೋಜನೆ ಸುಮಾರು ಒಂದು ಶತಮಾನದ ಬಳಿಕ ಅಂದರೆ ೧೯೪೫ರಲ್ಲಿ ನಿರ್ಮಾಣ ಕಾರ್ಯಪ್ರಾರಂಭಿಸಿ ಕ್ರಿ.ಶ.೧೯೬೩ರಲ್ಲಿ ಆಣೆಕಟ್ಟು ಪೂರ್ಣಗೊಂಡಿತು.

**ತುಂಗ-ಭದ್ರಾ ಆಣೆಕಟ್ಟಿನ ಮಾಹಿತಿ (ಅಂಕಿ-ಅಂಶಗಳು)**

**೧. ಸ್ಥಳ**

| | | |
|---|---|---|
| ೧. ಅಕ್ಷಾಂಶ | : | ೭೬° ೨೦° ೧೦° |
| ೨. ರೇಖಾಂಶ | : | ೧೫°, ೧೫°, ೧೯° |
| ೩. ಸಮೀಪದ ಗ್ರಾಮ | : | ಮಲ್ಲಾಪುರ |
| ೪. ತಾಲೂಕು | : | ಹೊಸಪೇಟೆ |
| ೫. ಜಿಲ್ಲೆ | : | ಬಳ್ಳಾರಿ ಮತ್ತು ಕೊಪ್ಪಳ |
| ೬. ಸಂಬಂಧಪಟ್ಟ ರಾಜ್ಯಗಳು | : | ಕರ್ನಾಟಕ ಮತ್ತು ಆಂಧ್ರಪ್ರದೇಶ |
| ೭. ಕಾಮಗಾರಿ ಆರಂಭವಾದ ದಿನ | : | ೨೮ನೇ ಫೆಬ್ರವರಿ ೧೯೪೫ |
| ೮. ಕಾಮಗಾರಿ ಮುಗಿದ ದಿನ/ವರ್ಷ | : | ಬಲಭಾಗ ೧೯೫೦-೬೦ |
| | : | ಎಡಭಾಗ ೧೯೬೩-೬೪ |

**೨. ಯೋಜನೆಯ ಅಂದಾಜು ವೆಚ್ಚ (ರೂ.ಕೋಟಿಗಳಲ್ಲಿ)**

| | | |
|---|---|---|
| ೧. ಆಣೆಕಟ್ಟು | : | ೧೭.೯೮ |
| ೨. ಬಲದಂಡೆ ಮೇಲ್ಭಾಗದ ಕಾಲುವೆ | : | ೩೩.೨೨ |
| ೩. ಬಲದಂಡೆ ಕೆಳಮಟ್ಟದ ಕಾಲುವೆ | : | ೧೬.೨೭ |
| ೪. ಎಡದಂಡೆ ಮುಖ್ಯ ಕಾಲುವೆ | : | ೫೦.೦೦ |

೫. ವಿದ್ಯುತ್ ಉತ್ಪಾದನಾ ಘಟಕ : ೧೩.೭೬

: ೧೩೦.೭೬

೩. **ಜಲಾಶಯ :**

೧. ಜಲಾನಯನದ ಪ್ರದೇಶ : ೨೮.೧೬೭ ಚ.ಕಿ.ಮೀ

೨. ಅಣೆಕಟ್ಟಿನ ಜಲಾವೃತ ಪ್ರದೇಶ : ೩೭೮ ಚ.ಕಿ.ಮೀ

೩. ಒಟ್ಟು ನೀರಿನ ಸಾಮರ್ಥ್ಯ : ೩.೭೬೬ ಮಿ.ಘ.ಮೀಟರ್ (೩೩ ಟಿ.ಎಂ.ಸಿ)

೪. ನಿರುಪಯುಕ್ತ ಶೇಖರಣೆ : ೬೫ ಮಿ.ಘ.ಮೀ (೨-೩೦ ಟಿ.ಎಂ.ಸಿ)

೫. ಪ್ರಸ್ತುತ ಶೇಖರಣೆ ಸಾಮರ್ಥ್ಯ : ೩.೧೫೮ ಮಿಲಿಯನ್ ಘನ ಮೀಟರ್ (೧೧-೫೦೭ ಟಿ.ಎಂ.ಸಿ)

೪. **ಅಣೆಕಟ್ಟು :**

೧. ನಮೂನೆ ಮಧ್ಯ ಕಲ್ಲು, ಗಾರಿ ಮತ್ತು ಕಾಂಕ್ರೀಟ್‌ನಿಂದ ಕಟ್ಟಲಾಗಿದ್ದು, ಎಡಬದಿಯ ಮೊದಲನೆ ಭಾಗ ಮಣ್ಣಿನಿಂದ ಮತ್ತು ಎರಡನೆಯ ಭಾಗ ಸಂಯುಕ್ತ ಅಣೆಕಟ್ಟೆ

೨. ಒಟ್ಟು ಉದ್ದ : ೨೨೪೯ ಮೀ, (೮೦೩೫ ಅಡಿ)

೩. ನದಿ ತಳದಿಂದ ಸರಾಸರಿ ಎತ್ತರ : ೩೫-೩೬ ಮೀಟರ್ (೧೧೬ ಅಡಿ)

೪. ಪೂರ್ಣ ನೀರಿನ ಮಟ್ಟ : +೪೯೭ . ೭೪ ಮೀ (+೧೬೩೩ ಅಡಿ)

೫. ಹೊಸ್ತಿಲ್ ಮಟ್ಟ (ಸಿಲ್)

(i) ಎಡದಂಡೆ ಮುಖ್ಯ ಕಾಲುವೆ : +೪೭೫.೪೮ (+೧೫೬೦.೦೦ ಅಡಿ)

(ii) ಬಲದಂಡೆ ಕೆಳಮಟ್ಟದ ಕಾಲುವೆ : +೪೭೨.೪೪ (+೧೫೫೦.೦೦ ಅಡಿ)

(iii) ಬಲದಂಡೆ ಮೇಲ್ಮಟ್ಟದ ಕಾಲುವೆ: +೪೮೩.೧೧ (+೧೫೮೫.೦೦ ಅಡಿ)

೬. ಅಣೆಕಟ್ಟೆಯ ರಸ್ತೆಯ ಅಗಲ : ೬.೭೦ ಮೀ. (೨೨ ಅಡಿ)

೭. ಅಣೆಕಟ್ಟೆಯ ಬುನಾದಿ ಅಗಲ : ೨೮.೫೦ ಮೀ. (೯೩.೫)

೫. **ಕೋಡಿದಾರಿ :**

೧. ಸ್ಥಳ : ಮಧ್ಯದಲ್ಲಿ

೨. ಉದ್ದ : ೭೦೧ ಮೀ

೩. ನೀರು ಬಿಡುಗಡೆ ಸಾಮರ್ಥ್ಯ: ೧೮.೪೦೮ (೬.೫೦ ಲಕ್ಷ ಕ್ಯೂಸೆಕ್ಸ್) (ಸೆಕೆಂಡಿಗೆ ಘನ ಅಡಿಗಳಲ್ಲಿ)

೪. ಬಾಗಿಲುಗಳ ಸಂಖ್ಯೆ : ೩೩

೫. ಬಾಗಿಲು ಹೊಸ್ತಿಲು ಮಟ್ಟ : +೪೯೧.೬೪ (+೧೬೧೩ ಅಡಿ)

**೬. ವಿದ್ಯುತ್ ಉತ್ಪಾದನೆ :**

೧. ಆಣೆಕಟ್ಟೆಯ ಬಲದಂಡೆ : ೯ ಮೆಗಾವ್ಯಾಟಿನ ೪ ಘಟಕ

೨. ಹಂಪಿ ಘಟಕ : ೯ ಮೆಗಾವ್ಯಾಟಿನ ೪ ಘಟಕ
(ಆಣೆಕಟ್ಟೆಯಿಂದ ೨೧ ಕಿ.ಮೀ)

೩. ಆಣೆಕಟ್ಟೆಯ ಎಡದಂಡೆ : ೯ ಮೆಗಾವ್ಯಾಟಿನ ೪ ಘಟಕ.

೪. ಒಟ್ಟು ವಿದ್ಯುತ್ ಉತ್ಪಾದನೆ : ೯೯ ಮೆಗಾವ್ಯಾಟ್

**೭. ಮುಳುಗಡೆ ಪ್ರದೇಶ :**

೧. ಒಟ್ಟು ಕ್ಷೇತ್ರ : ೩೪.೯೨೩ ಹೆ (೮೬.೯೨೩ ಎಕರೆ)

೨. ಭಾದಿತ ಹಳ್ಳಿಗಳ ಸಂಖ್ಯೆ : ೯೦

೩. ನಿರ್ವಸಿತ ಜನಸಂಖ್ಯೆ : ೫೪.೪೩೨

| ಕಾಲುವೆಗಳು | ಉದ್ದ | ಸಾಮರ್ಥ್ಯ |
|---|---|---|
| ೧. ಎಡದಂಡೆ ಮುಖ್ಯ ಕಾಲುವೆ | : ೨೨೭ ಕಿ.ಮೀ | ೭೦೦೦ ಕ್ಯೂಸೆಕ್ಸ್ |
| ೨. ಎಡದಂಡೆ ಮೇಲ್ಮಟ್ಟದ ಕಾಲುವೆ | : ೧೫ ಕಿ.ಮೀ | ೨೫೦೦ ಕ್ಯೂಸೆಕ್ಸ್ |
| ೩ ಬಲದಂಡೆ ಕೆಳಮಟ್ಟದ ಕಾಲುವೆ | : ೨೫೧ ಕಿ.ಮೀ | ೨೫೦೦ ಕ್ಯೂಸೆಕ್ಸ್ (ತು.ಭ.ಮಂಡಳಿ ಸರಹದ್ದು) |
| ೪. ಬಲದಂಡೆ ಮೇಲ್ಮಟ್ಟದ ಕಾಲುವೆ | : ೧೫೦ ಕಿ.ಮೀ | ೪೦೦೦ ಕ್ಯೂಸೆಕ್ಸ್ (ತು.ಭ.ಮಂಡಳಿಸರಹದ್ದು) |

**ನೀರಾವರಿ ಕ್ಷೇತ್ರ ಕರ್ನಾಟಕ ಆಂಧ್ರಪ್ರದೇಶ :**

| | | |
|---|---|---|
| ೧. ಎಡದಂಡೆ ಮುಖ್ಯ ಕಾಲುವೆ : | ೨,೪೩.೯೦೦ ಹೆಕ್ಟರ್ | --- |
| ೨. ಎಡದಂಡೆ ಮೇಲ್ಮಟ್ಟದ ಕಾಲುವೆ : | ೪೬೮ ಹೆಕ್ಟರ್ | --- |
| ೩. ಬಲದಂಡೆ ಕೆಳಮಟ್ಟದ ಕಾಲುವೆ : | ೩೭.೫೦೩ ಹೆಕ್ಟರ್ | ೬೩.೫೨೨ ಹೆಕ್ಟರ್ |
| ೪. ಬಲದಂಡೆ ಮೇಲ್ಮಟ್ಟದ ಕಾಲುವೆ : | ೮೦.೯೦೮ ಹೆಕ್ಟರ್ | ೭೬.೯೩೭ ಹೆಕ್ಟರ್ |

**ಕೃಷ್ಣ- ಜಲವಿವಾದದ ನ್ಯಾಯಪೀಠದ ತೀರ್ಪಿನಂತೆ ನೀರು ಹಂಚಿಕೆ (ಟಿ.ಎಂ.ಸಿಗಳಲ್ಲಿ)**

| ಕಾಲುವೆಗಳ ವಿವರ | ಕರ್ನಾಟಕ | ಆಂಧ್ರಪ್ರದೇಶ | ಒಟ್ಟು |
|---|---|---|---|
| ೧. ಎಡದಂಡೆ ಮುಖ್ಯ ಕಾಲುವೆ ಮತ್ತು ಮೇಲ್ಮಟ್ಟದ ಕಾಲುವೆ | ೯೩.೦೦ | --- | ೯೩.೦೦ |
| ೨. ಬಲದಂಡೆ ಕೆಳಮಟ್ಟದ ಕಾಲುವೆ | ೧೯.೦೦ | ೨೪.೦೦ | ೪೩.೦೦ |
| ೩. ಬಲದಂಡೆ ಮೇಲ್ಮಟ್ಟದ ಕಾಲುವೆ | ೧೭.೫೦ | ೩೨.೫೦ | ೫೦.೦೦ |

| | | | |
|---|---|---|---|
| ೪. ರಾಯ ಮತ್ತು ಬಸವಣ್ಣ ಕಾಲುವೆ | ೭.೦೦ | --- | ೭.೦೦ |
| ೫. ವಿಜಯನಗರ ಕಾಲುವೆಗಳು (ರಾಯ ಮತ್ತು ಬಸವಣ್ಣ ಹೊರತುಪಡಿಸಿ) | | | |
| ೬. ಕರ್ನೂಲ-ಕಡಪ | --- | ೧೦.೦೦ | ೧೦.೦೦ |
| ೭. ರಾಜೋಲಿ ಬಂಡ ಯೋಜನೆಗೆ | ೦.೪೯ | ೬.೫೧ | ೭.೦೦ |
| | ೧೩೮.೯೯ | ೭೩.೦೧ | ೨೧೨.೦೦ |
| ೮. ಜಲಾಶಯದಿಂದ ಆವಿಯಾಗಿ ಹೋಗುವ ನೀರಿನ ಪ್ರಮಾಣ | ೧೨.೫೦ | ೫.೫೦ | ೧೮.೦೦ |
| ಒಟ್ಟು | ೧೫೧.೪೯ | ೭೮.೫೧ | ೨೩೦.೦೦ |

ತುಂಗ-ಭದ್ರಾ ನಿರ್ಮಾಣಗೊಂಡ ಆಣೆಕಟ್ಟಿನ ಹಿನ್ನೀರಿನಲ್ಲಿ ಬಸಾಪುರ, ಗೌರೀಪುರ, ಬೆನಕಾಪುರ, ಕುಂದರಗಡ್ಡಿ, ನಾರಾಯಣ ದೇವರ ಕೆರೆಗಳಂತಹ ಒಟ್ಟು ತೊಂಬತ್ತು ಗ್ರಾಮಗಳು ಮುಳುಗಡೆಯಾದವು. ಬಹುಮುಖ್ಯವಾಗಿ ೧೯೫೩ರಲ್ಲಿ ತುಂಗಾಭದ್ರ ಅಣೆಕಟ್ಟು ಕಟ್ಟುವ ಸಂದರ್ಭದಲ್ಲಿ ಡ್ಯಾಂನ ನೀರಿನಲ್ಲಿ ಸುಮಾರು ೩೬ ಹಳ್ಳಿಗಳು ಮುಳುಗಡೆಯಾದವು. ಇಂತಹ ಹಳ್ಳಿಗಳಿಂದ ವಲಸೆ ಬಂದಂತಹ ಜನರು ಸುತ್ತಮುತ್ತಲ ಪ್ರದೇಶದಲ್ಲಿ ನೆಲೆ ಕಂಡುಕೊಂಡರು. ಅಂತಹ ನೆಲೆ ಕಂಡುಕೊಂಡಂತಹ ಪ್ರದೇಶಗಳಲ್ಲಿ ಮರಿಯಮ್ಮನಹಳ್ಳಿ ವಿಶಿಷ್ಟ ಸ್ಥಾನ ಪಡೆದುಕೊಂಡಿದೆ. ಮರಿಯಮ್ಮನಹಳ್ಳಿಯಲ್ಲಿ ಸುಮಾರು ನಾಲ್ಕಾರು ಹಳ್ಳಿಯ ಜನರು ವಲಸೆ ಬಂದು ವಾಸಿಸುತ್ತಿದ್ದಾರೆ. ಮರಿಯಮ್ಮನಹಳ್ಳಿ ರಾಷ್ಟ್ರೀಯ ಹೆದ್ದಾರಿ ೧೩ರ ಪಕ್ಕದಲ್ಲಿದ್ದು ಹೊಸಪೇಟೆ ತಾಲ್ಲೂಕು ಬಳ್ಳಾರಿ ಜಿಲ್ಲೆಗೆ ಸೇರಿದೆ. ಈ ಗ್ರಾಮಕ್ಕೆ ಮೊದಲಿನಿಂದಲೂ ಸಾಂಸ್ಕೃತಿಕವಾಗಿ ವಿಶಿಷ್ಟ ಸ್ಥಾನವಿದೆ. ಇಲ್ಲಿ ಹವ್ಯಾಸಿ ರಂಗಕಲಾವಿದರು ಮನೆಗೆ ಒಬ್ಬರಂತೆ ಸಿಗುತ್ತಾರೆ. ಅದಕ್ಕಾಗಿ ಇದನ್ನು ಮರಿಯಮ್ಮನಹಳ್ಳಿ ಕಲಾಗ್ರಾಮ ಎಂದು ಕರೆಯುವರು ಬಯಲಾಟದ ರಂಗಕಲಾವಿದರು, ಸಣ್ಣಾಟ ಕಲಾವಿದರು, ಹೀಗೆ ಇದೊಂದು ರೀತಿಯಲ್ಲಿ ಕಲಾವಿದರ ಬೀಡಾಗಿದೆ. ರಾಷ್ಟ್ರೀಯ ಹೆದ್ದಾರಿ ೧೩ರ ಪಕ್ಕದಲ್ಲಿ ಬರುವುದರಿಂದ ನಾಗರೀಕತೆಯ ದಟ್ಟ ಪ್ರಭಾವವು ಇದ್ದು ಮುಂಚಿನ ಧೋರಣೆಗಳು ಬದಲಾಗಿ ಬೇರೊಂದು ತೆರನಾದ ಸಂಸ್ಕೃತಿ ಇಂದು ಈ ಹಳ್ಳಿಯಲ್ಲಿ ರೂಪುಗೊಳ್ಳುತ್ತಿದೆ. ಅಲ್ಲದೆ ನಾಗರೀಕತೆಯ ಪ್ರಭಾವ ಜನಪದರ ಮೇಲೆ ಆದಂತೆ ಹೊಸ ಹೊಸ ಅಂಶಗಳು ಸೇರ್ಪಡೆಯಾಗುತ್ತಿವೆ. ಹಾಗಾಗಿ ಆಂತರಿಕದಲ್ಲಿ ಗ್ರಾಮೀಣತೆಯನ್ನು, ಬಾಹ್ಯದಲ್ಲಿ ನಾಗರೀಕತೆಯನ್ನು ತೋರುತ್ತಾ ಒಂದು ರೀತಿಯಲ್ಲಿ ಅರೆಬೆಂದ ಆಹಾರದಂತಿದೆ. ಹಾಗಾಗಿ ಇಂತಹ ಅಧ್ಯಯನಕ್ಕೆ ಕೇವಲ ಜಾನಪದ ಶಿಸ್ತಿನ ಚೌಕಟ್ಟು ಕೆಲವೊಮ್ಮೆ ಸಾಲದೆನಿಸುತ್ತದೆ.

೧೯೫೩ರಲ್ಲಿ ತುಂಗಾಭದ್ರ ನದಿಗೆ ಅಡ್ಡಲಾಗಿ ನಾರಾಯಣದೇವರಕೆರೆ ಊರಿನ ಹತ್ತಿರ ಅಣೆಕಟ್ಟು ನಿರ್ಮಿಸಲಾಯಿತು. ನಾರಾಯಣದೇವರಕೆರೆ ಮತ್ತು ಸುತ್ತಮುತ್ತಲಿನ ೩೩ ಹಳ್ಳಿಗಳು

ಮುಳುಗಡೆಯಾದವು. ಈ ಪ್ರದೇಶದಲ್ಲಿ ವಾಸವಾಗಿದ್ದಂತಹ ಜನಸಮುದಾಯಗಳು ಮರಿಯಮ್ಮನಹಳ್ಳಿ ಮತ್ತು ಸುತ್ತಮುತ್ತಲಿನ ಹಳ್ಳಿಗಳಲ್ಲಿ ನೆಲೆ ನಿಂತರು. ತಮ್ಮ ಮೂಲ ನೆಲೆಯಲ್ಲಿನ ಆಚರಣೆ, ಸಂಸ್ಕೃತಿ, ಜೀವನ ಶೈಲಿ, ಕಟ್ಟಡ ಶೈಲಿ, ಮನೆ–ವಾಸ್ತು, ಪಾರಂಪರಿಕ ವೃತ್ತಿ ಮುಂತಾದ ಮೂಲ ಸ್ಮೃತಿಗಳನ್ನು ತಾವು ಈಗ ನೆಲೆ ನಿಂತ ಪ್ರದೇಶದಲ್ಲಿ ಮುಂದುವರಿಸಿಕೊಂಡು ಬರುತ್ತಿದ್ದಾರೆ. ಮರಿಯಮ್ಮನಹಳ್ಳಿಯಲ್ಲಿ ವಿವಿಧ ಸಮುದಾಯದವರ ಸಂಘರ್ಷ ಹಾಗೂ ಸಮನ್ವಯತೆಯಿಂದ ಮಿಶ್ರ ಸಂಸ್ಕೃತಿಯು ಕಂಡು ಬರುತ್ತದೆ. ವಲಸೆ ಬಂದಂತಹ ಸಮುದಾಯದವರ ಆಚರಣೆಗಳು ಮತ್ತು ಇಲ್ಲಿಯ ನಿವಾಸಿಗಳು ಆಚರಿಸುವಂತಹ ಆಚರಣೆಗಳಲ್ಲಿ ಭಿನ್ನತೆ ಕಂಡುಬಂದರೂ, ಒಟ್ಟಾರೆ ನೋಡಿದಾಗ ಸಮ್ಮಿಶ್ರ ಸಂಸ್ಕೃತಿಯನ್ನು ಕಾಣಬಹುದಾಗಿದೆ. ಜಾನಪದ ಅಂಶಗಳು ಕಾಲದಿಂದ ಕಾಲಕ್ಕೆ ಪರಂಪರೆಯಿಂದ ಪರಂಪರೆಗೆ ಹರಿಯುವಾಗ ಮಾರ್ಪಾಡನ್ನು ಹೊಂದುತ್ತಾ ಬರುತ್ತವೆ. ಯಾವುದೇ ಸಾಹಿತ್ಯವಾಗಲಿ ಕಾಲಕ್ಕನುಗುಣವಾಗಿ ಬದಲಾವಣೆ ಆಗುತ್ತಲೇ ಇರುತ್ತದೆ. ಇಲ್ಲದೆ ಹೋದರೆ ಅದು ತನ್ನ ಜೀವಂತಿಕೆಯನ್ನು ಕಳೆದುಕೊಳ್ಳುತ್ತದೆ.

## ೧.೧. ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ :

ಪ್ರಸ್ತುತ ಅಧ್ಯಯನದಲ್ಲಿ ಮರಿಯಮ್ಮನಹಳ್ಳಿ ಪರಿಸರದಲ್ಲಿ ಮೂಲದಿಂದ ನೆಲೆಸಿರುವ ಮತ್ತು ಆಣೆಕಟ್ಟು ಕಟ್ಟಿದ ನಂತರ ಮುಳುಗಡೆಯಾದ ಪ್ರದೇಶದಿಂದ ಬಂದಂತಹ ಸಮುದಾಯದವರ ಪರಿಸರ, ಸಂದರ್ಭ ಹಾಗೂ ಸಮನ್ವಯವನ್ನು ಸಾಧಿಸಿ ಬಾಳುತ್ತಿರುವುದನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಆಚರಣೆ ಸಂಪ್ರದಾಯ ಮುಂತಾದ ಸಂದರ್ಭಗಳಲ್ಲಿ ಈಗಲೂ ಅಂದರೆ ಸಮನ್ವಯತೆಯಿಂದ ಬಾಳುತ್ತಿದ್ದಾಗಲೂ ಸಹ ಬದಲಾವಣೆಗಳಿರುವುದನ್ನು ಗಮನಿಸಲಾಗಿದೆ. ವಿಷಯದ ಶೀರ್ಷಿಕೆಗೆ ತಕ್ಕಂತೆ ಮರಿಯಮ್ಮನಹಳ್ಳಿ ಒಂದು ಕಡೆ ವಲಸಿಗರ ನೆಲೆಯಾಗಿದ್ದಾಗಲೂ ಇನ್ನೊಂದು ಕಡೆ ವಲಸೆ ಬಂದಂತವರು ಮತ್ತು ಮೂಲದಲ್ಲಿ ಇದ್ದಂಥವರು ಬೇರೆ ಕಡೆ ವಲಸೆ ಹೋಗುತ್ತಿರುವುದನ್ನು ಕಾಣುತ್ತೇವೆ. ಹಾಗೆಯೇ ಸುತ್ತಮುತ್ತಲು ಸ್ಟೀಲ್ ಫ್ಯಾಕ್ಟರಿಗಳು ಬಂದಿರುವುದರಿಂದ ಅಲ್ಲಿಗೆ ಕೆಲಸಕ್ಕಾಗಿ ಬಂದಿರುವ ಉತ್ತರ ಭಾರತದವರು ಹಾಗೂ ದಕ್ಷಿಣದ ಬೇರೆ ಬೇರೆ ರಾಜ್ಯಗಳವರು ಇಲ್ಲಿ ಬಂದು ವಾಸಿಸುವುದನ್ನು ಕಾಣುತ್ತೇವೆ.

ಆಧುನಿಕತೆ ಹಾಗೂ ಜಾಗತೀಕರಣದ ಹಿನ್ನೆಲೆಯಲ್ಲಿ ಮೂಲದಲ್ಲಿರುವ ಪ್ರತಿಯೊಂದು ಅಂಶಗಳು ನಿಧಾನವಾಗಿ ಬದಲಾವಣೆಗೊಳಗಾಗುತ್ತಿರುವುದನ್ನು ಗಮನಿಸಲಾಗಿದೆ. ಒಟ್ಟಾರೆ ಇದೊಂದು ಗ್ರಾಮ ಅಧ್ಯಯನವಾಗಿದ್ದು ಗ್ರಾಮದ ಎಲ್ಲಾ ಸಮುದಾಯದವರು ಜನ ಜೀವನದ ಅಂಶಗಳನ್ನು ಕ್ರೋಢೀಕರಿಸುವುದರ ಜೊತೆಗೆ ಅಲ್ಲಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಈ ಅಧ್ಯಯನದಲ್ಲಿ ಮುಖ್ಯವಾಗಿ ಗ್ರಾಮದ ಸ್ವರೂಪ ಅಂದರೆ ಗ್ರಾಮಗಳ ವಿಸ್ತೀರ್ಣ, ಜನಸಂಖ್ಯೆ, ಕೌಟುಂಬಿಕ ನೆಲೆ, ಭೌಗೋಳಿಕ, ಚಾರಿತ್ರಿಕ ಹಿನ್ನಲೆ ಮುಂತಾದವುಗಳ ಜೊತೆಗೆ ಅವರ ಸಾಮಾಜಿಕ ಜೀವನ, ಅವರ ಆಚರಣಾ ಲೋಕಗಳು, ಅವರ ದೈವಗಳು, ಆರ್ಥಿಕ ಜೀವನ, ಸಾಮಾಜಿಕ ಜೀವನ, ಅವರಲ್ಲಿರುವ ಜನಪದ ಮತ್ತು ಶಿಷ್ಟ ಸಾಹಿತ್ಯ, ಅವರ ಭಾಷೆ, ಸಾಂಸ್ಕೃತಿಕ ಸಂಘರ್ಷ ಮತ್ತು ಸಮನ್ವಯಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇದೊಂದು ರೀತಿಯಲ್ಲಿ ಒಟ್ಟಾರೆ ಆ ಗ್ರಾಮದ ಸಾಂಸ್ಕೃತಿಕ ಅಧ್ಯಯನವಾಗಿದೆ.

ಪ್ರಸ್ತುತ ಅಧ್ಯಯನವು ಮರಿಯಮ್ಮನಹಳ್ಳಿಗೆ ಸೀಮಿತವಾಗಿದ್ದು, ಅಧ್ಯಯನದ ಸಂದರ್ಭಕ್ಕೆ ತಕ್ಕಂತೆ ಸುತ್ತಮುತ್ತಲಿನ ಗ್ರಾಮಗಳ ಮಾಹಿತಿಗಳನ್ನು ಸಹ ತೆಗೆದುಕೊಳ್ಳಲಾಗಿದೆ.

**೧.೨. ಅಧ್ಯಯನದ ವಿಧಿ-ವಿಧಾನಗಳು :**

ಪ್ರಸ್ತುತ ಅಧ್ಯಯನಕ್ಕೆ ಮರಿಯಮ್ಮನಹಳ್ಳಿಯಲ್ಲಿ ವಾಸವಾಗಿರುವ ಮಾಹಿತಿದಾರರಿಂದ ಮಾಹಿತಿಗಳನ್ನು ಪಡೆಯಲಾಗಿದೆ.

ಮಾಹಿತಿಗಳ ಸಂಗ್ರಹಕ್ಕೆ ಅವಲೋಕನ, ಪ್ರಶ್ನಾವಳಿ ಹಾಗೂ ಸಂದರ್ಶನ ವಿಧಾನಗಳನ್ನು ಅಳವಡಿಸಲಾಗಿದೆ. ಮರಿಯಮ್ಮನಹಳ್ಳಿಯ ಮಾಹಿತಿ ಸಂಗ್ರಹಣೆಯಲ್ಲಿ ಮಾಹಿತಿದಾರರೊಂದಿಗೆ ಪ್ರಶ್ನೆಗಳನ್ನು ಕೇಳುವ ಮುಖಾಂತರ ಹಾಗೂ ಅವರೊಂದಿಗೆ ಚರ್ಚಿಸುವ ಮುಖಾಂತರ ಕ್ರೋಢೀಕರಿಸಲಾಗಿದೆ. ಕೆಲವೊಂದು ಆಚರಣೆ ಹಾಗೂ ಜಾತ್ರೆಯ ಆಚರಣೆಗಳಲ್ಲಿ ಭಾಗವಹಿಸುವ ಮುಖಾಂತರ ಮಾಹಿತಿ ಸಂಗ್ರಹಿಸಲಾಗಿದೆ. ಹೀಗೆ ಆಚರಣೆಗಳಲ್ಲಿ ಭಾಗವಹಿಸುವಾಗ ಆಚರಣೆಯ ಹಿನ್ನೆಲೆ, ಉದ್ದೇಶ, ಪ್ರಸ್ತುತ ಸಂದರ್ಭದ ಬದಲಾವಣೆ ಮುಂತಾದವುಗಳನ್ನು ಭಾಗವಹಿಸಿದ್ದ ಮಾಹಿತಿದಾರರೊಂದಿಗೆ ಚರ್ಚಿಸಿ, ವಿವಿಧ ಸಂದರ್ಭದ ಆಚರಣೆಗಳನ್ನು ಛಾಯಾಚಿತ್ರ ಹಾಗೂ ರೆಕಾರ್ಡ್ ಮಾಡುವ ಮೂಲಕ ಮಾಹಿತಿಗಳನ್ನು ಪಡೆಯಲಾಗಿದೆ. ಈ ಮಾಹಿತಿಗಳೆಲ್ಲವೂ ಮರಿಯಮ್ಮನಹಳ್ಳಿ ಕುರಿತಂತಹುಗಳಾಗಿವೆ. ಒಟ್ಟಾರೆ ಕ್ಷೇತ್ರ ಕಾರ್ಯವು ಈ ಅಧ್ಯಯನಕ್ಕೆ ಪ್ರಧಾನವಾದ ಮಾಹಿತಿಗಳನ್ನು ಒದಗಿಸಿದೆ. ಹಾಗಾಗಿ ಇದೊಂದು ಕ್ಷೇತ್ರಕಾರ್ಯಾಧಾರಿತ ಅಧ್ಯಯನವೆನ್ನಬಹುದು.

ಅಧ್ಯಯನದ ಉದ್ದೇಶಗಳಿಗೆ ಮತ್ತು ಸಂಶೋಧನೆಗೆ ಅವಶ್ಯಕ ಮಾಹಿತಿ ಮತ್ತು ವಿಷಯಗಳನ್ನು ಸಂಗ್ರಹಿಸಲು ಈ ಕೆಳಗಿನ ಅಧ್ಯಯನ ವಿಧಾನ ಹಾಗೂ ಸಾಧನೆಗಳ ಸಹಾಯ ಪಡೆಯಲಾಗಿದೆ.

೧. ಸಂದರ್ಶನ ಮತ್ತು ಪ್ರಶ್ನಾವಳಿ ವಿಧಾನ

೨. ಅವಲೋಕನ ವಿಧಾನ

೩. ಔಪಚಾರಿಕ ಸಂದರ್ಶನಗಳು

೪. ಅನೌಪಚಾರಿಕ ಸಂದರ್ಶನಗಳು

೫. ಧ್ವನಿ ಮುದ್ರಿಕೆ ಯಂತ್ರ

೬. ಕ್ಯಾಮೆರಾ

ಮಾಹಿತಿಗಳನ್ನು ಸಂಗ್ರಹಿಸಲು ಈ ಕೆಳಕಂಡವರಿಂದ ಮಾಹಿತಿಗಳನ್ನು ಪಡೆಯಲಾಯಿತು.

೧. ಜನಪದ ಮಾಹಿತಿದಾರರು

೨. ಕಲಾವಿದರು

೩. ಸಾಹಿತಿಗಳು

೪. ವಿದ್ವಾಂಸರು

೫. ಅರ್ಚಕರು

೬. ಮಠಾಧೀಶರು

೭. ಅಧಿಕಾರಿಗಳು

೮. ಸ್ಥಳೀಯ ರಾಜಕಾರಣಿಗಳು

ಎರಡನೆಯದಾಗಿ ಪ್ರಸ್ತುತ ಅಧ್ಯಯನಕ್ಕೆ ಈಗಾಗಲೇ ಪ್ರಕಟಿತ ಗ್ರಂಥಗಳು, ಗ್ಯಾಸೆಟಿಯರ್‌ಗಳು, ಹಾಗೂ ಇತರೆ ದಾಖಲೆಗಳಿಂದ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಅಗತ್ಯಕ್ಕೆ ತಕ್ಕಂತೆ ಅಧ್ಯಯನದ ವಿಶ್ಲೇಷಣೆಯಲ್ಲಿ ಉಪಯೋಗಿಸಿಕೊಳ್ಳಲಾಗಿದೆ. ಇದರ ಜೊತೆಗೆ ಹುಲಿಗೆಮ್ಮನ ಬಗೆಗೆ ತಿಳಿದುಕೊಂಡಿರುವ ಹಿರಿಯ ಮಾಹಿತಿದಾರರು ಹಾಗೂ ವಿದ್ವಾಂಸರೊಂದಿಗೆ ಚರ್ಚಿಸಿ ಅಧ್ಯಯನ ಮಾಡಲಾಗಿದೆ. ಇದೊಂದು ಮಾಹಿತಿ ಪ್ರಧಾನವಾದ ಅಧ್ಯಯನವಾಗಿದ್ದು, ಅಲ್ಲಲ್ಲಿ ಅಗತ್ಯಕ್ಕೆ ತಕ್ಕಂತೆ ವಿಶ್ಲೇಷಣೆಯನ್ನು ಮಾಡಲಾಗಿದೆ.

ಆಚರಣೆಗಳ ಸಂದರ್ಭದಲ್ಲಿ ಗ್ರಾಮದಲ್ಲಿರುವ ಎಲ್ಲಾ ಸಮುದಾಯಗಳ ಜೀವನದ ಜೀವನಾವರ್ತನದ ಹಾಗೂ ವಾರ್ಷಿಕಾವರ್ತನದ ಆಚರಣೆಗಳು, ನಂಬಿಕೆ, ವಿಧಿ-ನಿಷೇಧಗಳನ್ನು ಕುರಿತು ಚರ್ಚಿಸಲಾಗಿದೆ. ಮರಿಯಮ್ಮನಹಳ್ಳಿಯಲ್ಲಿರುವ ಪಾರಂಪರಿಕ

ಉದ್ಯೋಗಗಳು ಯಾವುವು ಮತ್ತು ಅವುಗಳ ಸ್ಥಿತಿಗತಿ ಮತ್ತು ಅವುಗಳನ್ನು ನಂಬಿದವರ ಸಮುದಾಯಗಳ ಸ್ಥಿತಿಗತಿಗಳನ್ನು ಚರ್ಚಿಸಲಾಗಿದೆ.

ಭಾರತದಲ್ಲಿ ಗ್ರಾಮೀಣ ಕೈಗಾರಿಕೆಗಳು ನಾಗರೀಕತೆ ಭಾರತಕ್ಕೆ ಕಾಲಿಟ್ಟಾಗಿನಿಂದಲೂ ನಶಿಸುತ್ತಲೇ ಹೊರಟಿವೆ. ಜೊತೆಗೆ ಇತ್ತೀಚಿನ ಜಾಗತೀಕರಣದಿಂದಾಗಿ ಇನ್ನೂ ಮೂಲೆಗುಂಪಾಗುತ್ತಿವೆ. ಈ ಸ್ಥಿತಿ ಮರಿಯಮ್ಮನಹಳ್ಳಿಗೆ ತಪ್ಪಿಲ್ಲ. ಹಾಗಾಗಿ ಈ ಉದ್ಯೋಗಗಳನ್ನು ನಂಬಿದವರು ತಮ್ಮ ಜೀವನಕ್ಕೆ ಸರಿಯಾದ ಜೀವನಾಧಾರಕ್ಕೆ ಸವಲತ್ತುಗಳಿಲ್ಲದೆ ಮೈನ್ಸ್ ಕೆಲಸ, ಹಾಗೂ ಕಟ್ಟಡ ಕಾರ್ಮಿಕರಾಗಿ, ಬೇರೆ ಬೇರೆ ಉದ್ಯೋಗಗಳನ್ನರಸಿ ತಮ್ಮ ನೆಲೆಯನ್ನು ಬಿಟ್ಟು ಬೇರೆ ನೆಲೆಗಳಿಗೆ ವಲಸೆ ಹೋಗುತ್ತಿದ್ದಾರೆ. ಇದರ ಬಗೆಗೆ ಸೂಕ್ಷ್ಮವಾಗಿ ಅಧ್ಯಯನ ಮಾಡಲಾಗಿದೆ.

ಮರಿಯಮ್ಮನಹಳ್ಳಿಯಲ್ಲಿ ಸಿಗುವ ಜನಪದ ಸಾಹಿತ್ಯ, ಶಿಷ್ಟ ಸಾಹಿತ್ಯಗಳನ್ನು ಸಂಗ್ರಹಿಸಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹಾಗೆಯೇ ಮರಿಯಮ್ಮನಹಳ್ಳಿ ಸಮುದಾಯದವರು ಮಾತನಾಡುವ ಭಾಷೆಗಳನ್ನು ಕುರಿತು ಚರ್ಚಿಸಲಾಗಿದೆ. ಸಾಮಾನ್ಯವಾಗಿ ಮರಿಯಮ್ಮನಹಳ್ಳಿಯಲ್ಲಿ ತಮ್ಮ ಮಾತೃಭಾಷೆಯಾದ ಕನ್ನಡದ ಜೊತೆಗೆ ಹಿಂದಿ, ತೆಲುಗು, ರಾಜಸ್ತಾನಿ, ಇಂಗ್ಲೀಷ್, ಬಿಹಾರಿ ಮುಂತಾದ ಯಾವುದಾದರೊಂದು ಭಾಷೆಯನ್ನು ಕಲಿತಿರುವುದು ಸಾಮಾನ್ಯವಾಗಿದೆ.

ಮರಿಯಮ್ಮನಹಳ್ಳಿಗೆ ೧೯೫೦ರ ದಶಕದಿಂದಲೂ ಬೇರೆ ಬೇರೆ ಗ್ರಾಮಗಳಿಂದ ವಲಸೆ ಬಂದ ಸಮುದಾಯದವರು ಸರಕಾರದ ಅನುಕೂಲಕ್ಕಾಗಿ ಈಗಲೂ ಕಾಯುತ್ತಿದ್ದಾರೆ. ಆದರೆ ನಮ್ಮ ಘನ ಸರಕಾರ ಇದುವರೆಗೂ ವಲಸೆ ಬಂದಂತಹ ಸಮುದಾಯದವರಿಗೆ ಯಾವುದೇ ರೀತಿಯ ಸವಲತ್ತುಗಳನ್ನು ಕೊಡದೆ ಅತಂತ್ರರಾಗಿ ಬದುಕುವಂತೆ ನೋಡಿಕೊಳ್ಳುತ್ತಿದೆ. ಹಾಗಾಗಿ ೧೯೫೦ರ ದಶಕದಲ್ಲಿ ವಲಸೆ ಬಂದಂತಹ ಬಹುಪಾಲು ಕುಟುಂಬಗಳು ಮತ್ತೊಂದೆಡೆಗೆ ವಲಸೆ ಹೋಗುತ್ತಿದ್ದಾರೆ. ಒಂದು ಉದಾಹರಣೆಯನ್ನು ಕೊಡುವುದಾದರೆ;

'ಸಮುದ್ರದ ನಂಟಸ್ತನ ಇದ್ದರೂ, ಉಪ್ಪಿಗೆ ಬಡತನ' ಎಂಬ ಸ್ಥಿತಿ ಇಲ್ಲಿಯ ಜನರದು. ಈಗಿನ ೨೫ ಸಾವಿರ ಜನಸಂಖ್ಯೆಯ ಮರಿಯಮ್ಮನಹಳ್ಳಿಗೆ ನೀರುಣಿಸಬಹುದಾದ ಈ ಭಾಗದಲ್ಲೇ ದೊಡ್ಡದಾದ ಡಣಾಯಕನಕೆರೆಗೆ ತುಂಗಭದ್ರಾ ನದಿಯ ನೀರು ಹರಿಸುವ ಯೋಜನೆಗೆ ಸರಕಾರದಿಂದ ಅನುಮೋದನೆ ದೊರೆತಿದ್ದರೂ ಇಲ್ಲಿಯ ರಾಜಕೀಯ ಸಂಘರ್ಷದಿಂದಾಗಿ ಇನ್ನೂ ಚಾಲನೆ ನೀಡಲಾಗಿಲ್ಲ.

ಅಷ್ಟಕ್ಕೂ ನೀರು ಇಲ್ಲಿಯೂ ಹರಿದಿದ್ದರೆ, ಇಲ್ಲಿಯ ಜನರಿಗೆ ಉಪಯೋಗವಾಗುತ್ತಿತ್ತು ಎಂಬ ಮಾತು ಅನ್ವಯಿಸುವುದು ಜಮೀನು ಇದ್ದವರಿಗೆ ಮಾತ್ರ. ಜಮೀನಿಲ್ಲದ, ಇದ್ದರೂ

ತುಂಡುಭೂಮಿ ಇರುವವರ ಸಂಖ್ಯೆಯೇ ಇಲ್ಲಿ ಜಾಸ್ತಿ. ಇವರಲ್ಲಿ ಬಹುಪಾಲು ನಾಯಕ, ಬೆಸ್ತ, ಈಡಿಗ, ಕಮ್ಮಾರ, ಮುಸ್ಲಿಂ, ಹೊಲೆ, ಮಾದಿಗ ಮುಂತಾದ ಹಿಂದುಳಿದ ಜಾತಿಗಳಿಗೆ ಸೇರಿದವರು. ಪರಿಶಿಷ್ಟ ಬುಡಕಟ್ಟಿನ ನಾಯಕ ಸಮುದಾಯದವರಂತೂ ಇಲ್ಲಿ ದಟ್ಟವಾಗಿದ್ದಾರೆ. ಕೂಲಿ ಅರಸುತ್ತಿದ್ದ ಈ ಸಮುದಾಯದ ಮಹಿಳೆಯರಲ್ಲಿ ಕೆಲವರಿಗೆ ದೊರೆತದ್ದೇ ಈ ಹೊಟ್ಟೆಪಾಡಿನ ಕಲಾ ವೃತ್ತಿ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯರು ಹೀಗೆ ಮುಂದೆ ಬರಲು ಸಾಧ್ಯವಾದದ್ದಾದರೂ ಹೇಗೆ? ಕಲಾವಿದೆಯಾಗಿ ಒಂದು ವ್ಯಕ್ತಿತ್ವವನ್ನು ಗಳಿಸಿಕೊಳ್ಳಲು ಸಾಧ್ಯವಾದದ್ದಾದರೂ ಹೇಗೆ? ಒಂದು ಅರ್ಥದಲ್ಲಿ ಈ ಸಮುದಾಯದಲ್ಲಿರುವ ದೇವದಾಸಿ ಪದ್ಧತಿಯೇ ಕಲಾವಿದೆಯಾಗಲು ಕಾರಣವಾಯಿತು. ದೇವದಾಸಿ ಎಂದರೆ ವೇಶ್ಯಾವೃತ್ತಿಯಲ್ಲ. ನಾಯಕ ಹಾಗೂ ಬೆಸ್ತ ಸಮುದಾಯದಲ್ಲಿ ಮಾತ್ರ ಪರಂಪರಾಗತವಾಗಿ ಬಂದಿರುವ ಈ ಪದ್ಧತಿಯನ್ನು ಕೆಲವು ಕುಟುಂಬಗಳು ಅನುಸರಿಸುತ್ತಿದ್ದವು. ದೇವದಾಸಿಯಾದ ಮಹಿಳೆ ಕುಟುಂಬದ ಪುರುಷ ಸದಸ್ಯರಿಗೆ ಸಮಾನ ಸ್ಥಾನ ಪಡೆಯುತ್ತಾಳೆ. ಆಸ್ತಿ ಇದ್ದರೆ ಅದರಲ್ಲಿ ಆಕೆಗೂ ಸಮಪಾಲು ದೊರೆಯುತ್ತದೆ. ತನ್ನ ಬಾಳ ಸಂಗಾತಿಯಾಗಿ ಯಾರನ್ನಾದರೂ ಆರಿಸಿಕೊಳ್ಳಲು ಆಕೆಗೆ ಸ್ವಾತಂತ್ರ್ಯ ಇದೆ. ಇಬ್ಬರ ಮಧ್ಯೆ ಹೊಂದಾಣಿಕೆ ಆಗದಿದ್ದರೆ ವಿಚ್ಛೇದನಕ್ಕಿರುವ ಕಟ್ಟುಪಾಡುಗಳು ಕಡಿಮೆ. ಗೃಹಿಣಿಯಾಗಿ ಗಂಡನ ಮನೆ ತುಂಬುವ ಹೆಣ್ಣಿಗಿಲ್ಲದ ಸ್ವಾತಂತ್ರ್ಯ ದೇವದಾಸಿಗಿದೆ. ಮಹಿಳೆ ಕಲಾವಿದೆಯಾಗಬೇಕಾದರೆ, ಪುರುಷನಿಂದ ಆಕೆಗೆ ಅಡ್ಡಿ–ಆತಂಕಗಳು ಬರಕೂಡದು. ದೇವದಾಸಿಯಾಗುವುದರಿಂದ ಇಂತಹ ಸ್ವಾತಂತ್ರ್ಯ ಲಭಿಸುತ್ತದೆ. ಇದೇ ಕಾರಣಕ್ಕೆ ತನ್ನ ವೈಯಕ್ತಿಕ ಬದುಕಿನಲ್ಲಿ ಸದಾ ಅಭದ್ರತೆಯಲ್ಲಿ ತೊಳಲಾಡುವುದು ಇದರ ಇನ್ನೊಂದು ಮುಖ. ದೇವದಾಸಿಯನ್ನು ವೇಶ್ಯೆಯೆಂದು ಸಮೀಕರಿಸುವುದರಿಂದ ಈ ಪದ್ಧತಿಯನ್ನು ಅರ್ಥ ಮಾಡಿಕೊಂಡಂತಾಗುವುದಿಲ್ಲ. ವೇಶ್ಯೆ ಯಾರಾದರೂ ಆಗಬಹುದು. ದೇವದಾಸಿಯೇ ಆಗಬೇಕೆಂದೇನೂ ಇಲ್ಲ. ಈ ಪದ್ಧತಿ ಆಚರಿಸುತ್ತಿದ್ದ ಕೆಲ ಕುಟುಂಬಗಳು ಈಗೀಗ ಕೈ ಬಿಡುತ್ತಿವೆ. ಹಾಗಾಗಿ ಮಹಿಳಾ ಕಲಾವಿದರೂ ಕಡಿಮೆಯಾಗುತ್ತಿದ್ದಾರೆ.

ಜೊತೆಗೆ ಈ ಗ್ರಾಮದಲ್ಲಿ ಈಗಲೂ ಮೈನಿಂಗ್‌ನಲ್ಲಿ ಕೆಲಸ ಮಾಡಲು ಬೇರೆ ಬೇರೆ ರಾಜ್ಯಗಳ ಸಮುದಾಯಗಳು ಇಲ್ಲಿ ನೆಲೆ ಕಂಡುಕೊಳ್ಳುತ್ತಿದ್ದಾರೆ. ಹಾಗಾಗಿ ಇದೊಂದು ವಲಸಿಗರ ತಾಣವಾಗಿ ಮಾರ್ಪಟ್ಟಂತಿದೆ. ಹೀಗಿರುವ ಮರಿಯಮ್ಮನಹಳ್ಳಿ ಸಮುದಾಯಗಳ ಸಾಮಾಜಿಕ, ಆರ್ಥಿಕ, ಸ್ಥಿತ್ಯಂತರಗಳನ್ನು ಸೂಕ್ಷ್ಮವಾಗಿ ಗಮನಿಸಲು ಪ್ರಯತ್ನಿಸಲಾಗಿದೆ. ಜೊತೆಗೆ ಈ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ಸಹ ಕೊಡಲಾಗಿದೆ.

## ೧.೩. ಇದುವರೆಗೂ ನಡೆದ ಅಧ್ಯಯನಗಳು :

ಮರಿಯಮ್ಮನಹಳ್ಳಿಯ ಬಗೆಗೆ ದೊರೆಯುವ ಸಾಹಿತ್ಯವನ್ನು ಅವಲೋಕಿಸಿದಾಗ ನಾವು ಎರಡು ದೃಷ್ಟಿಯಿಂದ ಇಲ್ಲಿನ ಸಾಹಿತ್ಯವನ್ನು ಅವಲೋಕಿಸಬಹುದು. ಒಂದು ಇಲ್ಲಿ ನೆಲೆಸಿರುವ ನಾರಾಯಣ ದೇವರ ಕೆರೆಯ ಜನರ ಕುರಿತಾದ ಸಾಹಿತ್ಯವಾದರೆ, ಇನ್ನೊಂದು ಮರಿಯಮ್ಮನ ಹಳ್ಳಿಯ ರಂಗಭೂಮಿ ಕುರಿತಾದ ಸಾಹಿತ್ಯ. ಕೆಲವು ಸಾಹಿತ್ಯಗಳು ಇಲ್ಲಿಯವರ ಸಂಪಾದಕತ್ವದಲ್ಲಿ ರಚನೆಯಾದರೆ, ಇನ್ನೂ ಕೆಲವು ವಿದ್ವಾಂಸರು ಈ ಊರಿನ ಬಗ್ಗೆ ಅಧ್ಯಯನ ನೆಡೆಸಿ ರಚಿಸಿದ ಸಾಹಿತ್ಯವಾಗಿದೆ. ಶ್ರೀ ದ್ರುವ ನಾರಾಯಣರು ಬರೆದ "ನಾರಾಯಣ ದೇವರ ಕೆರೆ" ಎಂಬ ಕೃತಿಯು ಮರಿಯಮ್ಮನ ಹಳ್ಳಿಯಲ್ಲಿ ನೆಲೆಸಿರುವ ನಾಣಿಕೇರಿ ಜನರ ಆ ಊರಿನ ಸಾಂಸ್ಕೃತಿಕ ಸಂಬಂಧವನ್ನು ಕುರಿತು ಹೇಳುವಂತಹ ಕೃತಿಯಾಗಿದೆ. ಇವರು ನಾಣಿಕೇರಿ ಊರಿನ ಗತವೈಭವನ್ನು ಕುರಿತು ಹೇಳಿದ್ದಾರೆ. ೧೯೭೯ರಲ್ಲಿ ಇದನ್ನು ಪ್ರಕಟಿಸಿದ್ದಾರೆ.

೧೯೯೯ರಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯದವರು ಪ್ರಕಟಿಸಿದ 'ಕಲಾ ಗ್ರಾಮ ಮರಿಯಮ್ಮನ ಹಳ್ಳಿ' ಎಂಬ ಕೃತಿಯನ್ನು ಶ್ರೀ ಗುಡಿಹಳ್ಳಿ ನಾಗರಾಜ್ ಬರೆದಿದ್ದಾರೆ. ಈ ಕೃತಿಯಲ್ಲಿ ಮರಿಯಮ್ಮನಹಳ್ಳಿಯಲ್ಲಿರುವ ಜನಪದ ಕಲೆಗಳು, ಕರಕುಶಲ ಕಲೆಗಳ ಬಗ್ಗೆ, ರಂಗಭೂಮಿಯ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಿದ್ದಾರೆ. ೧೯೯೯ರಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯದವರು ಪ್ರಕಟಿಸಿದ ಕೆ.ನಾಗರತ್ನಮ್ಮನವರ ಆತ್ಮ ಚರಿತ್ರೆಯಾದ 'ಮರಿಯಮ್ಮನಹಳ್ಳಿ ರಂಗಸಿರಿ' ಎಂಬ ಕೃತಿಯನ್ನು ಶ್ರೀ ಗುಡಿಹಳ್ಳಿ ನಾಗರಾಜ್ ಅವರು ರಚಿಸಿದ್ದಾರೆ. ಈ ಕೃತಿಯಲ್ಲಿ ರಂಗಭೂಮಿ ಕಲಾವಿದೆಯಾದ ಕೆ.ನಾಗರತ್ನಮ್ಮನವರ ಬದುಕು–ಬರಹ ಕುರಿತಾಗಿದೆ.

೨೦೦೩ರಲ್ಲಿ ಮರಿಯಮ್ಮನಹಳ್ಳಿಯ ಶ್ರೀ ಹರಿ ಪ್ರಿಯ ಪ್ರಕಾಶನದವರು 'ನೋಡು ಬಾ ನಮ್ಮೂರ' (ನಾಣಿಕೇರಿ–ಮರಿಯಮ್ಮನಹಳ್ಳಿ)ಎಂಬ ಕೃತಿಯನ್ನು ಜಿ.ವಿ.ಸುಬ್ಬರಾವ್ ಮತ್ತು ಹೆಚ್.ಎಸ್.ಶ್ರೀಹರ ಪ್ರಸಾದ್ ಅವರ ಸಂಪಾದಕತ್ವದಲ್ಲಿ ಪ್ರಕಟಿಸಿದ್ದಾರೆ. ಕೃತಿಯನ್ನು ಮರಿಯಮ್ಮನ ಹಳ್ಳಿಗೆ ನಾಣಿಕೇರಿ ಜನರು ಬಂದು ನೆಲೆಸಿದ ೫೦ ವರ್ಷದ ನೆನಪಿಗಾಗಿ ಈ ಕೃತಿಯನ್ನು ಪ್ರಕಟಿಸಿದ್ದಾರೆ. ಇದರಲ್ಲಿ ಐವತ್ತು ವರ್ಷದಲ್ಲಿ ಆಗಿ ಹೋದಂತಹ ಬದಲಾವಣೆ ಬಗ್ಗೆ, ತಮ್ಮ ಮೂಲ ಊರಿನ ನೆನಪುಗಳ ಬಗ್ಗೆ, ತಮಗೆ ಸರ್ಕಾರ ಇಲ್ಲಿ ಬಂದು ನೆಲೆಸಿದ ಸಂದರ್ಭದಲ್ಲಿ ನೀಡಿದ ಭರವಸೆಗಳ ನಿರ್ಲಕ್ಷದ ಬಗ್ಗೆ, ರಂಗಭೂಮಿ ಬಗ್ಗೆ ವಿವಿಧ ಲೇಖಕರು ಲೇಖನವನ್ನು ಬರೆದಿದ್ದಾರೆ.

# ಅಧ್ಯಾಯ ೨

## ಗ್ರಾಮದ ಸ್ವರೂಪ

ಧಾರವಾಡ ನಗರದ ಬಗ್ಗೆ ಒಂದು ತಮಾಷೆಯ ಮಾತಿದೆ, ಈ ನಗರದ ಯಾವುದಾದರೂ ಬೀದಿಯಲ್ಲಿ ನಿಂತು ಕಲ್ಲೆಸೆದರೆ, ಅದು ಒಬ್ಬ ಸಾಹಿತಿ ಅಥವಾ ಒಬ್ಬ ಪ್ರಾಧ್ಯಾಪಕ, ಕನಿಷ್ಠ ಪಕ್ಷ ಒಬ್ಬ ವಿದ್ಯಾರ್ಥಿ ತಲೆಯ ಮೇಲೆ ಬೀಳುತ್ತದೆ ಎಂದು. ಧಾರವಾಡ ಶೈಕ್ಷಣಿಕ ಹಾಗೂ ಸಾಹಿತ್ಯಿಕ ಕೇಂದ್ರವಾಗಿರುವುದರಿಂದ ಈ ರೀತಿ ಪ್ರತೀತಿಯಾಗಿದೆ. ಹಾಗೆಯೇ ಮರಿಯಮ್ಮನಹಳ್ಳಿಯ ಒಂದು ಬೀದಿಯಲ್ಲಿ ನಿಂತು ಕಲ್ಲೆಸೆದರೆ ಅದು ಒಬ್ಬ ಕಲಾವಿದನಿಗೆ (ಈ ಕಲಾವಿದ ನಟ–ನಟಿ, ವಾದ್ಯ ಸಂಗೀತಗಾರ, ಬಯಲಾಟದ ಭಾಗವತ, ಚಿತ್ರ ಕಲಾವಿದ ಯಾರಾದರೊಬ್ಬರಾಗಿರುತ್ತಾರೆ) ತಾಗುತ್ತದೆ ಎಂದು ಹೇಳಬಹುದಾದಷ್ಟು ಜನ ಕಲಾವಿದರು ಈ ಊರಿನಲ್ಲಿದ್ದಾರೆ. ಇಂತಹ ಹೋಲಿಕೆಗಳಲ್ಲಿ ಉತ್ಪ್ರೇಕ್ಷೆ ಇರಬಹುದು. ಆದರೆ ಇತರ ಊರುಗಳಿಗಿಂತ ಈ ಊರುಗಳು ಕೆಲವು ವಿಷಯಗಳಲ್ಲಾದರೂ ಭಿನ್ನ ಎಂಬ ಕಾರಣಕ್ಕೆ ಈ ಹೋಲಿಕೆಗಳನ್ನು ತಳ್ಳಿ ಹಾಕಲಾಗುವುದಿಲ್ಲ.

ಈ ಮರಿಯಮ್ಮನಹಳ್ಳಿ ತುಂಗಭದ್ರಾ ನದಿ ಅಣೆಕಟ್ಟಿನ ಬದಿಯಲ್ಲೇ ನೆಲೆ ನಿಂತಿದೆ. ೧೯೫೨ರಲ್ಲಿ ತುಂಗಾಭದ್ರಾ ಅಣೆಕಟ್ಟನ್ನು ಕಟ್ಟುವಾಗ ಈ ಭಾಗದ ಅನೇಕ ಹಳ್ಳಿಗಳು ಮುಳುಗಡೆಯಾದವು. ಇವುಗಳ ಪೈಕಿ ಈ ಪ್ರಾಂತದಲ್ಲೇ ದೊಡ್ಡದಾದ, ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಶ್ರೀಮಂತವಾಗಿದ್ದ ನಾಣಿಕೆರೆಯೂ (ನಾರಾಯಣ ದೇವರ ಕೆರೆ) ಒಂದು. ಈ ನಾಣಿಕೆರೆಯ ಜನ ಸುತ್ತಲಿನ ಸುರಕ್ಷಿತ ಹಳ್ಳಿಗಳಿಗೆ ವಲಸೆ ಹೋದರು. ಆದರೆ ವಾಣಿಜ್ಯದಲ್ಲಿ ಆಸಕ್ತಿಯುಳ್ಳ ಜನ ನಗರ ಯೋಗ್ಯತೆಯ ಹೊಸಪೇಟೆಗೆ ಮುಖ ಮಾಡಿದರೆ; ಕಲೆ, ಸಾಂಸ್ಕೃತಿಕ ವಿಷಯಗಳಲ್ಲಿ ಆಸಕ್ತಿ ತಾಳಿದ್ದ ಜನ ನೆರೆಯ ಮರಿಯಮ್ಮನಹಳ್ಳಿ ಎಂಬ ಹಳ್ಳಿಗೆ ಹರಿದುಹೋದರು. ತಮ್ಮ ಮೂಲ ಊರಿನ ಸಾಂಸ್ಕೃತಿಕ ಪರಂಪರೆಯನ್ನು ಇಲ್ಲಿಯೂ ಮುಂದುವರಿಸಿದರು.

ರಾಷ್ಟ್ರೀಯ ಹೆದ್ದಾರಿ-೧೩ರಲ್ಲಿ ಬೆಂಗಳೂರಿನಿಂದ ಹೊಸಪೇಟೆಗೆ ಹೊರಟಾಗ ಅಥವಾ ಹರಿಹರದಿಂದ ರಾಜ್ಯ ಹೆದ್ದಾರಿಯಲ್ಲಿ ಹೊಸಪೇಟೆಗೆ ಹೊರಟಾಗ ಹೊಸಪೇಟೆ ಇನ್ನೇನು ಬಂತು ಎನ್ನುವಾಗಲೇ ಬಲ ಬದಿಯಲ್ಲಿ ಅದಿರು ಕಾರ್ಖಾನೆಗಳು, ಮ್ಯಾಂಗನೀಸ್ ಕಲ್ಲುಗಳನ್ನು ತನ್ನ ಒಡಲೊಳಗೆ ಇಟ್ಟುಕೊಂಡಿರುವ ಚಿಕ್ಕ ಚಿಕ್ಕ ಬೆಟ್ಟಗಳ ರಾಶಿ ಗೋಚರವಾದರೆ, ರಸ್ತೆಯ ಎಡ ಬದಿಯಲ್ಲಿ ಭೋರ್ಗರೆವ ತುಂಗಭದ್ರಾ ನದಿಯನ್ನು ತಡೆದು ನಿಲ್ಲಿಸಿದ ಅಣೆಕಟ್ಟು ಕಣ್ಮನ ಸೆಳೆಯುತ್ತದೆ. ಪ್ರಕೃತಿಯ ಈ ಸಿರಿ ಸಂಪತ್ತು ನಮ್ಮ ಮನಃ ಪಟಲದ ಮುಂದೆ ಬರುವುದಕ್ಕೆ ಸ್ವಲ್ಪ ಮುಂಚಿತವಾಗಿ ಒಂದು ಊರು ನಮಗೆ ತಾಗುತ್ತದೆ. ಅದೇ ಬಳ್ಳಾರಿ ಜಿಲ್ಲೆ ಹೊಸಪೇಟೆ ತಾಲ್ಲೂಕಿನ ಮರಿಯಮ್ಮನಹಳ್ಳಿ. ತುಂಗಭದ್ರಾ ನದಿಯಷ್ಟೇ ಈ ಊರು ಹೆಸರುವಾಸಿ ತನ್ನ ಕಲಾ ಸಂಪತ್ತಿಗಾಗಿ. ಕನ್ನಡ ರಂಗಭೂಮಿಗೆ ಈ ಊರು ನೀಡಿದ ಕಾಣಿಕೆ ಅಮೂಲ್ಯವಾದುದು. ಕಂಪನಿ ನಾಟಕಗಳು (ಪಾರ್ಸಿ ರಂಗಭೂಮಿ) ಕರ್ನಾಟಕದಲ್ಲಿ ನೆಲೆಯೂರಿದ (೧೯ನೇ ಶತಮಾನದ ಕೊನೆಯಲ್ಲಿ ೧೮೮೦ರ ಸುಮಾರಿಗೆ) ನಂತರ ಸುಮಾರು ೩ ದಶಕಗಳ ಕಾಲ ಮಹಿಳೆಯರು ರಂಗ ಪ್ರವೇಶ ಮಾಡಿರಲಿಲ್ಲ. ಮಹಿಳೆ ಮೊಟ್ಟ ಮೊದಲು ಮುಖಕ್ಕೆ ಬಣ್ಣ ಹಾಕಿದ್ದು ಈ ಶತಮಾನದ ಮೊದಲ ದಶಕದಲ್ಲಿ. ವಿಜಾಪುರ ಜಿಲ್ಲೆ ಗುಳೇದಗುಡ್ಡದ ಯಲ್ಲೂಬಾಯಿ ಪ್ರಥಮ ಮಹಿಳಾ ನಟಿ ಎನಿಸಿದಳು. ನಂತರ ಸುಮಾರು ಒಂದು ದಶಕದ ಕಾಲ ಮತ್ತೆ ನಾಟಕದಲ್ಲಿ ಅಭಿನಯಿಸಲು ಮಹಿಳೆಯರ ಕೊರತೆ ಇತ್ತು. ಈ ಕೊರತೆಯನ್ನು ತುಂಬಿ ಮೊದಲ ತಲೆಮಾರಿನ ನಟಿಯರೆಂದು ನಾಡಿನಾದ್ಯಂತ ಖ್ಯಾತಿ ಪಡೆದವರು ಈ ಊರಿನ (ಈಗಿನ ಮರಿಯಮ್ಮನಹಳ್ಳಿ-ಆಗಿನ ನಾಣಿಕೆರೆ) ಮಹಿಳೆಯರು. ರಂಗಭೂಮಿಗೆ ಮಹಿಳೆಯರನ್ನು ಕೊಟ್ಟ ಪರಂಪರೆ ಈಗಲೂ ಈ ಊರಿನಲ್ಲಿ ಮುಂದುವರಿದಿದೆ.

ಮರಿಯಮ್ಮನಹಳ್ಳಿ ಗ್ರಾಮವು ಪ್ರಾಚೀನವಾಗಿ ಇತ್ತು ಎಂಬುದಕ್ಕೆ ಯಾವುದೇ ದಾಖಲೆಗಳು ಇಲ್ಲ. ವಿಜಯನಗರದ ಕಾಲದಲ್ಲಿಯೂ ಸಹ ಹೋಸಪೇಟೆ, ನಾರಾಯಣ ದೇವರ ಕೆರೆ, ಕಾಮಲಾಪುರ ಮುಂತಾದ ಪ್ರದೇಶಗಳಿಗೆ ಇದ್ದಂತಹ ಪ್ರಾಮುಖ್ಯತೆಯಾಗಲಿ ಇದ್ದಿಲ್ಲ. ವಿಜಯನಗರದ ನಂತರವು ಸಹ ಅಂತಹ ಹೇಳಿಕೊಳ್ಳುವಂತಹ ಹೆಸರೇನು ಇದ್ದಿಲ್ಲ. ಬ್ರಿಟೀಷರ ಅವಧಿಯಲ್ಲಿ ಹೋಸಪೇಟೆಯಿಂದ ಕೊಟ್ಟೂರಿಗೆ ರೈಲು ಮಾರ್ಗ ಮಾಡಲು ಪ್ರಾರಂಭಿಸಿದಾಗ ಮರಿಯಮ್ಮನಹಳ್ಳಿ ಎಂದು ಉಲ್ಲೇಖವಾಗಿರುವಂತಹ ಸ್ಥಳ ಫಲಕ ಬಿಟ್ಟರೆ ಇನ್ನು ಎಲ್ಲಿಯೂ ಈ ಸ್ಥಳದ ಬಗೆಗೆ ಹೇಳಿಕೊಳ್ಳುವಂತಹ ಉಲ್ಲೇಖಗಳು ಕಂಡು ಬರುವುದಿಲ್ಲ. ತುಂಗಭದ್ರ ಡ್ಯಾಂ ಕಟ್ಟಿದ ನಂತರ ಈ ಮರಿಯಮ್ಮನಹಳ್ಳಿ ಅಥವಾ ಮರಿಯಮ್ಮನಹಳ್ಳಿಗೆ ಜನಗಳು ವಲಸೆ ಬರಲು ಪ್ರಾರಂಭಿಸಿದರು. ಹೀಗೆ ವಲಸೆ ಬಂದ ಹಳ್ಳಿಗಳ ಪೈಕಿ ನಾಣೀಕೇರಿ ಒಂದು, ಇದು ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಆ ಪ್ರದೇಶದಲ್ಲಿ ತುಂಬಾ ದೊಡ್ಡದಾಗಿತ್ತು. ಆ ನಾಣಿಕೇರಿಯ ಬಹು ಜನರು ಸನಿಹದ ಮರಿಯಮ್ಮನಹಳ್ಳಿಗೆ ವಲಸೆ ಬಂದರು. ತಾವು ಬಿಟ್ಟು ಬಂದ ಊರಿನ ಸಾಂಸ್ಕೃತಿಕ ಪರಂಪರೆಯನ್ನು ಇಲ್ಲಿಯೂ ಮುಂದುವರಿಸಿಕೊಂಡು ಬಂದರು. ಮರಿಯಮ್ಮನಹಳ್ಳಿ ಚಾರಿತ್ರಿಕವಾಗಿ ರಾಜ-

ಮಹಾರಾಜರ ಕಾಲದಲ್ಲಿ ಹೆಸರು ಪಡೆಯದಿದ್ದರೂ. ತನ್ನ ರಂಗ ಭೂಮಿಯ ಕಲೆಯಿಂದಾಗಿ ಅಲ್ಪಸ್ವಲ್ಪ ಹೆಸರು ವಾಸಿಯಾಗಿತ್ತು. ಅಲ್ಲಿನ ನಾಟಕ ಚಟುವಟಿಕೆ ಬಹು ಪ್ರಸಿದ್ಧಿಯಾಗಿತ್ತು. ಹಾಗಾಗಿ ಗ್ರಾಮೀಣ ರಂಗಭೂಮಿ ವಿಶಿಷ್ಟ ಕೇಂದ್ರ ಎನಿಸಿಕೊಂಡಿತ್ತು. ನಾಟಕ ಕಲೆಗೆ ಇನ್ನೂ ಕೆಲವು ಊರುಗಳು ಪ್ರಸಿದ್ಧವಾದರೂ ಮರಿಯಮ್ಮನಹಳ್ಳಿ ಅವುಗಳಲ್ಲಿ ವಿಶಿಷ್ಟ ಸ್ಥಾನ ಪಡೆದಿತ್ತು. ಒಟ್ಟಿನಲ್ಲಿ ನಮ್ಮ ಪ್ರಾಚೀನವಾದ ನಾಟಕ ಕಲೆ ಇಲ್ಲಿ ನೆಲೆಗೊಂಡಿದೆ.

## ೨.೧. ಗ್ರಾಮದ ಪ್ರಾಚೀನತೆ-ಹೆಸರಿನ ಮೂಲ :

ಮರಿಯಮ್ಮನಹಳ್ಳಿ ಹೆಸರು ಬರಲು ಕಾರಣ ಇಲ್ಲಿರುವ ಮಾರಿಯಮ್ಮ ದೇವಿ. ಸುಮಾರು ವರ್ಷಗಳ ಹಿಂದೆ ಈ ಊರು ಹತ್ತಾರು ಮನೆಗಳಿರುವ ಪುಟ್ಟ ಗ್ರಾಮವಾಗಿತ್ತು, ಊರಿಗೆ ಮಾರಿ ರೋಗ ಬಂದು ಗ್ರಾಮದ ಜನರು, ದನಕರುಗಳೆಲ್ಲ ಸಾಯ ತೊಡಗಿದರು. ಇಲ್ಲಿಯ ದೇವತೆಯಾದ ಮಾರಿಯಮ್ಮನಿಗೆ ಹರಕೆ ಹೊತ್ತಿದರು. ಇದರಿಂದಾಗಿ ಮಾರಿ ರೋಗವು ಕಣ್ಮರೆಯಾಯಿತು. ಈ ಮಾರಿಯಮ್ಮನ ದೇವಿಯಿಂದಾಗಿ ಮಾರಿಯಮ್ಮನ ಹಳ್ಳಿಯಾಯಿತು. ಮುಂದೆ ಮಾರಿಯಮ್ಮನಹಳ್ಳಿ ಹೋಗಿ ಮರಿಯಮ್ಮನ ಹಳ್ಳಿಯಾಗಿತು. ಕೇಂದ್ರ ರೈಲ್ವೇ ಇಲಾಖೆಯಲ್ಲಿ ಈ ಊರಿನ ಹೆಸರು ಮಾರಿಯಮ್ಮನಹಳ್ಳಿಯಂದೇ ನಮೂದಿಸಲಾಗಿದೆ. ನಾರಾಯಣ ದೇವರ ಕೆರೆಯಿಂದ ಬಂದಂತಹ ಜನರು ಈ ಊರಿನ ಹೆಸರನ್ನು ನಾರಾಯಣ ದೇವರ ಕೆರೆ ಎಂದು ಬದಲಾಯಿಸಲು ಪ್ರಯತ್ನಿಸಿದರು. ಆದರೆ ಕೇಂದ್ರದ ರೈಲ್ವೇ ಇಲಾಖೆಯಲ್ಲಿ ಮಾರಿಯಮ್ಮನಹಳ್ಳಿ ಎಂದು ನಮೂದಿಸಿದರಿಂದ ಹೆಸರು ಬದಲಾವಣೆಗೆ ಇಲಾಖೆ ಒಪ್ಪಿಗೆ ಕೊಡಲಿಲ್ಲ.

ನಾರಾಯಣ ದೇವರ ಕೆರೆ ಎಂಬ ಹೆಸರನ್ನು ಸಮೀಪದ ಲಡಕನ ಬಾವಿಯಲ್ಲಿ ನೆಲೆಸಿರುವ ನಾಣೀಕೇರಿ ಊರಿನ ಜನರು ತಮ್ಮ ಊರಿಗೆ 'ನಾರಾಯಣ ದೇವರ ಕೆರೆ' ಎಂದು ಹೆಸರು ಇಟ್ಟುಕೊಂಡಿದ್ದಾರೆ

ನಾಣೀಕೇರಿಯಿಂದ ಜನರು ವಲಸೆ ಬರುವುದಕ್ಕಿಂತ ಮುಂಚೆ ಈ ಮರಿಯಮ್ಮನಹಳ್ಳಿ ೩೦ ಕುಟುಂಬಗಳು ಇರುವ ಕುಗ್ರಾಮವಾಗಿತ್ತು. ಇಲ್ಲಿ ವಾಸಿಸುವವರು ಹೇಳುವಂತೆ ೫೦೦ ವರ್ಷಗಳ ಹಿನ್ನೆಲೆ ಇದೆ. ಕಾರಣ, ಇಲ್ಲಿನ ಅನ್ನದಾನೇಶ್ವರ ಮಠ ಮತ್ತು ಗ್ರಾಮ ದೇವತೆ ದುರುಗಮ್ಮ.

ಇಲ್ಲಿ ಲಿಂಗಾಯಿತರ ಮನೆ, ಬಣಕಾರರ ಮತ್ತು ಬಹು ಸಂಖ್ಯಾತರಾಗಿದ್ದ ವಾಲ್ಮೀಕಿ ಸಮುದಾಯದವರದು. ಇವರನ್ನು ಒಟ್ಟು ಬೇರೆ ವರ್ಗದವರು ವಾಸಿಸುತ್ತಿರಲಿಲ್ಲ. ನಾಯಕರು ಬೇಟೆಯಾಡಿ ಜೀವನ ಸಾಗಿಸುತ್ತಿದ್ದರು. ಊಳಿದವರು ಕೃಷಿ ಮಾಡುತ್ತಿದ್ದರು.

ಮೊದಲು ಈ ಊರಿಗೆ ಮಾರಿಹಳ್ಳಿ ಎಂಬ ಹೆಸರು ಇತ್ತು. ಮುಂದೆ ಮಾರಿಹಳ್ಳಿ, ಮಾರಿಯಮ್ಮನಹಳ್ಳಿ, ಮರಿಯಮ್ಮನಹಳ್ಳಿಯಾಯತು. ಮಾರಿಹಳ್ಳಿ ಎಂದು ಹೆಸರು ಬರಲು ಕಾರಣ. ಈ ಹಳ್ಳಿ ಜನ 'ಮಾರಿ ರೋಗ'ದಿಂದಾಗಿ ಸಾಯುತ್ತಿದ್ದರು. ಹಳ್ಳಿಗೆ ಬೇರೆ ಊರಿನಿಂದ ಬರಲು ಹೆದರುತ್ತಿದ್ದರು. ಯಾವಾಗಲು ಸಾವು ಸಂಭವಿಸುವ ಹಳ್ಳಿಯಾಗಿ ಬೇರೆ ಸ್ಥಳದವರು ಈ ಊರನ್ನು

'ಮಾರಿ' ಹಳ್ಳಿ ಎಂದು ಕರೆಯತೊಡಗಿದರು. 'ಮಾರಿ ರೋಗ' ದಿಂದಾಗಿ ಈ ಊರಿಗೆ ಮಾರಿಹಳ್ಳಿ ಎಂದು ಹೆಸರು ಬಂದಿತು. ಮುಂದೆ ಈ ಊರಿನಲ್ಲಿ ರಾಂಪುರದ ದುರುಗಮ್ಮ ಬಂದು ನೆಲೆ ನಿಂತು ಇಲ್ಲಿಯ ಜನರಿಗೆ ಅಭಯ ನೀಡಿದಳು. ನಾನು ಇರುವವರೆಗೂ ಈ ಊರನಲ್ಲಿ ಮಾರಿ ರೋಗ ಬರುವುದಿಲ್ಲ. ಹಾಗಾಗಿ ಮಾರಿಯನ್ನು ಹೋಗಲಾಡಿಸಿದ ಅಮ್ಮ 'ಮಾರಿಯಮ್ಮ'. ಹೀಗಾಗಿ ಈ ಊರಿಗೆ ಮಾರಿಯಮ್ಮನಹಳ್ಳಿ ಎಂಬ ಹೆಸರು ಬಂದಿತು. ಇಂದಿಗೂ ಇಲ್ಲಿಯ ಮೂಲ ನಿವಾಸಿಗಳಲ್ಲಿ ಇರುವ ನಂಬಿಕೆಯಾಗಿದೆ.

### ೨.೨. ಗ್ರಾಮದ ಭೌತಿಕ ಮಾಹಿತಿಗಳು :

| | | |
|---|---|---|
| ಮರಿಯಮ್ಮನಹಳ್ಳಿ ಗ್ರಾಮದ ಒಟ್ಟು ವಿಸ್ತೀರ್ಣ | : | ೩೧೪.೨೨ ಹೆಕ್ಟೇರ್ ಪ್ರದೇಶ |
| ಸಾಗುವಳಿ ಜಮೀನಿನ ವಿಸ್ತೀರ್ಣ | : | ೧೪೩.೯೬ ಹೆಕ್ಟೇರ್ ಪ್ರದೇಶ |
| ಜನರು ವಾಸಿಸುವ ಜಾಗ ವಿಸ್ತೀರ್ಣ | : | ೧೦೫.೮೩ ಹೆಕ್ಟೇರ್ ಪ್ರದೇಶ |

### ಗ್ರಾಮದ ಒಟ್ಟು ಜನ ಸಂಖ್ಯೆ ಮಾಹಿತಿ :

೨೦೦೧-೦೨ನೇ ಸಾಲಿನ ಜನಗಣತಿಯ ಪ್ರಕಾರ ಮರಿಯಮ್ಮನಹಳ್ಳಿಯ ಜನ ಸಂಖ್ಯೆ ೧೧.೮೨೪

ಸರಾಸರಿಯಲ್ಲಿ

| | |
|---|---|
| ಮಹಿಳೆಯರು | ೫೧.೬೨ |
| ಪುರುಷರು | ೫೨.೫೩ |
| ಒಟ್ಟು ಕುಟುಂಬಗಳ ಸಂಖ್ಯೆ | ೨೯೮೨ |

ಇಲ್ಲಿ ಬಾವಿಗಳು ೧೦ ಇವೆ. ಈ ಬಾವಿಗಳಿಂದ ಸುಮಾರು ೪.೩೪ ಹೆಕ್ಟೇರ್ ಉಪಯೋಗ

ಇಲ್ಲಿಯ ಭೂಮಿ ಸವಳು, ಹರಳು, ಕೆಂಪು ಮಣ್ಣನ್ನು ಹೊಂದಿದೆ.

ಇಲ್ಲಿ ಬೆಳೆಯುವ ಬೆಳೆ ಹೈಬ್ರಿಡ್ ಜೋಳ, ಸಜ್ಜೆ, ಎಳ್ಳು, ನೀರಿನ ಸೌಲಭ್ಯ ಇದ್ದವರು ಕಬ್ಬು, ಭತ್ತ ತರಕಾರಿಗಳನ್ನು ಬೆಳೆಯುತ್ತಾರೆ.

### ೨.೩. ಮರಿಯಮ್ಮನಹಳ್ಳಿ ಹೋಬಳಿ ಸಂಬಂಧ ಪಟ್ಟ ಮಾಹಿತಿ :

| | | |
|---|---|---|
| ಭೌಗೋಳಿಕವಾಗಿ | : | ೨೪,೭೨೪ ಹೆಕ್ಟೇರ್ ಪ್ರದೇಶವಿದೆ. |
| ಸಗೋವಳಿ | : | ೭.೮೬೩.೧೫ ಹೆಕ್ಟೇರ್ ಪ್ರದೇಶವಿದೆ. |
| ಜನರು ವಾಸಿಸುವ ಜಾಗ | : | ೩೪೫.೮ ಹೆಕ್ಟೇರ್ ಪ್ರದೇಶ |
| ಒಟ್ಟು ಜನಸಂಖ್ಯೆ (೧೯೯೧ರ | | |

ಜನಗಣತಿ ಪ್ರಕಾರ) : ೩೮.೧೫೧

ಮಹಿಳೆಯರು : ೧೮.೮೨೮

ಪುರುಷರು : ೧೯.೩೨೩

ಕುಟುಂಬದ ಸಂಖ್ಯೆ : ೬೪೬೧

ಕೆರೆಗಳು ಒಂದು ಇದ್ದು ೨ ಸಾವಿರ ಎಕರೆ ಕೆರೆಯ ಒಳಾಂಗಣ ಹೊಂದಿರುವ ಈ ವಿಶಾಲ ಕೆರೆಯಿಂದ ೨೮೦೦ ಎಕರೆಯಷ್ಟು ಜಮೀನಿಗೆ ನೀರು ಸರಬರಾಜು ಆಗುತ್ತದೆ.

ಈ ನೀರಾವರಿ ಪ್ರದೇಶದಲ್ಲಿ ಕಬ್ಬು ಭತ್ತ ಹೆಚ್ಚಾಗಿ ಬೆಳೆಯುತ್ತದೆ.

ಬೆಳೆಗಳು–ನೀರಾವರಿ ಪ್ರದೇಶದಲ್ಲಿ –ಮಳೆ ಆಧಾರಿತ ಪ್ರದೇಶದಲ್ಲಿ

(ಎಕರೆಗೆ ಕಿಂಟ್ವಲ್) (ಎಕರೆಗೆ ಕಿಂಟ್ವಲ್)

ಜೋಳ ೧೮ರಿಂದ ೨೦ ೮–೧೦

ಮೆಕ್ಕೆಜೋಳ ೨೫ರಿಂದ೩೦ ೩ರಿಂದ೪

ಸಜ್ಜೆ ೬ರಿಂದ೮ ೩ರಿಂದ೪

ಭತ್ತ೨೫ರಿಂದ೨೮ ೬ರಿಂದ೮

ಶೇಂಗಾ ೧೮ರಿಂದ೨೦ ೩ರಿಂದ೪

ಮರಿಯಮ್ಮನಹಳ್ಳಿಯಲ್ಲಿ ಒಟ್ಟು ೧೧೩ರೈತರು ಇದ್ದು ಇದರಲ್ಲಿ

ಸಣ್ಣ ರೈತರು : ೪೩

ಅತಿಸಣ್ಣ ರೈತರು : ೭೧

## ೨.೪. ಮರಿಯಮ್ಮನಹಳ್ಳಿಯ ವ್ಯಾಪ್ತಿಗೆ ಒಳಪಡುವ ಗ್ರಾಮಗಳು :

ಮರಿಯಮ್ಮನಹಳ್ಳಿಗೆ ೧೯ ಕಂದಾಯ ಗ್ರಾಮಗಳು ಒಳಪಡುತ್ತವೆ. ಅಲ್ಲದೇ ಕಂದಾಯವಲ್ಲದ ಹ್ಯಾಮಟ್ ಗ್ರಾಮಗಳು ೯ ಗ್ರಾಮಗಳು ಒಳಪಡುತ್ತವೆ

| ಕಂದಾಯ ಗ್ರಾಮಗಳು | ಹ್ಯಾಮಟ್ ಗ್ರಾಮಗಳು |
|---|---|
| ಮರಿಯಮ್ಮನಹಳ್ಳಿ (ತಾಂಡ) | ದೇವಲಾಪುರ |
| ನಂದಿ ಬಂಡಿ | ಹನುಮನಹಳ್ಳಿ |
| ಗೊಲ್ಲರ ಹಳ್ಳಿ | ಹಂಪಿನ ಕಟ್ಟೆ |
| ಡಣನಾಯಕನ ಕೆರೆ | ಗುಂಡಾ |
| ಬಸವನ ದುರ್ಗ (ಜನವಸತಿ ರಹಿತ ಗ್ರಾಮ) | ಗಾಳೆಮ್ಮನ ಗುಡಿ |

ಡಾಣಾಪುರ
ಅಯ್ಯನ ಹಳ್ಳಿ
ವೆಂಕಟಪುರ
ವ್ಯಾಸನ ಕೆರೆ
ಹೊಸಕೋಟೆ (ಜನವಸತಿ ರಹಿತ ಗ್ರಾಮ)
ಚಿಲನಕನ ಹಟ್ಟಿ
ಹಾರೋಹನ ಹಳ್ಳಿ
ತೆಲುಗು ಬಾಳು
ತಾಳೆ ಬಸಾಪುರ
ಒರಟೆಗೂಡು
ತಿಮ್ಮಲಾಪುರ
ಜಿ.ನಾಗಲಾಪುರ
ಬ್ಯಾಲಕುಂದಿ
ಗರಗ
ನಾಗಲಾಪುರ ತಾಂಡ
ಗುಂಡಾ ತಾಂಡ
ಪೋತಲ ಕಟ್ಟೆ
ಮರಿಯಮ್ಮನಹಳ್ಳಿ ತಾಂಡ

## ೨.೫. ಸಮುದಾಯಗಳು :

ನಮ್ಮ ಪ್ರಾಥಮಿಕ ಕಲ್ಪನೆಗಳಲ್ಲಿ ಸಮುದಾಯ ಒಂದು. ಉದಾಹರಣೆ ಮೂಲಕ ನೋಡಿದಾಗ, ಮೂಲ ನಿವೇಶನ, ಗ್ರಾಮ, ನಗರ, ಬುಡಕಟ್ಟು ಇಲ್ಲವೇ ರಾಷ್ಟ್ರಕ್ಕೆ ಅನ್ವಯಿಸಿ ಈ ಪದವನ್ನು ಬಳಸುತ್ತೇವೆ. ಯಾವುದೇ ಒಂದು ಚಿಕ್ಕ ಅಥವಾ ದೊಡ್ಡ ಸಮೂಹದ ಸದಸ್ಯರು ಎಲ್ಲಿಯೇ ಇರಲಿ, ಎಲ್ಲರೂ ಒಂದುಗೂಡಿ, ಅದು-ಇದು ಎಂದು ಯಾವುದೇ ಒಂದು ನಿರ್ಧಿಷ್ಟ ಹಿತಾಸಕ್ತಿಯಲ್ಲಿ ಪಾಲ್ಗೊಳ್ಳದೇ ಸಾಮಾನ್ಯ ಜೀವನದ ಮೂಲಭೂತ ಅವಶ್ಯಕತೆಗಳಲ್ಲಿ ಪಾಲ್ಗೊಳ್ಳುವಂತೆ ಬಾಳುವರು. ಈ ಸಮೂಹವನ್ನೇ ನಾವು ಸಮುದಾಯವೆಂದು ಕರೆಯುತ್ತೇವೆ.

ಒಬ್ಬನ ಜೀವನವು ಸಂಪೂರ್ಣವಾಗಿ ಅದರಲ್ಲಿ ಅಡಕವಾಗಿರುವುದೆ ಸಮುದಾಯದ ಸಂಕೇತವಾಗಿರುವುದು. ಒಬ್ಬನು ವ್ಯಾವಹಾರಿಕ ಸಂಸ್ಥೆಯಲ್ಲಿ ಇಲ್ಲವೇ ನಗರದಲ್ಲಿ ಪೂರ್ಣವಾಗಿ ಜೀವಿಸಬಹುದು. ಒಬ್ಬನ ಎಲ್ಲ ಸಾಮಾಜಿಕ ಸಂಬಂಧಗಳು ಸಮುದಾಯದಲ್ಲಿ ದೊರೆಯುವುದೇ ಅದರ ಮೂಲಭೂತ ಪ್ರಮಾಣವಾಗಿರುವುದು.

ಪ್ರಸ್ತುತದಲ್ಲಿ ಸಮುದಾಯ ಎಂಬ ಪದವನ್ನು ಜಾತಿಗೆ ಸಂವಾದಿಯಾಗಿ ಉಪಯೋಗಿಸಲಾಗಿದೆ. ಅಂದರೆ ಒಂದು ಸಮುದಾಯದಲ್ಲಿ ಆ ಸಮುದಾಯದ ಎಲ್ಲ ಜನರು ಒಳಗೊಂಡಿರುತ್ತಾರೆ.

ಹೀಗೆ ಒಳಗೊಂಡಿರುವಂತ ಸಮುದಾಯ ತನ್ನದೇ ಆದ ಸಂಸ್ಕೃತಿಯನ್ನು ಒಳಗೊಂಡಿರುತ್ತಿದೆ. ಹೀಗಿರುವಂತಹ ಒಂದು ಸಮುದಾಯ ತನ್ನ ಸಮುದಾಯದ ಒಳಿತಿಗಾಗಿ, ಏಳಿಗೆಗಾಗಿ, ಸದಾ ಒಬ್ಬರನ್ನೊಬ್ಬರು ಅವಲಂಬಿಸಿ ಬದುಕುತ್ತಿರುತ್ತಾರೆ.

ಇಂತಹ ಹಲವಾರು ಸಮುದಾಯಗಳು ಮರಿಯಮ್ಮನ ಹಳ್ಳಿಯಲ್ಲಿ ವಾಸಿವಾಗಿರುವುದನ್ನು ನಾವು ಕಾಣುತ್ತೇವೆ.

**೧. ಬೇಡರು :**

ಮರಿಯಮ್ಮನ ಹಳ್ಳಿಯಲ್ಲಿ ಇರುವಂತಹ ಬೇಡರಲ್ಲಿ ವಲಸೆ ಬಂದವರು, ಮೂಲ ನಿವಾಸಿಗರು ಇದ್ದಾರೆ. ಈ ಊರಿನ ಜನಸಂಖ್ಯೆಯಲ್ಲಿ ಶೇಕಡ ೬೦% ರಷ್ಟು ಬೇಡರೆ ಇದ್ದಾರೆ. ಇವರಲ್ಲಿ ನಾಣೀಕೇರಿ, ಗೌರಿಪುರ, ತಾರಿಹಳ್ಳಿ, ಬಸಪುರ, ಹಂಪನ ಕಟ್ಟೆ, ಮರಿಯಮ್ಮನಹಳ್ಳಿಯವರು. ಹೆಚ್ಚಾಗಿ ಊರನಾಯಕರು ವಾಸವಾಗಿದ್ದಾರೆ.

ಸುಮಾರು ೬೦೦ ಬೇಡರ ಮನೆಗಳು ಇವೆ. ಬಹುತೇಕರು ವ್ಯವಸಾಯ ಮಾಡುತ್ತಾರೆ. ಇತ್ತೀಚೆಗೆ ಮೈನ್ಸ್ ಕೆಲಸಗಳಿಗೆ ಹೋಗುತ್ತಿದ್ದಾರೆ.

**೨. ಹರಿಜನರು :**

೩೦೦ಕ್ಕೂ ಹೆಚ್ಚು ಮನೆಗಳಿರುವ ಇವರಲ್ಲಿ ಬಹುತೇಕ ಮಂದಿ ವಲಸೆ ಬಂದವರಾಗಿದ್ದಾರೆ. ಕೆಲವರು ವ್ಯವಸಾಯ ಮಾಡುತ್ತಾರೆ. ಉಳಿದ ಕೆಲವರು ಕೂಲಿ ಕಾರ್ಮಿಕರಾಗಿ ಜೀವನ ಸಾಗಿಸುತ್ತಾರೆ. ಕುರಿಯರು, ಮಾದುರರು, ಹೆಗೆಡೆವರು, ಸೇನಂತಿಗರು ಎಂಬ ಬೆಡಗುಗಳು ಇವೆ.

**೩. ಬ್ರಾಹ್ಮಣರು :**

೩೭ ಕುಟುಂಬಗಳಿರುವ ಬ್ರಾಹ್ಮಣರು ನಾಣಿಕೇರಿ ಅರಳಿಹಳ್ಳಿ ಮುಂತಾದ ಊರುಗಳಿಂದ ವಲಸೆ ಬಂದವರು. ಇಲ್ಲಿ ೨ ಪಂಗಡದವರು ಇದ್ದು ವೈಷ್ಣವರು ಮತ್ತು ಸ್ಮಾರ್ಥರು. ಕೆಲವರು ಸರ್ಕಾರಿ ಕೆಲಸ, ವ್ಯಾಪಾರ, ಅರ್ಚಕ ವೃತ್ತಿ ಮಡುತ್ತಿದ್ದಾರೆ.

**೪. ವೈಶ್ಯರು :**

ಮರಿಯಮ್ಮನಹಳ್ಳಿಯಲ್ಲಿ ನೂರು ಕುಟುಂಬಗಳು ವಾಸ ಮಾಡುತ್ತಿದ್ದಾರೆ. ಇಲ್ಲಿರುವ ಬಹುತೇಕರು ವಲಸೆ ಬಂದವರಾಗಿದ್ದಾರೆ. ತೆಲಗು ಮತ್ತು ಕನ್ನಡ ಇವರ ಮನೆ ಭಾಷೆಗಳು. ಹೆಚ್ಚಿನವರು ನಾಣೀಕೇರಿಯಿಂದ ವಲಸೆ ಬಂದವರಾಗಿದ್ದಾರೆ.

ಇವರಲ್ಲಿ ತುಪ್ಪದ ಕೋಮಟಿಗರು, ಎಣ್ಣೆ ಕೋಮಟಿಗರು ಎಂಬ ಎರಡು ಪಂಗಡದವರು ಇದ್ದಾರೆ. ಬಹುತೇಕರು ವ್ಯಾಪಾರ ಮಡುತ್ತಿದ್ದಾರೆ.

೫. ವೀರಶೈವರು :

ಇವರಲ್ಲಿ ಜಂಗಮರು, ಪಂಚಮಸಾಲಿಗಳು, ಗೌಡರು, ಬಣಜಿಗರು, ಗಾಣಿಗರು ಎಂಬ ಪಂಗಡಗಳಿವೆ. ಸುಮಾರು ೨೫ ಕುಟುಂಬದವರು ವಾಸವಾಗಿದ್ದು, ವ್ಯವಸಾಯ, ವ್ಯಾಪಾರ, ಮಾಡುತ್ತಿದ್ದಾರೆ. ಇನ್ನು ಕೆಲವರು ಸರ್ಕಾರಿ, ಖಾಸಗಿಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಬಹುತೇಕರು ನಾಣಿಕೇರಿಯಿಂದ ವಲಸೆ ಬಂದವರು.

೬. ಗೌಳಿಗರು :

ಐದು ಕುಟುಂಬಗಳಿರುವ ಗೌಳಿಗರು ವಲಸೆ ಬಂದವರಾಗಿದ್ದಾರೆ. ಇವರ ವೃತ್ತಿ ಹೈನುಗಾರಿಕೆ, ಇವರ ಮನೆ ಸಂಪ್ರದಾಯಗಳು ಲಿಂಗಾಯಿತರ ಸಂಪ್ರದಾಯದಂತೆ ಇವೆ.

೭. ಅಗಸರು :

೩೫ ಕುಟುಂಬ ಇರುವ ಅಗಸರು ಕನ್ನಡ, ತೆಲಗು ಮಾತನಾಡುತ್ತಾರೆ. ಎಲ್ಲಾ ಸಮುದಾಯದವರ ಬಟ್ಟೆಯನ್ನು ಒಗೆಯುತ್ತಾರೆ. ತಮ್ಮ ಮೂಲ ವೃತ್ತಿಯನ್ನು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ. ಈ ಸಮುದಾಯದವರು ವಲಸೆ ಬಂದವರಾಗಿದ್ದಾರೆ.

೮. ಕುಂಬಾರರು :

ನಾಣೀಕೇರಿಯಿಂದ ವಲಸೆ ಬಂದವರಾದ ಇವರ ಐದು ಕುಟುಂಬಗಳು ಈ ಊರಿನಲ್ಲಿ ನೆಲೆ ನಿಂತಿವೆ. ಇವರು ತಮ್ಮ ಮೂಲ ವೃತ್ತಿಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ.

೯. ಉಪ್ಪಾರರು :

ಕೆಲವೇ ಕುಟುಂಬ ಇರುವ ಈ ಸಮುದಾಯ ಮೂಲತಹ ಊರಿಗೆ ವಲಸೆ ಬಂದವರಾಗಿದ್ದಾರೆ. ವ್ಯಾಪಾರ ವ್ಯವಸಾಯವನ್ನು ಮಾಡುತ್ತಿದ್ದಾರೆ.

೧೦. ಕ್ಷೌರಿಕರು :

ಸುಮಾರು ೩೦ಕ್ಕೂ ಹೆಚ್ಚು ಕುಟುಂಬಗಳು ಇರುವ ಕ್ಷೌರಿಕರ ಮನೆ ಮಾತು ತೆಲುಗು, ಬಹುತೇಕರು ಕ್ಷೌರಿಕ ವೃತ್ತಿಯನ್ನು ಮಾಡುತ್ತಿದ್ದಾರೆ.

೧೧. ವಡ್ಡರು :

ಐದು ಕುಟುಂಬಗಳಿರುವ ವಡ್ಡರು ಕಲ್ಲು ಒಡೆಯುವ ವೃತ್ತಿಯನ್ನು ಮಾಡುತ್ತಾರೆ. ಮನೆ ಭಾಷೆ ತೆಲುಗು ಆಗಿದೆ.

೧೨. ಕೊರಚರು :

ಅಲೆಮಾರಿ ಸಮುದಾಯದವರಾದ ಕೊರಚರಿಗೆ ತೆಲುಗು ಮನೆ ಭಾಷೆಯಾಗಿದೆ. ಹಂದಿ ಸಾಕಾಣಿಕೆ, ಕಸಬರಿಕೆ ಹೆಣೆಯುವುದನ್ನು ಮಾಡುತ್ತಾರೆ.

೧೪. ನೇಕಾರರು :

ಹತ್ತು ಕುಟುಂಬಗಳಿರುವ ನೇಕಾರರು ಇಲ್ಲಿ ತಮ್ಮ ಮೂಲ ವೃತ್ತಿ ಮಾಡುತ್ತಿಲ್ಲ. ವ್ಯಾಪಾರ, ವ್ಯವಸಾಯ, ಕೂಲಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ.

೧೫. ಬಡಿಗೇರರು :

ಆರು ಕುಟುಂಬಗಳಿರುವ ಬಡಿಗೇರರು ತಮ್ಮ ಮೂಲ ವೃತ್ತಿಯನ್ನು ಮಾಡಿಕೊಂಡು ಬಂದಿದ್ದಾರೆ ಮೂಲತಹ ನಾಣಿಕೇರಿಯಿಂದ ವಲಸೆ ಬಂದವರಾಗಿದ್ದಾರೆ.

೧೬. ಜೈನರು :

ಈ ಊರಿಗೆ ವಲಸೆ ಬಂದವರಾದ ಜೈನರ ಹತ್ತು ಕುಟುಂಬಗದವರು ಇಲ್ಲಿ ವಾಸವಾಗಿದ್ದಾರೆ. ಮನೆಮಾತು ಗುಜರಾತಿ. ಇವರಲ್ಲಿ ಶ್ವೇತಾಂಬರರು ಮತ್ತು ದಿಗಂಬರರು ಪಂಗಡಗಳು ಇದ್ದು, ಶ್ವೇತಾಂಬರರೇ ಹೆಚ್ಚಾಗಿ ವಾಸವಾಗಿದ್ದಾರೆ. ಇಲ್ಲಿ ಇರುವ ಎಲ್ಲಾ ಜೈನರು ಬಟ್ಟೆ ವ್ಯಾಪಾರ ಮಾಡುತ್ತಿದ್ದಾರೆ.

೧೭. ತಮಿಳರು :

ನಾಲ್ಕು ಕುಟುಂಬ ಇರುವ ತಮಿಳರು ವ್ಯಾಪಾರ ಮಾಡುತ್ತಿದ್ದಾರೆ. ಗೌಂಡರು ಸಮುದಾಯದವರು ವಾಸವಾಗಿದ್ದಾರೆ.

೧೮. ಮರಾಠಿಗರು :

ಮಹಾರಾಷ್ಟ್ರ ಮೂಲದವರಾದ ಮರಾಠಿಗರು ಈ ಊರಿನಲ್ಲಿ ವಾಸವಾಗಿದ್ದಾರೆ. ಮಾಂಸಾಹಾರಿ ಹೋಟೆಲನ್ನು ನಡೆಸುತ್ತಿದ್ದಾರೆ. ಮನೆಮಾತು ಮರಾಠಿ.

೧೯. ಹೆಳವರು :

ಅಲೆಮಾರಿ ಸಮುದಾಯವರಾದ ಹೆಳವರ ಎಂಟು ಕುಟುಂಬದವರು ಇಲ್ಲಿ ವಾಸವಾಗಿದ್ದಾರೆ. ತಮ್ಮ ಮೂಲ ವೃತ್ತಿಯನ್ನು ಮಾಡುತ್ತಿಲ್ಲ. ಕೂಲಿ ಕೆಲಸಗಳಿಗೆ ಹೋಗುತ್ತಿದ್ದಾರೆ.

೨೦. ಈಡಿಗರು :

ಹಿಂದುಳಿದ ವರ್ಗದವರಾದ ಈಡಿಗರು ಈ ಊರಿನಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಇದ್ದಾರೆ. ಕೆಲವರು ತಮ್ಮ ಮೂಲ ವೃತ್ತಿಯನ್ನು ಮಾಡುತ್ತಿದ್ದಾರೆ. ಇನ್ನೂ ಕೆಲವರು ವ್ಯವಸಾಯ, ಕೂಲಿ ಕೆಲಸ ಮಾಡುತ್ತಿದ್ದಾರೆ.

ಅಧ್ಯಾಯ ೩

## ಸಾಮಾಜಿಕ ಜೀವನ

ಮನುಷ್ಯ ಸಂಘ ಜೀವಿ. ಅವನು ಸಮಾಜದಲ್ಲಿ ಬದುಕುವಾಗ ಸಮಾಜದ ರೀತಿ–ನೀತಿಗಳನ್ನನುಸರಿಸಿಕೊಂಡು ಬದುಕುತ್ತಾನೆ. ತನ್ನ ಕುಟುಂಬದಲ್ಲೂ ಒಂದು ನಿಯಂತ್ರಣ ವ್ಯವಸ್ಥೆ ಅಂದರೆ ತನ್ನದೇ ಆದ ವಿಧಿ–ನಿಷೇಧಗಳು, ರೀತಿ–ನೀತಿಗಳು, ಆಚಾರ–ವಿಚಾರಗಳು, ಕಾನೂನು ಕಟ್ಟಳೆಗಳಲ್ಲಿ ವಾಸಿಸುವುದನ್ನು ಕಾಣಬಹುದು. ಇವೆಲ್ಲಾ ಅಂಶಗಳನ್ನು ಮರಿಯಮ್ಮನಹಳ್ಳಿಯಲ್ಲಿ ವಲಸೆ ಬಂದು ನೆಲೆನಿಂತಿರುವ ಸಮುದಾಯಗಳಲ್ಲಿಯೂ ನಾವು ಕಾಣಬಹುದು. ಹೀಗೆ ವ್ಯವಸ್ಥೆಯೊಳಗೆ ತನ್ನ ಸುಭದ್ರತೆಯನ್ನು ಕಾಯ್ದುಕೊಳ್ಳುವುದು ಸಹ ಒಂದೊಂದು ಸಮುದಾಯಕ್ಕೆ ಮುಖ್ಯವೂ ಆಗಿರುತ್ತದೆ. ಹಾಗಾಗಿ ಅವನು ಸಮಾಜದೊಂದಿಗೆ ಸಂಬಂಧವನ್ನು ಹೊಂದಿ ತನ್ನದೇ ಆದ ಒಂದು ಪ್ರತ್ಯೇಕ ನೀತಿ ನಿಯಮಗಳನ್ನೂ ಮೈಗೂಡಿಸಿಕೊಂಡು ಬದುಕುತ್ತಾನೆ.

ಕುಟುಂಬ ಸಮಾಜದ ಒಂದು ಚಿಕ್ಕ ಘಟಕ. ಆಯಾ ಸಮುದಾಯದ ಕುಟುಂಬವನ್ನು ಅಧ್ಯಯನಿಸುವ ಮುಖಾಂತರ ಆ ಸಮುದಾಯಗಳು ಸಮಾಜದೊಂದಿಗೆ ಹೊಂದಿರುವ ಸಂಬಂಧವನ್ನು ತಿಳಿಯಲು ಸಹಕಾರಿಯಾಗುತ್ತದೆ ಎಂದು ಹೇಳಬಹುದು. ಆದ್ದರಿಂದ ಈ ಘಟಕದಲ್ಲಿ ಮರಿಯಮ್ಮನಹಳ್ಳಿಯ ಮೂಲವಾಸಿಗಳ ಮತ್ತು ವಲಸೆ ಬಂದು ನೆಲೆನಿಂತಿರುವ ಸಮುದಾಯಗಳ ಸಾಮಾಜಿಕ ಜೀವನವನ್ನು ಚಿತ್ರಿಸುವ ಕಾರ್ಯಮಾಡಲಾಗಿದೆ.

ಸಾಮಾಜಿಕ ಜೀವನದಲ್ಲಿ ಲೋಕರೂಢಿಯಾಗಿ, ಮಾನವರು ಸಂಪ್ರದಾಯಗಳನ್ನು ಅನುಸರಿಸುವರು ಮತ್ತು ಸಂಸ್ಥೆಗಳ ರೂಪದಲ್ಲಿ ಹಾಕಿಕೊಟ್ಟ ರೀತಿಗಳನ್ನು ಅನುಸರಿಸುವರು. ಸಾಮಾಜಿಕವಾಗಿ ಸೃಷ್ಟಿಯಾದ ಈ ರೂಢಿಗಳನ್ನೆಲ್ಲಾ ಒಳಗೊಳ್ಳುವಂಥ ಪದವೊಂದು ನಮಗೆ ಅಗತ್ಯ. ಅಂತೆಯೇ ಅದನ್ನು ಲೋಕರೂಢಿಗಳು ಇಲ್ಲವೇ ನೈತಿಕ ನಿಯಮಗಳು ಎಂದು ಕರೆಯಲಾಗುತ್ತಿದೆ. ಈ

ಹೆಸರುಗಳನ್ನು ಡಬ್ಲ್ಯೂ.ಜಿ.ಸಮ್ನರ್ ತನ್ನ Folkways ಗ್ರಂಥದ ಮೂಲಕ ಪರಿಚಯ ಮಾಡಿಕೊಟ್ಟಿದ್ದಾರೆ. ಅವರು 'ಲೋಕರೂಢಿಗಳು' ಎಂಬ ಪದವನ್ನು ತುಂಬ ವ್ಯಾಪಕಾರ್ಥದಲ್ಲಿ ತಿಳಿಸಿದ್ದಾರೆ.

**೩.೧. ಕುಟುಂಬ ಪದ್ಧತಿ :**

ನಮ್ಮ ಸಾಮಾಜಿಕ ಜೀವನಕ್ಕೆ ಒಂದು ನೆಲೆಯನ್ನು ಮತ್ತು ಸ್ಥಿರತೆಯನ್ನು ತಂದು ಕೊಡುವುದು ಕುಟುಂಬವೇ. ಉಳಿದೆಲ್ಲ ಸಂಸ್ಥೆಗಳಿಗಿಂತ ಇದು ಹೆಚ್ಚು ಶಾಶ್ವತವೂ ಪ್ರಭಾವಿಯೂ ಆಗಿರುತ್ತದೆ. ಮಾನವನ ವ್ಯಕ್ತಿತ್ವ ಬೆಳೆಸುವ ಮೊದಲ ಸಂಸ್ಥೆ ಎಂದರೆ ಕುಟುಂಬವೆನ್ನಬಹುದು. ಕುಟುಂಬ ಒಂದು ಸಾಮುದಾಯಿಕ ಚೌಕಟ್ಟಿನಲ್ಲಿ ರೂಪತಾಳುತ್ತದೆ. ಕುಟುಂಬವು ಚಿಕ್ಕದಾದ ಸಾಮಾಜಿಕ ಘಟಕವಾಗಿದ್ದು ತಂದೆ-ತಾಯಿ ಮತ್ತು ಮಕ್ಕಳಿಂದ ಕೇಂದ್ರಿಕೃತವಾಗಿರುತ್ತದೆ. ಮಗುವಿನ ಜನನಕ್ಕೆ ಇದು ಪ್ರಥಮ ಸಾಮಾಜಿಕ ಪರಿಸರವಾಗುತ್ತದೆ. ಅನೇಕ ಸಮಾಜಶಾಸ್ತ್ರಜ್ಞರು ಕುಟುಂಬವನ್ನು ಕುರಿತು ವಿವಿಧ ವ್ಯಾಖ್ಯೆಗಳನ್ನು ಕೊಟ್ಟಿದ್ದಾರೆ, ಸಮ್ನರ್ ಮತ್ತು ಕೆಲ್ಲರ್ ಪ್ರಕಾರ "ರಕ್ತ ಸಂಬಂಧಿಗಳಿಂದ ಕೂಡಿದ ಮತ್ತು ಕನಿಷ್ಠ ಎರಡು ತಲೆಮಾರುಗಳನ್ನು ಒಳಗೊಂಡಿರುವ ಅತಿಸೂಕ್ಷ್ಮ ಸಾಮಾಜಿಕ ಸಂಘಟನಯೇ ಕುಟುಂಬ" ಎಂದಿದ್ದಾರೆ.

ಈಲಿಯಟ್ ಮತ್ತು ಮೆರಿಲ್ ರವರು " ಕುಟುಂಬವು ಜೈವಿಕ ಘಟಕವಾಗಿದ್ದು ಗಂಡ-ಹೆಂಡತಿ ಮತ್ತು ಮಕ್ಕಳನ್ನು ಒಳಗೊಂಡಿರುತ್ತದೆ". ಎಂದಿದ್ದಾರೆ.

ಎಂ.ಎಫ್.ನಿಮ್‌ಕಾಫ್ ಅವರು "ಮಕ್ಕಳಿರುವ ಅಥವಾ ಇಲ್ಲದ ಗಂಡ-ಹೆಂಡತಿಯರ ಶಾಶ್ವತ ಸಂಘವೆಂದು ಅಥವಾ ಪುರುಷ ಅಥವಾ ಸ್ತ್ರೀಯು ಮಾತ್ರ ಮಕ್ಕಳೊಂದಿಗೆ ಇರುವ ಘಟಕವೆಂದು" ಹೇಳಿದ್ದಾರೆ. ಅದೇ ರೀತಿ ಬರ್ಗೆಸ್ ಮತ್ತು ಲಾಕರ್ ಅವರು "ಕುಟುಂಬದಲ್ಲಿ ಒಂದು ಸಮೂಹ ಜನರು ವಿವಾಹ ರಕ್ತಸಂಬಂಧ, ದತ್ತು ಸ್ವೀಕಾರದಿಂದ ಒಂದೆಡೆ ವಾಸವಾಗಿದ್ದು, ಆಂತರಿಕ ಕ್ರಿಯೆ ಮತ್ತು ಸಂಪರ್ಕ ವಿಧಾನಗಳಲ್ಲಿ ಗಂಡ-ಹೆಂಡತಿ, ತಂದೆ-ತಾಯಿ, ಮಗ-ಮಗಳು, ಸೋದರ-ಸೋದರಿ ಸಂಬಂಧದಿಂದ ಏಕರೂಪದ ಸಂಸ್ಕೃತಿಯನ್ನು ಪಡೆದಿರುತ್ತದೆ ಎಂದು ಹೇಳಿದ್ದಾರೆ. ಇದರಿಂದ ಕುಟುಂಬವು ಸಮಾಜದ ಮೂಲಭೂತ ಘಟಕವಾಗಿರುತ್ತದೆ. ಇದು ಜೈವಿಕ ಘಟಕವಾಗಿದ್ದು ಸಾಂಸಾರಿಕ ರೂಪದಲ್ಲಿ ಗಂಡ-ಹೆಂಡತಿಯಲ್ಲಿ ಲೈಂಗಿಕ ಬಾಂಧವ್ಯವನ್ನು ರೂಪಿಸುವ ಗುಣ ಲಕ್ಷಣಗಳನ್ನು ಹೊಂದಿ ಸಮಾಜದ ಎಲ್ಲಾ ಪ್ರಕಾರಗಳಲ್ಲೂ "ಸಂಸ್ಥೆ"ಯಾಗಿ ಕಾರ್ಯನಿರ್ವಹಿಸುತ್ತದೆ.

ಮರಿಯಮ್ಮನಹಳ್ಳಿಯಲ್ಲಿ ಕುಟುಂಬ ಪದ್ಧತಿಯನ್ನು ನೋಡಿದಾಗ ಸಾಮಾನ್ಯವಾಗಿ ಮಾತೃ ಪ್ರಧಾನ ಕುಟುಂಬ, ಪಿತೃ ಪ್ರಧಾನ ಕುಟುಂಬ ಪದ್ಧತಿಯನ್ನು ಕಾಣಬಹುದಾಗಿದೆ.

ಇಲ್ಲಿ ಹೆಚ್ಚಾಗಿ ಮಾತೃಪ್ರಧಾನ ಕುಟುಂಬ ಪದ್ಧತಿಯು ಕೆಳವರ್ಗದವರಲ್ಲಿ ಕಂಡು ಬರುತ್ತದೆ. ಕಾರಣ ಈ ವರ್ಗಗಳಲ್ಲಿ ದೇವದಾಸಿ ಪದ್ದತಿ ಇರುವುದು. ಇಲ್ಲಿ ಮಹಿಳೆಯೇ ಕುಟುಂಬದ ಮುಖ್ಯಸ್ಥಳಾಗಿರುತ್ತಾಳೆ. ಕುಟುಂಬದ ಜವಾಬ್ದಾರಿಯನ್ನು ಮಹಿಳೆಯೇ ಹೊತ್ತಿರುತ್ತಾಳೆ. ಈ ಪದ್ದತಿಯು ನಾಯಕರು, ಹರಿಜನರು, ನೇಕಾರರು ಮುಂತಾದ ವರ್ಗಗಳಲ್ಲಿ ಕಂಡು ಬರುತ್ತದೆ.

ಪಿತೃ ಪ್ರಧಾನ ಕುಟುಂಬ ಪದ್ಧತಿಯು ಇಲ್ಲಿ ಮೇಲ್ವರ್ಗಗಳಲ್ಲಿ ಕಂಡು ಬರುತ್ತದೆ, ಬ್ರಾಹ್ಮಣರು, ಲಿಂಗಾಯಿತರು, ಶೆಟ್ಟರು, ಮುಂತಾದ ವರ್ಗಗಳಲ್ಲಿ ಕಂಡು ಬರುತ್ತಾರೆ.

ಕುಟುಂಬದ ಹಿರಿಯನಿಂದಲೇ ಮನೆಯನ್ನು ಗುರುತಿಸಲ್ಪಡುತ್ತದೆ. ಇವರ ಸಂಪಾದನೆಯೇ ಕುಟುಂಬದ ನಿರ್ವಹಣೆಯಲ್ಲಿ ತಂದೆಗೆ ಪ್ರಧಾನ ಸ್ಥಾನವಿರುತ್ತದೆ. ಈತನ ನಂತರ ಹಿರಿಯ ಮಗ ಮನೆಯ ಜವಾಬ್ದಾರನಾಗಿರುತ್ತಾನೆ.

ಕುಟುಂಬ ಪದ್ಧತಿಯ ಪ್ರಕಾರಗಳಾದ ಅವಿಭಕ್ತ ಕುಟುಂಬ ಮತ್ತು ವಿಭಕ್ತ ಕುಟುಂಬ, ಪದ್ಧತಿಗಳನ್ನು ಮರಿಯಮ್ಮನಹಳ್ಳಿಯಲ್ಲಿ ಕಾಣಬಹುದಾಗಿದೆ.

**ಅವಿಭಕ್ತ ಕುಟುಂಬ :**

ಅವಿಭಕ್ತ ಕುಟುಂಬಗಳು ಇಂದು ಹೆಚ್ಚಾಗಿ ಕಂಡು ಬರುತ್ತಿಲ್ಲ. ಒಂದೋ ಎರಡೋ ಕಂಡು ಬರುತ್ತಿವೆ. ಅವಿಭಕ್ತ ಕುಟುಂಬದಲ್ಲಿ ತಂದೆ, ತಾಯಿ ಮಕ್ಕಳು, ಅಣ್ಣ-ತಮ್ಮಂದಿರು, ಸಂಬಂಧಿಕರು ಹೀಗೆ ಎಲ್ಲರನ್ನೂ ನೋಡಬಹುದಾಗಿತ್ತು. ಆದರೆ ಇಂದು ಕಾರಾಣಾಂತರಗಳಿಂದ, ಪರಸ್ಪರ ವೈ-ಮನಸ್ಸುಗಳಿಂದ ಅವುಗಳೆಲ್ಲ ಚದುರಿ ವಿಭಕ್ತ ಕುಟುಂಬಗಳಾಗಿವೆ.

ವಿಭಕ್ತ ಕುಟುಂಬಗಳು ಇಂದು ಈ ಊರಿನಲ್ಲಿ ಹೆಚ್ಚಾಗಿ ಕಂಡು ಬರುತ್ತವೆ. ಗಂಡ ಹೆಂಡತಿ ಮಗು ಇಷ್ಟೇ ವಿಭಕ್ತ ಕುಟುಂಬದ ಚೌಕಟ್ಟು.

ಹಬ್ಬ, ಆಚರಣೆಗಳಲ್ಲಿ ಮಾತ್ರ ಕುಟುಂಬದವರು ಸೇರುವ ಪದ್ಧತಿಗಳಿವೆ.

ಕುಟುಂಬವು ಅನೇಕ ಕಾರ್ಯಗಳನ್ನೂ ನಿರ್ವಹಿಸತ್ತವೆ. ಅವುಗಳಲ್ಲಿ ಮೂಲಭೂತ ಕಾರ್ಯಗಳೆಂದರೆ (೧)ಮದುವೆ, (೨) ಮಕ್ಕಳನ್ನು ಪಡೆಯುವುದು, (೩) ಮಕ್ಕಳನ್ನು ವಿದ್ಯಾವಂತರನ್ನಾಗಿ ಮಾಡಿ ವಿಶಾಲ ಸಮಾಜಕ್ಕೆ ಅವರನ್ನು ಪರಿಚಯಿಸುವುದು, (೪) ಕುಟುಂಬದ ಸದಸ್ಯರಿಗೆ ಸ್ಥಾನ-ಮಾನವನ್ನು ನಿರ್ವಹಣೆಯನ್ನು ಮಾಡುವುದು ಆಗಿದೆ. ಗಂಡು-ಹೆಣ್ಣಿನ ಪರಸ್ಪರ ಶುಭಮಿಲನಕ್ಕೆ ಮೂರ್ತ ಸ್ವರೂಪ ಕೂಡುವುದೇ ಮದುವೆ, ಕುಟುಂಬದ ಕಟ್ಟಡಕ್ಕೆ ಮದುವೆಯೇ ಆಧಾರ. ಇಲ್ಲಿಯ ಎಲ್ಲಾ ಸಂಬಂಧಗಳು ಮದುವೆಗೆ ಪ್ರೇರಕ ಶಕ್ತಿ ಮದುವೆ ನಂತರ ಮಕ್ಕಳನ್ನು ಪಡೆದು ಅವರನ್ನು ಸತ್ ಪ್ರಜೆಗಳನ್ನಾಗಿ ಮಾಡಿ ಸಮಾಜಕ್ಕೆ ನೀಡುವ ಕೆಲಸ ಕುಟುಂಬದ್ದಾಗಿದೆ.

ಮರಿಯಮ್ಮನಹಳ್ಳಿಯಲ್ಲಿ ಎಲ್ಲಾ ಕುಟುಂಬಗಳಲ್ಲೂ ಪರಸ್ಪರ ಸಂಬಂಧ ಗುರುತಿಸುವಲ್ಲಿ ಕೆಲವು ಪಾರಿಬಾಷಿಕ ಪದಗಳನ್ನು ಬಳಸುತ್ತಾರೆ. ಅಜ್ಜ-ಅಜ್ಜಿಯರನ್ನೂ, ಅವ್ವ-ತಾತ ಎಂದು, ತಂದೆ-ತಾಯಿರನ್ನು, ಅಪ್ಪ-ಅಮ್ಮ ಎಂದೂ, ಒಡಹುಟ್ಟಿದವರನ್ನು ಅಕ್ಕ-ತಂಗಿ, ಅಣ್ಣ-ತಮ್ಮ ಎಂದು ಕರೆಯುತ್ತಾರೆ.

ಹೊರಗಿನ ವ್ಯಕ್ತಿಗಳ ಜೊತೆಗೆ ಒಬ್ಬರನ್ನೊಬ್ಬರು ಕರೆಯುವಾಗ ಚಿಕ್ಕವರಾಗಿದ್ದಾರೆ ಹೆಸರು ಹಿಡಿದು ಕರೆಯುತ್ತಾರೆ. ದೊಡ್ಡವರು ಇದ್ದರೆ. ಅವರ ಹೆಸರಿನ ಜೊತೆಗೆ ಅಪ್ಪ-ಅಮ್ಮ, ಅಣ್ಣ ಎಂದು ಸೇರಿಸಿ ಕರೆಯುತ್ತಾರೆ. ಕುಟುಂಬದಲ್ಲಿ ಬರುವ ಆಸ್ತಿ ಹಕ್ಕಿನಲ್ಲಿ ಎರಡು ವಿಧ, (೧)

ನಾಣಿಕೇರಿಯಿಂದ ವಲಸೆ ಬಂದಂತಹ ಜನಗಳಲ್ಲಿ ವ್ಯಾಪಾರಿಗಳಾದ ವೈಶ್ಯರು ಊರಿನ ಪ್ರಮುಖ ರಸ್ತೆಯ ಎದುರುಬದುರುನಲ್ಲಿ ಅಂಗಡಿಗಳನ್ನು ಒಳಗೊಂಡ ಮನೆಗಳನ್ನು ಕಟ್ಟಿಸಿಗ್ದಾರೆ. ಇವರು ಮನೆಗಳನ್ನು ನೆಲಮಟ್ಟದಿಂದ ನಾಲ್ಕು-ಐದು ಅಡಿ ಎತ್ತರದಲ್ಲಿ ಮನೆ ಕಟ್ಟಿಸಿದ್ದಾರೆ. ಮನೆ ಮುಂದೆ ವಿಶಾಲವಾದ ವರಾಂಡ, ಮನೆಯಲ್ಲಿಯೇ ಅಂಗಡಿ ಇದೆ. ಈ ಅಂಗಡಿಯು ವಿಶಾಲವಾಗಿರುತ್ತದೆ ಒಳಗಡೆ ಅತಿಥಿಗಳು ಬಂದರೆ ಕುಳಿತುಕೊಳ್ಳಲು ಒಂದು ಕೋಣೆ, ನಂತರ ಒಳಗಡೆ ದೇವರ ಮನೆ, ಅಡುಗೆ ಮನೆ, ಮಲಗುವ ಕೋಣೆ, ಬಚ್ಚಲು ಮನೆ ಇದೆ. ಇಲ್ಲಿ ಈ ವೈಶ್ಯರ ಮನೆಗಳೆಲ್ಲಾ ಅಗಲ ಕಡಿಮೆ, ಉದ್ದ ಜಾಸ್ತಿ ಇರುವಂತಹ ಮನೆಗಳಿವೆ. ಇವರ ಮನೆಗಳ ತಲೆಬಾಗಿಲು, ಬಾಗಿಲು, ಹೊಸ್ತಿಲುಗಳೆಲ್ಲಾ ತಮ್ಮ ಮೂಲ ಊರಾದ ನಾಣಿಕೇರಿಯಿಂದ ತಂದಿದ್ದಾರೆ.

ಮಾದರಿ ಮನೆಗಳು ಜಂತಿಗಳಿಂದ ಕೂಡಿದ ಮನೆಗಳು ಇದ್ದವು. ಈಗ ಇವರ ಮನೆಗಳಲ್ಲಿ ಆರ್.ಸಿ.ಸಿ(ಕಾಂಕ್ರೀಟ್) ಹಾಕಿಸಿದ್ದಾರೆ.

ಇಲ್ಲಿಯ ಪರಿಶಿಷ್ಟರ ಮನೆಯನ್ನು ನೋಡಿದಾಗ ಕೆಲವರ ಮನೆ ವಿಶಾಲವಾದಂತಹ ಮನೆಗಳು ಕಂಡುಬರುತ್ತವೆ. ಮನೆಯ ಮುಂಭಾಗದಲ್ಲಿ ಮಾಳಿಗೆಗೆ ಬೆಂಬಲವಾಗಿ ಕಂಬಗಳನ್ನು ನೋಡಬಹುದು, ಮನೆಯ ಒಳಗಡೆ ವಿಶಾಲವಾದ ಹಾಲ್ ಇದೆ. ಅಡುಗೆ ಕೋಣೆಯಲ್ಲಿಯೇ ದೇವರ ಮನೆ, ಬಚ್ಚಲು ಮನೆ ಇದೆ. ಕೆಲವರು ಮನೆ ಮುಂದೆ ದನಗಳನ್ನು ಕಟ್ಟಿಕೊಳ್ಳುತ್ತಾರೆ, ಕೆಲವರು ಹಿಂದುಗಡೆ ಕಟ್ಟಿಕೊಳ್ಳುತ್ತಾರೆ. ಇಂತಹ ವಿಶಾಲವಾದ ಮನೆಗಳಿಗೆ ಆರ್.ಸಿ.ಸಿ ಹಾಕಿ ಆಧುನಿಕವಾಗಿ ಕಟ್ಟಿಕೊಳ್ಳುತ್ತಿದ್ದಾರೆ.

ಹರಿಜನರ ಮನೆಗಳು ಗುಡಿಸಲು ಮನೆಗಳಾಗಿವೆ. ಒಂದೇ ಕೋಣೆಯಲ್ಲಿ ಮಲಗುವ, ಅಡಿಗೆ ಮಾಡುವ ಕೋಣೆಗಳು ಇವೆ. ಮನೆ ಮುಂದೆ ಬಚ್ಚಲು ಮನೆ ಇವೆ.

ಬ್ರಾಹ್ಮಣರು, ಲಿಂಗಾಯಿತರು, ಜೈನರ ಮನೆಗಳು ಕೆಲವರದು ಹಂಚಿನ ಮನೆಗಳು, ಆರ್‌ಸಿಸಿ ಮನೆಗಳು, ಕೆಳವರ್ಗದವರಾದ ಕುರುಬರು, ಕೊರಚರು, ಕೊರವರು, ಹರಿಜನರು ಮುಂತಾದ ಕೆಲವರು ಸರ್ಕಾರದ ಆಶ್ರಯದ ಯೋಜನೆಯ ಮನೆಗಳಲ್ಲಿ ವಾಸವಾಗಿದ್ದಾರೆ. ಊರಿನ ಕಾಲೇಜ್ ಹತ್ತಿರ ಇರುವ ಪ್ರಿಯಾಂಕ ನಗರದಲ್ಲಿ ವಾಸವಾಗಿದ್ದಾರೆ.

### ೩.೩. ಆಹಾರ ಪದ್ಧತಿ :

ಮಾನವನ ಬದುಕಿಗೆ ಆಹಾರವು ಅತ್ಯಾವಶ್ಯಕವಾಗಿದೆ. ಪ್ರದೇಶಿಕತೆಗೆ ಅನುಗುಣವಾಗಿ ಆಹಾರ ಪದ್ಧತಿಯನ್ನು ರೂಢಿಸಿಕೊಂಡಿರುತ್ತಾರೆ. ಮರಿಯಮ್ಮನಹಳ್ಳಿಯ ಜನರ ಆಹಾರ ಪದ್ಧತಿಯು ಪ್ರಾದೇಶಿಕತೆಯಿಂದ ಕೂಡಿದೆ. ಈ ಊರಿನ ಆಹಾರ ಪದ್ಧತಿಯು ದಿನನಿತ್ಯ ಹಾಗೂ ಹಬ್ಬ ಹರಿದಿನಗಳಲ್ಲಿ ಬೇರೆ ಬೇರೆಯಾಗಿರುತ್ತದೆ. ನಿತ್ಯ ಜಿವನದಲ್ಲಿ ಸಾಮಾನ್ಯ ಆಹಾರ ಸೇವಿಸಿದರೆ, ಹಬ್ಬಗಳಲ್ಲಿ ವಿಶೇಷವಾದಂತಹ ಅಡುಗೆ ಮಾಡುತ್ತಾರೆ.

ಸಾಮಾನ್ಯ ದಿನಗಳಲ್ಲಿ ಹೆಚ್ಚಾಗಿ ಜೋಳದ ರೊಟ್ಟಿ, ಚಪಾತಿ ಮತ್ತು ಮುದ್ದೆಯನ್ನು ಬಳಸುತ್ತಾರೆ.

ರೊಟ್ಟಿ ಮತ್ತು ಚಪಾತಿಯ ಜೊತೆಗೆ ತರಕಾರಿ ಪಲ್ಯಗಳಾದ ಬೆಂಡೆಕಾಯಿ, ಚೌವಳಿಕಾಯಿ ಹಾಗಲಕಾಯಿ, ಬೀನ್ಸ್, ಕೋಸು, ಹೂಕೋಸು, ಆಲುಗಡ್ಡೆ, ಹೀರೆಕಾಯಿ, ಸೌತೇಕಾಯಿ ಬಳಸುತ್ತಾರೆ. ಅಲ್ಲದೇ ಚಟ್ನಿಪುಡಿಗಳಾದ ಶೇಂಗಾಪುಡಿ, ಗುರಳ್‌ಪುಡಿ, ಕೊಬ್ಬರಿಪುಡಿ ಮುಂತಾದುವನ್ನು ಬಳಸುತ್ತಾರೆ. ಅಲ್ಲದೇ ಕೊಬ್ಬರಿ ಚಟ್ನಿ, ಶೇಂಗಾ ಚಟ್ನಿ, ಪುಂಡಿ ಚಟ್ನಿ, ಕಾರಚಟ್ನಿ, ಬದನೇಕಾಯಿ ಚಟ್ನಿಗಳನ್ನು ಮಾಡುತ್ತಾರೆ.

ಈ ಊರಿನ ರೈತರು ಹಾಗೂ ಕೆಳವರ್ಗದವರಲ್ಲಿ ಬೆಳಿಗ್ಗೆಯೇ ರೊಟ್ಟಿ ಪಲ್ಯ, ಅನ್ನ ಊಟ ಮಾಡುತ್ತಾರೆ. ಉಳಿದ ವರ್ಗದವರು ಉಪಹಾರವನ್ನು ಸೇವಿಸುತ್ತಾರೆ. ಇಡ್ಲಿ, ದೋಸೆ, ಉಪ್ಪಿಟ್ಟು, ಅವಲಕ್ಕಿ, ಮಂಡಕ್ಕಿ, ಗುಂಡು ಪಂಗಲ್ ಮಾಡುತ್ತಾರೆ.

ಮಧ್ಯಾಹ್ನದಲ್ಲಿ ಅನ್ನ, ರಸಂ, ಪಲ್ಯ ರೊಟ್ಟಿ, ಮುದ್ದೆ ಊಟ ಮಾಡುತ್ತಾರೆ ಇದರ ಜೊತೆಗೆ ಉಪ್ಪಿನ ಕಾಯಿಗಳಾದ, ನಿಂಬೆ ಉಪ್ಪಿನ ಕಾಯಿ, ಮಾವಿನ ಉಪ್ಪಿನ ಕಾಯಿ, ನೆಲ್ಲಿ ಉಪ್ಪಿನ ಕಾಯಿ ಬಳಸುತ್ತಾರೆ. ಮೊಸರನ್ನು ಬಳಸುತ್ತಾರೆ.

ಕೆಲವರು ಅನ್ನದ ಜೊತೆ ಸಾರನ್ನೂ, ಹುಳಿಯನ್ನು, ಸೊಪ್ಪಿನ ಸಾರನ್ನು ಬಳಸುತ್ತಾರೆ. ಸಾಯಂಕಾಲ ಕೆಲವರು ಲಘು ಉಪಹಾರ ಮಾಡುತ್ತಾರೆ. ಮಂಡಾಳು ಕಾರ, ವಡೆ, ಹಿಟ್ಟು ಹಚ್ಚಿದ ಮೆಣಸಿನಕಾಯಿ, ಕರಿದಅವಲಕ್ಕಿ, ಮುಂತಾದವುಗಳನ್ನು ತಿನ್ನುತ್ತಾರೆ.

ಹಬ್ಬಗಳಲ್ಲಿ ವಿಶೇಷವಾದ ಅಡುಗೆ ಮಾಡುತ್ತಾರೆ. ಸಾಮಾನ್ಯವಾಗಿ ಎಲ್ಲ ವರ್ಗದವರು ಹಬ್ಬದೂಟ ಮಾಡುತ್ತಾರೆ. ಚಿತ್ರನ್ನ, ಹಪ್ಪಳ, ಸಂಡಿಗೆ, ಹೋಳಿಗೆ, ಹೋಳಿಗೆ ಸಾರು, ಕೋಸಂಬರಿ, ಹುಳಿ, ಪಾಯಸ ಮಾಡುತ್ತಾರೆ ಪಾಯಸಗಳಲ್ಲಿ ಹೆಸರು ಬೇಳೆ ಪಾಯಿಸ, ಶ್ಯಾವಿಗೆ ಪಾಯಿಸ, ಮುಂತಾದವನ್ನು ಮಾಡುತ್ತಾರೆ.

ವಿಶೇಷ ಹಬ್ಬದಿನಗಳಲ್ಲಿ ಇಂತಹದೆ ಅಡಿಗೆಯನ್ನು ಮಾಡುವ ನಂಬಿಕೆ ಇದೆ.

ಗಣೇಶನ ಚೌತಿಯಂದು ಕಡುಬು, ಶಿವರಾತ್ರಿ ದಿನ ಉಪವಾಸ ಮಾಡಿ ಅಂದು ಬರೀ ಉಪಹಾರ ಮಾಡುವುದು ಅಂದು ಹಣ್ಣು ಹಂಪಲಗಳನ್ನು ತಿನ್ನುವುದು. ಮರುದಿನ ಹೋಳಿಗೆ ಊಟ ಮಾಡುತ್ತಾರೆ.

ನಾಗರ ಪಂಚಮಿ ದಿನ ಉಂಡಿಗಳನ್ನು ಮಾಡುತ್ತಾರೆ. ಶೇಂಗಾಉಂಡಿ, ಕಡ್ಲಿಉಂಡಿ, ಎಳ್ಳುಂಡಿ, ಮುಂತಾದ ತರತರಹದ ಉಂಡಿ ಮಾಡುತ್ತಾರೆ. ಸಂಕ್ರಾಂತಿಗೆ ಎಳ್ಳು ಬೆಲ್ಲ ನೀಡುತ್ತಾರೆ.

ಯುಗಾದಿ ಹಬ್ಬಕ್ಕೆ ಬೇವು ಮಾಡುತ್ತಾರೆ.

ಕೆಳವರ್ಗದವರಲ್ಲಿ ಹಬ್ಬದ ಊಟಗಳನ್ನು ಮಾಡುತ್ತಾರೆ. ಹಬ್ಬ ಮುಗಿದ ಮಾರನೇ ದಿನ ಮಾಂಸದ ಅಡುಗೆ ಮಾಡುತ್ತಾರೆ.

ಮರಿಯಮ್ಮನಹಳ್ಳಿಯ ಗ್ರಾಮ ದೇವತೆಯಾದ ದುರ್ಗಮ್ಮನ ಜಾತ್ರೆಯ ದಿನ ಈ ವರ್ಗದಲ್ಲಿ ವಿಶೇಷವಾಗಿ ಮಾಂಸದ ಅಡುಗೆ ಮಾಡಿರುತ್ತಾರೆ. ಕುರಿ, ಕೋಳಿಯನ್ನು ಬಲಿ ಕೊಡುತ್ತಾರೆ.

ಜೈನರಲ್ಲಿ ಕೂಡ ವಿಶೇಷವಾದ ಅಡುಗೆಯನ್ನು ಹಬ್ಬಗಳಲ್ಲಿ ಮಾಡುತ್ತಾರೆ. ಮುಸ್ಲಿಂರಲ್ಲಿ ಕೂಡ ವಿವಿಧ ರೀತಿಯ ಆಹಾರ ಪದ್ಧತಿಯನ್ನು ನೋಡಬಹುದು. ಸಾಮಾನ್ಯ ದಿನಗಳಲ್ಲಿ ಎಲ್ಲರಂತೆ ರೊಟ್ಟಿ ಪಲ್ಯ, ಅನ್ನ ಸಾರು ಮಾಡುತ್ತಾರೆ. ಅವರ ಹಬ್ಬಗಳಲ್ಲಿ ಈ ವಿಶೇಷವಾದಂತಹ ಅಡುಗೆ ಮಾಡುತ್ತಾರೆ. ಕುರಿಯ ಮಾಂಸದೂಟ ಮಾಡುತ್ತಾರೆ.

ಇಲ್ಲಿ ಒಂದು ಗ್ರಾಮವನ್ನಿಟ್ಟುಕೊಂಡು ಆಹಾರ ಪದ್ಧತಿಯನ್ನು ಕುರಿತು ವಿವರಿಸಲು ಪ್ರಯತ್ನಿಸಿದ್ದೇನೆ. ಮುಖ್ಯವಾಗಿ ಕೆಳವರ್ಗದ ಜನರೇ ತುಂಬಾ ಇರುವುದರಿಂದ ಮತ್ತು ಅವರ ಶ್ರಮದಿಂದ ಕೂಡಿದ ಕಾಯಕವನ್ನು ಗಮನಿಸಿದರೆ ಒಂದು ಅವರಿಗೆ ಕೆಲಸ ಮಾಡಲು ಶಕ್ತಿ ನೀಡುವ ಮತ್ತು ಸಾಮಾನ್ಯ ಆಹಾರ ಎನ್ನುವ ಜೋಳದ ರೊಟ್ಟಿ, ಮುದ್ದೆ, ಬೇಳೆ ಕಾಳು, ಸೊಪ್ಪಿನ ಸಾರು ಪ್ರಮುಖವಾದ ಆಹಾರ ಎಂದು ಹೇಳಬಹುದು ಜೊತೆಗೆ ಈ ವರ್ಗಗಳಲ್ಲಿ ಮಾಂಸಾಹಾರವನ್ನು ವಿಶೇಷವಾದ ಸಂದರ್ಭಗಳಲ್ಲಿ ಬಳಸುವುದನ್ನು ಕಾಣಬಹುದು.

### ೩.೪. ನ್ಯಾಯ ಪದ್ಧತಿ :

ಸಾಮಾಜಿಕ ನಿಯಂತ್ರಣದ ಅನೌಪಚಾರಿಕ ಸಾಧನಗಳಲ್ಲಿ ನ್ಯಾಯ ಪಂಚಾಯಿತಿ ಮುಖ್ಯವಾದದ್ದು. ಪ್ರಾಚೀನ ಸಾಮಾಜಿಕ ಜೀವನದಲ್ಲಿ ನ್ಯಾಯ ಪಂಚಾಯಿತಿಯ ತೀರ್ಮಾನ ತಮ್ಮ ಸಮುದಾಯಗಳನ್ನೇ ಅವಲಂಬಿಸಿದ್ದವು. ಏಕೆಂದರೆ ಅವುಗಳ ಗಾತ್ರ ಚಿಕ್ಕದು. ಜನಸಂಖ್ಯೆ ಕಡಿಮೆ, ಜೀವನದ ವಿವಿಧ ಕ್ಷೇತ್ರಗಳು ಸರಳ ಸ್ವರೂಪದವುಗಳಾಗಿದ್ದವು. ಜನರು ಸಾಮಾಜಿಕ ಜೀವಸದ ಸಂಬಂಧಗಳನ್ನು ಹೊಂದಿದ್ದರು. ಭಾರತದ ಜಾತಿಗಳನ್ನು, ಬುಡಕಟ್ಟು ಸಮುದಾಯಗಳನ್ನು ಗಮನಿಸಿದಾಗ ಇವು ತಮ್ಮದೇ ಆದ ನ್ಯಾಯ ಪದ್ಧತಿ ಕ್ರಮವನ್ನು ಅನುಸರಿಸುವುದನ್ನು ಕಾಣುತ್ತೇವೆ. ಎಲ್ಲಾ ಜಾತಿ, ಸಮುದಾಯಗಳ, ಬುಡಕಟ್ಟುಗಳ ನ್ಯಾಯ ಪದ್ಧತಿಯ ಮೂಲ ಉದ್ದೇಶ ಒಂದೇ ಆಗಿದ್ದರೂ ಸಮುದಾಯಗಳಲ್ಲಿನ ಪದ್ದತಿಯಲ್ಲಿರುವ ರಚನಾ ಕ್ರಮಗಳು ಮಾತ್ರ ಭಿನ್ನತೆಯಿಂದ ಕೂಡಿರುವುದನ್ನು ಕಾಣಬಹುದಾಗಿದೆ. ನ್ಯಾಯದ ಧ್ಯೇಯೋದ್ದೇಶಗಳನ್ನು ಸಾಧಿಸಲು ಮತ್ತು ಜನ ಜೀವನದಲ್ಲಿ ಸುವ್ಯವಸ್ಥೆಯನ್ನುಂಟು ಮಾಡಲು ನ್ಯಾಯ ಪಂಚಾಯಿತಿ ರಚಿಸಿಕೊಳ್ಳಲಾಗುವುದು. ಅಂತೆಯೇ ನ್ಯಾಯಪಂಚಾಯಿತಿ ಯೋಜಿತ ರೀತಿಯಲ್ಲಿ ರೂಪಗೊಂಡು ಚಾಲನೆಯಲ್ಲಿರುವ ಸಾಮಾಜಿಕ ನಿಯಂತ್ರಣದ ಅನೌಪಚಾರಿಕ ಸಾಧನವಾಗಿದೆ. "ಒಂದು ಜನ ಸಮುದಾಯದ ನಂಬಿಕೆ, ಆಚರಣೆ, ಆದರ್ಶ, ಮೌಲ್ಯಗಳು, ನ್ಯಾಯ ನಿರ್ಣಯಗಳ, ಪದ್ಧತಿಗಳನ್ನು ರೂಪಿಸುತ್ತದೆ." (ಆರ್.ಬಿ.ಕುಮಾರ್, ೨೦೦೦:೪೯) ಈ ನ್ಯಾಯ ಪದ್ದತಿ ಕ್ರಮವು ಬುಡಕಟ್ಟುಗಳಲ್ಲಿ ತುಂಬಾ ಗೌರವ ಮತ್ತು ನಿಷ್ಠೆಯಿಂದ ನಡೆಯಲ್ಪಡುತ್ತದೆ. ಇದು ಸರ್ಕಾರ ರಚಿಸಿದ ನ್ಯಾಯಾಲಯಗಳಿಗಿಂತ ಹೆಚ್ಚಿನ ಮಹತ್ವವನ್ನು ಆ ಸಮುದಾಯಗಳು ಹೊಂದಿರುತ್ತವೆ. ಪ್ರಸ್ತುತ ಸಂದರ್ಭದಲ್ಲಿ ಈ ಗ್ರಾಮದ ನ್ಯಾಯ ವ್ಯವಸ್ಥೆಯನ್ನು

ಕುರಿತು ಹೇಳುವಾಗ ಪ್ರತಿಯೊಂದು ಸಮುದಾಯದವರು ತಮ್ಮ ಜಗಳಗಳನ್ನು ತಮ್ಮ ದೈವದವರೊಂದಿಗೆ ಬಗೆಹರಿಸಿಕೊಳ್ಳಲು ಪ್ರಯತ್ನಿಸಿಕೊಳ್ಳುತ್ತಾರೆ. ಆದರೆ ಒಂದು ಸಮುದಾಯಕ್ಕೆ ಮತ್ತು ಇನ್ನೊಂದು ಸಮುದಾಯಕ್ಕೆ ಜಗಳಗಳು ನಡೆದಂತಹ. ಸಂದರ್ಭದಲ್ಲಿ ಅನಿವಾರ್ಯವಾಗಿ ಪೋಲಿಸ್ ಸ್ಟೇಷನ್‌ಗೆ ಹೋಗುವಂತಹ ಸಂದರ್ಭಗಳು ಕಂಡು ಬರುತ್ತವೆ. ಉದಾ: ಮರಿಯಮ್ಮನ ಹಳ್ಳಿಯಲ್ಲಿ ೨೦೦೫ರ ಆಂಜನೇಯ ಮತ್ತು ಲಕ್ಷ್ಮೀನಾರಾಯಣ ಜಾತ್ರೆಯ ಸಂದರ್ಭದಲ್ಲಿ, ತೇರಿಗೆ ಸನ್ನೆ ಹಾಕುವ ಬಗೆಗೆ ನಾಯಕರಿಗೆ ಮತ್ತು ಹರಿಜನರಿಗೆ ವಿವಾದ ಉಂಟಾಯಿತು ಹಾಗಾಗಿ ತೇರಿಗೆ ಸನ್ನೆ ಹಾಕುವ ಪಾರಂಪರಿಕ ಹಕ್ಕಿನ ಹೋರಾಟದಲ್ಲಿ ನಡೆದ ಜಗಳವು ಕೋರ್ಟ್ ಮೆಟ್ಟಿಲು ತಲುಪಿರುವುದು ನ್ಯಾಯಾಲಯದಲ್ಲಿ ಮೊಕದ್ದಮೆ ನಡೆಯುತ್ತಿರುವುದನ್ನು ಮತ್ತು ಇಂದಿಗೂ ಕಾಣಬಹುದು.

ಈ ಊರಿನಲ್ಲಿ ಗ್ರಾಮ ಪಂಚಾಯಿತ್ತಿಯು ನ್ಯಾಯ ತಿರ್ಮಾನವನ್ನೂ ಬಗೆಹರಿಸುತ್ತಿತ್ತು. ಇಲ್ಲಿ ಜಾತಿ ಜಾತಿ ಒಳಗಿನ ಭಿನ್ನಾಭಿಪ್ರಾಯಗಳನ್ನು ಆಯಾ ಜಾತಿ ಮುಖಂಡರೇ ಬಗೆಹರಿಸುತ್ತಿದ್ದರು. ಊರಿನ ಹಿರಿಯರು, ಊರಿನ ಹಾಗೂ ಸುತ್ತ ಮುತ್ತಲಿನ ಹಳ್ಳಿಗಳಿಂದ ಬರುವ ಆಸ್ತಿ ವಿವಾದ, ಹೊಡೆದಾಟ ಮುಂತಾದ ಪ್ರಕರಣಗಳನ್ನು ಬಡವ, ಶ್ರೀಮಂತನೆನ್ನದೆ ನ್ಯಾಯಯುತವಾಗಿ ತೀರ್ಮಾನ ಮಾಡುತ್ತಿದ್ದರು. ಎಂತಹ ಬದ್ದ ವೈರಿಗಳು ಸಹ ಇವರ ತಿರ್ಮಾನಕ್ಕೆ ತಲೆಬಾಗಿ ತೀರ್ಪನ್ನು ಒಪ್ಪಿಕೊಳ್ಳುತ್ತಿದ್ದರು. ಪೋಲಿಸ್ ಠಾಣೆಯವರಿಗೆ ಕೆಲಸವೇ ಇರುತ್ತಿರಲಿಲ್ಲ. ೧೯೫೦ರಿಂದ ೧೯೭೦ರವರೆಗೆ ಒಂದು ಕೇಸು ಕೋರ್ಟಿಗೆ ಹೋಗಿರಲಿಲ್ಲ.

ನ್ಯಾಯ ತೀರ್ಮಾನ ಮಾಡುವುದರಲ್ಲಿ ಗ್ರಾಮ ಪಂಚಾಯಿತಿಯ ಅಧ್ಯಕ್ಷರಾಗಿದ್ದ ದಿ.ಸಣ್ಣಬಾವ ಸಾಬ್ ಅವರನ್ನು ನೆನೆಯುತ್ತಾರೆ. ಇವರು ಪಂಚಾಯಿತಿ ಅಧ್ಯಕ್ಷರು ಆಗಿದ್ದಾಗ, ನೀಡುತ್ತಿದ್ದ ನ್ಯಾಯ ತೀರ್ಮಾನಕ್ಕೆ ಇಡೀ ಊರಿನ ಜನರೇ ತಲೆಬಾಗುತ್ತಿದ್ದರು.

ವೈಶ್ಯರು, ನಾಯಕರು, ಹರಿಜನರು, ಲಿಂಗಯಿತರು ಮುಂತಾದ ವರ್ಗದವರು, ತಮ್ಮ ಸಮುದಾಯದಲ್ಲಿಯೇ ಜಗಳ, ವಿವಾದಗಳನ್ನು ಬಗೆಹರಿಸಿಕೊಳ್ಳುತ್ತಾರೆ. ಹರಿಜನರ-ಯಾವುದಾದರು ವ್ಯಾಜ್ಯಗಳಿದ್ದರೆ. ಅವುಗಳನ್ನು ಬಗೆಹರಿಸಿ, ದಂಡ ಹಾಕುತ್ತಾರೆ. ಬಂದಂತಹ ದಂಡದ ರೂಪದ ಹಣವನ್ನು ಚೆಮ್ಮೇಳಮ್ಮ ದೇವಸ್ಥಾನದ ಕಾರ್ಯಗಳಿಗೆ ಬಳಸುತ್ತಾರೆ.

ನಾಯಕರಲ್ಲಿ ಯಾವುದಾದರು ನ್ಯಾಯ ತೀರ್ಮಾನವಾಗಬೇಕಾದರೆ, ಊರಿನ ನಾಣೀಕೇರಪ್ಪನ ದೇವಸ್ಥಾನದಲ್ಲಿ ಕುಳಿತು ಬಗೆಹರಿಸುತ್ತಾರೆ.

ವೈಶ್ಯರು ತಮ್ಮ ತೀರ್ಮಾನವನ್ನು ತಮ್ಮ ದೈವವಾದ ಕನ್ನಿಕ ಪರಮೇಶ್ವರಿ ದೇವಸ್ಥಾನದಲ್ಲಿ ಬಗೆಹರಿಸುತ್ತಾರೆ. ಲಿಂಗಾಯಿತರು ತಮ್ಮ ಸಮಾಜದ ಮುಖಂಡರನ್ನು ಸೇರಿಸಿಕೊಂಡು ಸಮಸ್ಯೆ ಬಗೆಹರಿಸುತ್ತಾರೆ.

ಮುಸ್ಲಿಂರ ನ್ಯಾಯ ವ್ಯವಸ್ಥೆಯಲ್ಲಿ ಕಠಿಣ ಕ್ರಮಗಳನ್ನು ತೆಗದುಕೊಳ್ಳುತ್ತಾರೆ. ಇವರು ತಮ್ಮ ಸಮುದಾಯದಲ್ಲಿ ಯಾವುದೇ ಸಮಸ್ಯೆ, ವಿವಾದಗಳನ್ನು ತಮ್ಮ 'ಜಮಾತ್'ನಲ್ಲಿ ಬಗೆಹರಿಸಿಕೊಳ್ಳುತ್ತಾರೆ. ಈ ವರ್ಗದಲ್ಲಿ ಹೆಚ್ಚಾಗಿ ಆಸ್ತಿ ವಿವಾದ, ಪ್ರೇಮ ವಿವಾಹ, ಅಂತರ್‌ಜಾತಿ ವಿವಾಹಗಳು ಕಂಡು ಬರುತ್ತವೆ.

ಮುಸ್ಲಿಂ ಹುಡುಗ ಹಿಂದು ಹುಡುಗಿಯನ್ನು ಪ್ರೀತಿಸಿ, ಮದುವೆಯಾದರೆ ಆ ಹುಡುಗಿಯನ್ನು ತಮ್ಮ ಇಸ್ಲಾಂ ಧರ್ಮಕ್ಕೆ ಮತಾಂತರಿಸಿ ಪುನರ್ ವಿವಾಹ ಮಾಡಿಕೊಳ್ಳುತ್ತಾರೆ.

ಒಂದು ವೇಳೆ ಹಿಂದೂ ಹುಡುಗ ಮುಸ್ಲಿಂ ಹುಡುಗಿಯನ್ನು ಪ್ರೀತಿಸಿ ವಿವಾಹವಾದರೆ, ಅವರನ್ನು ಆ ಹುಡುಗಿಯ ಕುಟುಂಬದವರನ್ನು ಇಸ್ಲಾಂ ಧರ್ಮದಿಂದ ಬಹಿಷ್ಕಾರ ಹಾಕುತ್ತಾರೆ. ಅವರನ್ನು ಯಾವುದೇ ಹಬ್ಬ ಸಮಾರಂಭಗಳಿಗೆ ಕರೆಯುವುದಿಲ್ಲ, ಅವರಿಗೆ ಯಾವುದೇ ರೀತಿಯೂ ಸಹಾಯ ಸಹಕಾರ ನೀಡುವುದಿಲ್ಲ. ಬಹಿಷ್ಕೃತ ಕುಟುಂಬವು ತಮ್ಮ ತಪ್ಪನ್ನು ಒಪ್ಪಿಕೊಂಡು ತಮ್ಮನ್ನು ಕುಲಕ್ಕೆ ಸೇರಿಸಿಕೊಳ್ಳಿ ಎಂದು ಕೇಳಿದರೆ. ಜಮಾತ್‌ನವರು ಅವರಿಗೆ ೧,೦೦೦, ೨,೦೦೦, ೪೦೦೦ ಹಣವನ್ನು ದಂಡ ಹಾಕುತ್ತಾರೆ. ಅವರು ಹಣ ಕಟ್ಟಿದ ನಂತರ ಧರ್ಮದ ಎಲ್ಲಾ ಸಮಾರಂಭಗಳಲ್ಲಿ ಭಾಗವಹಿಸಲು ಅನುಮತಿ ನೀಡುತ್ತಾರೆ. ದಂಡದ ರೂಪದ ಹಣವನ್ನು ಮಸೀದಿಯ ಕಾರ್ಯಗಳಿಗೆ ಬಳಸುತ್ತಾರೆ.

### ೩.೫. ಜನಪದ ವೈದ್ಯ :

ಖಾಯಿಲೆಗಳು ಮನುಷ್ಯನಷ್ಟೇ ಪುರಾತನವಾದುವು. ಸಂಧಿವಾತ ರೋಗ ಐದು ಸಾವಿರ ವರ್ಷಗಳ ಹಿಂದೆಯೂ ಮನುಷ್ಯರನ್ನು ಕಾಡುತ್ತಿತ್ತು ಎಂಬುದನ್ನು ಆಲ್ಪ್ಸ್ ಪರ್ವತದ ಹಿಮದಡಿ ದೊರೆತ ಒಂದು ದೇಹದ ಪರೀಕ್ಷೆಯ ಮೂಲಕ ವೈದ್ಯರು ಪತ್ತೆ ಹಚ್ಚಿದ್ದಾರೆ (ನೋಡಿ: ದೀಪಿಕಾ ಜಗದೀಶ್: ಆಂದೋಲನ ಪತ್ರಿಕೆ ೯-೯-೧೯೯೮). ಕೆಲವೊಂದು ಖಾಯಿಲೆಗಳ ಹೆಸರುಗಳು ಬದಲಾಗಿರುವ ಸಾಧ್ಯತೆಯೂ ಉಂಟು, ಬಹು ಹಿಂದಿನ 'ಮಹೇಶ್ವರ ಜ್ವರ' ಈಗಿನ 'ವಿಷಮಶೀತ ಜ್ವರವೂ', 'ಮಹೇಶ್ವರಿ ಉಪದ್ರ' ಈಗಿನ 'ಕಾಲರ'ವೂ ಆಗಿರುವ ಸಾಧ್ಯತೆ ಬಗ್ಗೆ ಖ್ಯಾತ ಸಂಶೋಧಕ ಪ್ರೊ.ಎಂ.ಚಿದಾನಂದಮೂರ್ತಿ ಅವರು ಗಮನ ಸೆಳೆದಿದ್ದಾರೆ (ನೋಡಿ:ಜನ-ಜನಪದ-ಜಾನಪದ-ಪು-೪೦೮).

'ಮನುಷ್ಯನಿಗೆ ಬರದೇ ಮರಕ್ಕೆ ಬರುತ್ತದೆಯೇ ಕಾಯ್ಲೆ?' ಎಂಬುದಾಗಿ ಜನಪದರು ಗಾದೆ ಮಾಡಿರುವುದುಂಟು. ಬರೀ ಮರಕ್ಕೆ ಏನು,, ಎಲ್ಲಾ ಜೀವಿಗಳಿಗೂ ಈ ಖಾಯಿಲೆಯ ಉಪದ್ರವ ತಪ್ಪಿದ್ದಲ್ಲ. ಆದರೂ ನಿಸರ್ಗ ಸಹಜವಾದ ರೀತಿಯಲ್ಲಿ ಬದುಕುವ ಪ್ರಾಣಿ, ಪಕ್ಷಿ, ಮರ, ಕೀಟಗಳಿಗಿಂತಲೂ ಮನುಷ್ಯನಿಗೆ ಬರುವ ಖಾಯಿಲೆಗಳ ಸಂಖ್ಯೆಯೇ ಹೆಚ್ಚು. ಆತನ ಆಜನ್ಮ 'ಸಂಗಾತಿ'ಗಳು ಅವು. ನಿಸರ್ಗ ತತ್ವಕ್ಕೆ ವಿರುದ್ಧವಾದ ರೀತಿಯ ಆಹಾರ ಸೇವನೆ, ಜೀವನ ಕ್ರಮಗಳನ್ನು ಆತ ಅತಿಯಾಗಿ ಅವಲಂಬಿಸಿದ್ದು ಇದಕ್ಕೆ ಮುಖ್ಯ ಕಾರಣ. 'ಕೋಣೆ ಮಕ್ಕಳು ಕೊಳೆತೊ. ಬೀದಿ

ಮಕ್ಕಳು ಬೆಳೆದೊ'-ಎಂಬ ನಾಣ್ಣುಡಿಯಂತೆ, ಪ್ರಕೃತಿಯ ಎಲ್ಲಾ ವಿದ್ಯಮಾನಗಳಿಗೆ ಮೈಯೊಡ್ಡಿ ಬೆಳೆವವರಿಗಿಂತ ಅತಿ ನಾಜೂಕಿನ ಜೀವನ ಶೈಲಿಗೆ ಕಟ್ಟು ಬಿದ್ದವರು ನಿತ್ಯ ನೂರೊಂದು ರೋಗ ಪೀಡನೆಯಿಂದ ಬಳಲುವುದನ್ನು ನೋಡುತ್ತೇವೆ.

ಹುಟ್ಟಿದ ಜೀವಿಯನ್ನು ಬದುಕಿರುವ ತನಕ ನೆಗಡಿ, ಕೆಮ್ಮು, ಜ್ವರ, ತಲೆನೋವು, ಮೈಕೈ ನೋವು, ಆಮಶಂಕೆ, ವಾಂತಿ ಭೇದಿ, ಕಾಮಾಲೆ, ಗಾಯ ಹೀಗೆ ಹತ್ತು ಹಲವು ರೀತಿಯ ಶಾರೀರಿಕ ತೊಂದರೆಗಳು ಸ್ವಾಭಾವಿಕವಾಗಿ ಕಾಡುತ್ತವೆ. ಜನಪದರು ದಿನನಿತ್ಯದ ಜೀವನದಲ್ಲಿ ಇಂಥ ಹಲವಾರು ಸಮಸ್ಯೆಗಳನ್ನು ಎದುರಿಸಬೇಕಾಗುತ್ತಿತ್ತು. ಆಸ್ಪತ್ರೆ ಸೌಕರ್ಯಗಳು ದೊರೆಯದಿದ್ದ ಸಂದರ್ಭಗಳಲ್ಲಿ ರೋಗಗಳಿಗೆ ಪರಿಹಾರಗಳನ್ನು ಜನಪದರೇ ಕಂಡುಕೊಳ್ಳಬೇಕಾಗಿತ್ತು. ಜನಪದರು ಅಪಾರ ಅನುಭದಿಂದ ತಮ್ಮ ಸುತ್ತಮುತ್ತಲಿನ ಪರಿಸರದಲ್ಲಿ ಸುಲಭವಾಗಿ ದೊರೆಯುವ ನಾರುಬೇರುಗಳಿಂದ, ಗಿಡಮೂಲಿಕೆಗಳಿಂದ ಸಣ್ಣಪುಟ್ಟ ರೋಗಗಳಿಗೆ ಮನೆಯಲ್ಲಿ ಔಷಧಿಯನ್ನು ತಯಾರು ಮಾಡಿಕೊಂಡು ರೋಗವನ್ನು ವಾಸಿ ಮಾಡಿಕೊಳ್ಳುತ್ತಿದ್ದರು. ಒಂದೊಂದು ಕಾಯಿಲೆಯನ್ನು ಗುಣಪಡಿಸಲು ಒಂದೊಂದು ಔಷಧಿ ಬಳಸಬೇಕೆಂಬುದನ್ನು ಅನುಭವದಿಂದ ಅರಿತರು. ಇದರಿಂದಾಗಿ ಹೊಸದೊಂದು ವಿದ್ಯೆ ತಿಳಿದಂತಾಯಿತು. ತಲೆಮಾರಿನಿಂದ ತಲೆಮಾರಿಗೆ, ಗುರುವಿನಿಂದ ಶಿಷ್ಯನಿಗೆ, ತಂದೆಯಿಂದ ಮಗನಿಗೆ ಈ ವಿದ್ಯೆ ಪ್ರಸಾರವಾಯಿತು. ಈ ವಿದ್ಯೆಯಲ್ಲಿ ಪಾರಂಗತರಾದವರು ಆಯಾ ಪರಿಸರದಲ್ಲಿ ಗೌರವ ಹಾಗೂ ಆಧರಗಳನ್ನು ಪಡೆದರು. ಇವರನ್ನು ನಮ್ಮ ಗ್ರಾಮೀಣ ಜನರು ಜನಪದ ವೈದ್ಯರೆಂದು ಅಥವಾ ಪಂಡಿತರೆಂದು ಕರೆಯುವುದು ವಾಡಿಕೆ. ತಾವು ಕೊಟ್ಟ ಔಷಧಿಗಳಿಗೆ ಯಾವ ಪ್ರತಿಫಲವನ್ನು ಅವರು ಅಪೇಕ್ಷೆ ಪಡುತ್ತಿರಲಿಲ್ಲ. ಜೊತೆಗೆ ಪ್ರತಿಫಲ ಬಯಸಿದರೆ ಔಷಧಿ ಹಿಡಿಸುವುದಿಲ್ಲವೆಂಬ ಪ್ರಬಲವಾದ ನಂಬಿಕೆ ಅವರಲ್ಲಿತ್ತು. ಎಲ್ಲರಿಗೂ ಹೇಳಿದರೆ ಅದರ ಮಹತ್ವ ಕಡಿಮೆಯಾಗಬಹುದು ಅಥವಾ ಈ ವಿದ್ಯೆ ಎಲ್ಲಿ ಅವಿವೇಕಿಗಳ ಕೈಸೇರಿ ಜನರಿಗೆ ಕೆಡುಕಾಗಬಹುದು ಎಂಬ ದೃಷ್ಟಿಯಿಂದ ಈ ವೈದ್ಯರು ಔಷಧಿಗಳ ಮತ್ತು ಗಿಡಮೂಲಿಕೆಗಳ ಹೆಸರುಗಳನ್ನು ಗುಪ್ತವಾಗಿಡುತ್ತಾರೆ.

ಜನಪದ ವೈದ್ಯದ ಇತಿಹಾಸ ದೊಡ್ಡದಾಗಿದ್ದರೂ ಸ್ಪಷ್ಟವಾಗಿ ಗುರುತಿಸುವುದು ಬಹಳ ಕಷ್ಟವಾದ ಕೆಲಸ. ಏಕೆಂದರೆ ಅದು ಮಾನವನ ಇತಿಹಾಸದೊಂದಿಗೆ ಹಾಸುಹೊಕ್ಕಾಗಿ ಬಂದಿದೆ. ಅದರ ಉಗಮ ಮತ್ತು ವಿಕಾಸ ಎಲ್ಲಿಯೂ ಸ್ಪಷ್ಟವಾಗಿ ದಾಖಲಾಗಿಲ್ಲ.

ಜನಪದ ವೈದ್ಯವನ್ನು ನಾಟಿ ಔಷಧಿ, ನಾಡ ಔಷಧಿ, ಹಳ್ಳಿ ಔಷಧಿ, ಹಸಿರು ಔಷಧಿ, ಮನೆಮದ್ದು, ಕಾಡು ಮದ್ದು ಮತ್ತು ಅನುಭವ ವೈದ್ಯ ಎಂಬ ಹಲವಾರು ಹೆಸರುಗಳಿಂದ ಕರೆಯುತ್ತಾರೆ.

ಜನಪದ ವೈದ್ಯಾಧ್ಯಯನ ಇತಿಹಾಸ ಜಾನಪದದ ಇತರ ರೂಪಗಳ ಅಧ್ಯಯನದಿಂದ ಬೇರೆಯಾದುದಲ್ಲ. ಎಲ್ಲಾ ಅಧ್ಯಯನಗಳಂತೆ ಇಲ್ಲಿಯೂ ಮೊದಲಿಗೆ ಸಾಹಿತ್ಯಿಕ ಅಥವಾ ಭಾಷಾ

ವೈಜ್ಞಾನಿಕ ದೃಷ್ಟಿಯಿದ್ದು ಅನಂತರ ಸಾಮಾಜಿಕ ಹಾಗೂ ಕ್ರಿಯಾತ್ಮಕ ದೃಷ್ಟಿಗೆ ಹೊರಳಿರುವುದು ಕಂಡುಬರುತ್ತದೆ. ಜಾನಪದದ ತಾತ್ವಿಕ ಅಧ್ಯಯನದ ಸೆಳೆತಕ್ಕೊಳಗಾದ ಯುರೋಪಿಯನ್ ಜಾನಪದ ಅಧ್ಯಯನಕಾರರು ಹತ್ತೊಂಬತ್ತನೆಯ ಶತಮಾನದಲ್ಲೇ ಮಂತ್ರಗಳ (Charms) ಸಂಗ್ರಹಕ್ಕೆ ತೊಡಗಿ ಅವುಗಳ ಪರಂಪರೆ ಹಾಗೂ ಭಾಷಾ ವೈಜ್ಞಾನಿಕ ಅಧ್ಯಯನಕ್ಕೆ ಒತ್ತು ಕೊಟ್ಟಿರುವುದು ಕಂಡುಬರುತ್ತದೆ. ಫ್ರೇಜರ್ ಅವರಿಂದ ತೊಡಗಿ ಮಲಿನೋಸ್ಕಿ ಅವರವರೆಗೆ ನಡೆದ ಮಂತ್ರವಿದ್ಯೆಯ ಅಧ್ಯಯನ ನಾನಾ ಮುಖಗಳಿಂದ ಜನಪದ ವೈದ್ಯವನ್ನು ಅರಿತುಕೊಳ್ಳುವ ಅವಕಾಶವನ್ನು ವಿಸ್ತರಿಸಿದೆ. ಅದರಲ್ಲೂ ಅನುಕರಣಾತ್ಮಕ ಹಾಗೂ ಸೋಂಕು ಮಂತ್ರವಿದ್ಯೆಯ ಬಗೆಗಿನ ಸಾಮಗ್ರಿ ಉಪಯುಕ್ತವಾದುದು.

ಜನಪದ ವೈದ್ಯವನ್ನು ಅದರ ಕ್ರಮಬದ್ಧ ಅಧ್ಯಯನದ ದೃಷ್ಟಿಯಿಂದ ಮುಖ್ಯವಾಗಿ ಮಾನವ ವೈದ್ಯ ಮತ್ತು ಪ್ರಾಣಿ ವೃದ್ಯ ಎಂದು ವಿಭಜಿಸಿಕೊಳ್ಳಬಹುದು. ಮಾನವನಿಗೆ ಸಂಬಂಧಿಸಿದ ವೈದ್ಯ ಮಾನವ ವೈದ್ಯವೆನಿಸಿದರೆ ಪ್ರಾಣಿಗಳಿಗೆ ಸಂಬಂಧಿಸಿದ ವೈದ್ಯ ಪ್ರಾಣಿ ಅಥವಾ ಪಶುವೈದ್ಯವಾಗುತ್ತದೆ.

ಪ್ರಾಣಿ ಜನಪದ ವೈದ್ಯದಲ್ಲಿ ಎರಡು ಬಗೆಗಳನ್ನು ಗುರುತಿಸಲಾಗಿದೆ.

೧. ಸಹಜ ಜನಪದ ವೈದ್ಯ (Natural Folk Medicine)

೨. ಮಂತ್ರತಂತ್ರ ಜನಪದ ವೈದ್ಯ (Magico Religious Folk Medicine)

ಗಿಡಮೂಲಿಕೆ, ಲೋಹ ಮತ್ತು ಪ್ರಾಣಿ ವಸ್ತುಗಳನ್ನು ಬಳಸಿಕೊಳ್ಳುವ ಮೊದಲನೆಯ ಬಗೆಯೇ ಸಹಜ ಜನಪದ ವೈದ್ಯ. ಮಾಟ ಮಂತ್ರಗಳನ್ನೂ ಮತಿಯ ನಂಬಿಕೆಗಳನ್ನೂ ಆಧರಿಸಿರುವಂಥದು ಎರಡನೆಯ ಬಗೆ. ಮೊದಲನೆಯದು ಕೃಷಿ ಸಂಸ್ಕೃತಿಯಿಂದ ವಿಕಾಸ ಹೊಂದಿದರೆ ಎರಡನೆಯದಕ್ಕೆ ರಸವಿದ್ಯೆ ಪ್ರೇರಕ. ಒಂದು ನಿಸರ್ಗದ ಮಡಿಲಲ್ಲಿ ಕೃಷಿಕ ಸಮಾಜದಲ್ಲಿ ಬೆಳೆದರೆ, ಮತ್ತೊಂದು ಮಧ್ಯಮ ವರ್ಗದ ನಾಗರೀಕ ಸಮಾಜದಲ್ಲಿ ತಲೆ ಎತ್ತುತ್ತದೆ. ಮೊದಲನೆಯದರ ಬೆಳವಣಿಗೆಯಲ್ಲಿ ಸ್ತ್ರೀ ಪುರುಷರಿಬ್ಬರೂ ಪಾಲುದಾರರಾದರೆ ಎರಡನೆಯದರಲ್ಲಿ ಪುರುಷರದೇ ವಹಿವಾಟು.

ಈ ಎರಡೂ ಬಗೆಗಳು ಜನಪ್ರಿಯವಾಗಿರುವ ಪ್ರಾಣಿ ಜನಪದ ವೈದ್ಯ ರೋಗ ಪತ್ತೆ ಮಾಡುವ ದೃಷ್ಟಿಯಿಂದ, ಚಿಕಿತ್ಸೆ ನೀಡುವ ದೃಷ್ಟಿಯಿಂದ, ಪ್ರಯೋಗದ ದೃಷ್ಟಿಯಿಂದ ಮಾನವ ವೈದ್ಯಕ್ಕಿಂತ ಹೆಚ್ಚು ಕಷ್ಟಕರವಾದುದು. ಪ್ರಾಣಿಗಳಿಗೆ ಮಾತಿನ ಶಕ್ತಿಯಿಲ್ಲದಿರುವುದರಿಂದ ಅವು ತಮಗಾಗುವ ಬಾಧೆಗಳನ್ನು ಮಾತಿನ ಮೂಲಕ ವ್ಯಕ್ತಪಡಿಸಲು ಸಾಧ್ಯವಾಗದಿರುವುದರಿಂದ ಅವುಗಳ ರೋಗದ ಲಕ್ಷಣವನ್ನು ಕಂಡುಕೊಳ್ಳುವುದು ತುಂಬ ಕಷ್ಟವೇ. ಈ ದೃಷ್ಟಿಯಿಂದ ಮನುಷ್ಯ ವೈದ್ಯಕ್ಕಿಂತ ಪ್ರಾಣಿವೈದ್ಯ ಹೆಚ್ಚು ಕಷ್ಟಕರ.

ಕೃಷಿ ಸಂಸ್ಕೃತಿಯಲ್ಲಿ ಸಾಕು ಪ್ರಾಣಿಗಳಿಗೆ ಮಹತ್ವದ ಸ್ಥಾನವಿದೆ. 'ಪ್ರಾಣಿಗಳಿಲ್ಲದ ಕೃಷಿಕನ ಮನೆ ಆತ್ಮವಿಲ್ಲದ ದೇಹದಂತೆ'. ತಮ್ಮ ಕೃಷಿ ಕಾರ್ಯಗಳಿಗಾಗಿ ಎತ್ತು, ಕೋಣಗಳನ್ನು ಸಾಕುವ ಕೃಷಿಕ ಹಾಲು ಹಯನಾದಿಗಳಿಗಾಗಿ ಹಸು ಎಮ್ಮೆಗಳನ್ನೂ, ಆಹಾರಕ್ಕಾಗಿ ಕುರಿ ಕೋಳಿ

ಹಂದಿಗಳನ್ನೂ, ರಕ್ಷಣೆಗಾಗಿ ನಾಯಿ, ಬೆಕ್ಕನ್ನೂ ಸಾಕುವುದು ಸಾಮಾನ್ಯ. ಒಟ್ಟಿನಲ್ಲಿ ಕೃಷಿಕ ಜೀವನದ ಬಂಡವಾಳವೇ ಈ ಸಾಕುಪ್ರಾಣಿಗಳ ಸಮೂಹ. ಅಂತೆಯೇ ಕೃಷಿಕರು ತಮ್ಮ ದೇಹಾರೋಗ್ಯಕ್ಕಿಂತ ಸಾಕು ಪ್ರಾಣಿಗಳ ಬಗೆಗೆ ಹೆಚ್ಚು ಕಾಳಜಿ ತೋರುವುದು ಸಹಜ.

ಪ್ರಾಣಿವೈದ್ಯ ನಿನ್ನೆ ಮೊನ್ನೆಯದಲ್ಲ. ಅದಕ್ಕೆ ಅದರದೇ ಆದ ಒಂದು ಸುದೀರ್ಘ ಇತಿಹಾಸ ಮತ್ತು ಪರಂಪರೆಯಿದೆ. ಅಲ್ಲದೆ ಇತರೆ ಜಾನಪದ ರೂಪಗಳಂತೆ ಪ್ರಾಣಿ ವೈದ್ಯದ ಉಗಮ ವಿಕಾಸಗಳು, ಸ್ವರೂಪ ಲಕ್ಷಣಗಳು ಮತ್ತು ತಂತ್ರ ವಿಧಾನಗಳು ಪ್ರಪಂಚದಾದ್ಯಂತ ಒಂದೇ ರೀತಿಯಾಗಿವೆ. ತಮ್ಮ ಮೊದಲ ರೋಗ ಹಸಿವನ್ನು ನಿವಾರಿಸಿಕೊಳ್ಳಲು ಪ್ರಾಣಿಗಳು ತಮಗೆಟುಕಿದ ನೂರಾರು ಬಗೆಯ ಸೊಪ್ಪುಸದೆ, ಹಣ್ಣು ಹಂಪಲುಗಳನ್ನು, ಗೆಡ್ಡೆ ಗೆಣಸು, ಮಾಂಸಮಡ್ಡಿಗಳನ್ನು ತಿಂದಿರಬೇಕು. ಇವುಗಳಲ್ಲಿ ಕೆಲವುಗಳಿಂದ ಪ್ರತಿಕೂಲ ಪರಿಣಾಮಗಳಾಗಿರಬೇಕು. ಕಾಲ ಕಳೆದಂತೆ ಅವು ತಮ್ಮ ಅನುಭದಿಂದ ಇದು ಆಹಾರ ಯೋಗ್ಯ ಇದು ಅಲ್ಲ ಎಂಬುದನ್ನು ಕಂಡುಕೊಂಡಂತೆ ವಿಷ ಜಂತುಗಳು ಕಚ್ಚಿದಾಗ, ಗಾಯ, ಹುಣ್ಣುಗಳಾದಾಗ ಔಷಧಗಳನ್ನು ಗುರುತಿಸಿಕೊಂಡಿರಬೇಕು. ಉದಾಹರಣೆಗೆ ನಾಯಿ ತನಗೆ ಅಜೀರ್ಣವಾದಾಗ ಇಬ್ಬನಿಯ ಹನಿಗಳಿರುವ ಗರುಕೆ ಹುಲ್ಲನ್ನು ಕಿತ್ತುತಿಂದು ವಾಂತಿ ಮಾಡುವುದು; ಪಕ್ಷಿಯೊಂದು ಕಾಲು ಮುರಿದುಕೊಂಡಿದ್ದರೆ ಉಳಿದವು ಅದಕ್ಕೆ ವಿಶಿಷ್ಟ ಬಗೆಯ ಮಣ್ಣನ್ನು ಲೇಪಿಸಿ ಗಾಯದಲ್ಲಿರಬಹುದಾದ ಹುಳುಗಳನ್ನು ತಿನ್ನುವುದರಿಂದ ಅದು ವಾಸಿಯಾಗುವುದು; ತನ್ನ ಮರಿಗಳಿಗೆ ಗಾಯವಾಗಿದ್ದರೆ ತಾಯಿ ನಾಲಿಗೆಯಿಂದ ನೆಕ್ಕಿ ವಾಸಿ ಮಾಡುವುದು. ನಾಗರಹಾವಿನೊಡನೆ ಸೆಣಸಿದ ಮುಂಗುಸಿ ತನ್ನ ದೇಹವನ್ನೆಲ್ಲಾ ಆವರಿಸಿದ ವಿಷದಿಂದ ಮುಕ್ತವಾಗಲು ಸರ್ಪಗಂಧಿ ಎಲೆಗಳನ್ನು ತಿನ್ನುವುದು ಇವೇ ಮುಂತಾದವುಗಳನ್ನು ಕಾಣಬಹುದು. ಸ್ವಯಂ ಪ್ರಾಣಿಗಳು ತಮಗಾಗಿ ತಾವೇ ಕಂಡುಕೊಂಡ ವೈದ್ಯ ವಿಧಾನಗಳೆಂಬುದನ್ನು ಮನಗಂಡಾಗ ಪ್ರಾಣಿ ವೈದ್ಯ ಪರಂಪರೆ ಮತ್ತು ಪ್ರಾಚೀನತೆಯ ಅರಿವಾಗುತ್ತದೆ; ಅದು ಪ್ರಾಣಿಜೀವಿಗಳಷ್ಟೇ ಹಳೆಯದು ಎಂಬುದು ದೃಢವಾಗುತ್ತದೆ.

ಮಾನವ ಇತರೆ ಪ್ರಾಣಿಗಳಿಗಿಂತ ತುಂಬಾ ಮುಂದುವರೆದಿದ್ದಾನೆ. ಅವನ ಯೋಚನಾ ಲಹರಿ ಇತರ ಪ್ರಾಣಿಗಳಿಗಿಂತ ಸಾವಿರ ಪಾಲು ಮುಂದಿದೆ. ಇವನ ನಿರಂತರ ಹುಡುಕಾಟ ಜೀವನದ ಕುರಿತು ಇವನಿಗಿರುವ ಕಾಳಜಿ ಇವನನ್ನು ನಿರಂತರವಾದ ಹೊಸ, ಹೊಸ ಅವಿಷ್ಕಾರಗಳಿಗೆ ತೊಡಗುವಂತೆ ಮಾಡಿದೆ. ಮನುಷ್ಯ ಅತೀ ಪ್ರಾಚೀನ ಕಾಲದಿಂದಲೂ ಮಾಂಸಹಾರಿಯಾಗಿದ್ದು, ನಂತರ ಸಸ್ಯಹಾರಕ್ಕೆ ತಿರುಗಿ ಮಾಂಸ ಮತ್ತು ಸಸ್ಯವನ್ನು ಏಕೀಭಾವವಾಗಿ ಉಪಯೋಗಿಸಿದ. ಆಹಾರವನ್ನು ಬೇಯಿಸಿ ಕೊಂಡು ತಿನ್ನುವ ಪರಿಪಾಠಕ್ಕೆ ಇಳಿದುದು ಹೊಸ ಆಹಾರ ಕ್ರಮವನ್ನು ಕಂಡುಕೊಂಡುದ್ದು ನಿರಂತರ ಸಂಶೋಧನೆಯ ಫಲವಾಗಿದೆ.

ಪ್ರಪಂಚದ ಇಂದಿನ ವೈದ್ಯ ಪದ್ಧತಿಗಳಿಗೆ ತಾಯಿ ಬೇರು ಜನಪದ ವೈದ್ಯ. ಈ ಜನಪದ ವೈದ್ಯವು ಆಯಾ ಪರಿಸರ, ಗುಂಪು, ಬುಡಕಟ್ಟು ಸಮುದಾಯಗಳಲ್ಲಿ ಭಿನ್ನ ಭಿನ್ನವಾದ

ರೀತಿಯಲ್ಲಿಯೇ ಬಳಕೆಗೊಳ್ಳುತ್ತವೆ. ಈ ಎಲ್ಲಾ ಸಮುದಾಯ ಗುಂಪುಗಳ ವೈದ್ಯ ಪದ್ಧತಿಯ ಮೂಲ ಉದ್ದೇಶ ಮಾತ್ರ ಅದರೊಳಗಿನ ರೋಗ ರುಜಿನಗಳನ್ನು ಹೊಡೆದೋಡಿಸುವುದಾಗಿದೆ. ಜನಪದ ವೈದ್ಯದಲ್ಲಿ ಮೂರು ಗುಂಪುಗಳಾಗಿ ಸ್ಥೂಲವಾಗಿ ಗುರುತಿಸಬಹುದು. ೧. ಸಸ್ಯ ಜನಪದ ವೈದ್ಯ, ೨. ಖನಿಜಜನಪದ ವೈದ್ಯ ಮತ್ತು ೩. ಮಂತ್ರಗಾರಿಕೆ. ಜನಪದ ವೈದ್ಯದಲ್ಲಿ ಮನುಷ್ಯ ಮತ್ತು ಪ್ರಾಣಿ ಜನಪದ ವೈದ್ಯವೆಂದೂ ವಿಂಗಡಿಸಬಹುದು. ರ್‍ಯಾಡ್ ಕ್ಲಿಪ್-ಬ್ರೌನ್, ಡರ್ ಕ್ಲಿಮ್, ರೂತ್‌ಬೆನಡಿಕ್ಟ್, ಲೆವಿಸ್ಟ್ರಾಸ್‌ನ ಅಭಿಪ್ರಾಯಗಳ ಆಧಾರದ ಮೇಲೆ ಆರ್.ಎಸ್.ಬಾಗ್ಗಸರು ಜನಪದ ಕ್ಷೇತ್ರದಲ್ಲಿ ಅಧ್ಯಯನಗಳು ಸಾಧ್ಯವೆಂಬುದನ್ನು ಅವರು ನೀಡಿರುವ ಜಾನಪದ ಕ್ಷೇತ್ರದ ವೈಜ್ಞಾನಿಕ ವರ್ಗೀಕರಣವೇ ಸಾಕ್ಷಿ (ಆರ್.ಬಿ.ಕುಮಾರ್:೨೦೦೦:೫೬)

**ವೈದ್ಯ ಪದ್ಧತಿ : ಪ್ರಾಣಿ :**

ಮರಿಯಮ್ಮನಹಳ್ಳಿಯಲ್ಲಿ ಪಶುಗಳಿಗೆ ಗಿಡಮೂಲಕೆಯಿಂದ ಔಷಧಿಗಳನ್ನು ಕೊಡುವ ಪದ್ಧತಿ ಇಂದಿಗೂ ಕಂಡು ಬರುತ್ತದೆ. ಇಲ್ಲಿನ ರೈತರು, ಪಶು ಸಾಕಣಿಕೆಗಾರರು ಗಿಡಮೂಲಿಕೆಗಳನ್ನು ಪಶುಗಳಿಗೆ ಕೊಡುವುದನ್ನು ನೋಡಬಹುದಾಗಿದೆ. ಪಶು ವೈದ್ಯರು ಗಿಡಮೂಲಿಕೆಗಳನ್ನು ಸಮೀಪದ ಗುಂಡಾರಣ್ಯ ಮತ್ತು ಮುಳುಗಡೆಯಾದ ನಾಣಿಕೇರಿ ಹತ್ತಿರ ಇರುವ ತಂಬಿಟ್ಟಿನ ಗುಡ್ಡದ ಹತ್ತಿರದಲ್ಲಿ ಗಿಡಮೂಲಿಕೆಗಳನ್ನು ತಂದು ಅದರಿಂದ ಚಿಕಿತ್ಸೆ ಕೊಡುವುದನ್ನು ನೋಡಬಹುದಾಗಿದೆ.

ಎತ್ತುಗಳಿಗೆ ಜ್ವರ ಬಂದರೆ ನಂಜುನಾರಾಯಿಣಿ ಗಿಡದ ಎಲೆಗಳನ್ನು ತೆಗೆದುಕೊಂಡು ಅದರ ಜೊತೆ ಮೆಣಸು ಬೆಳ್ಳುಳ್ಳಿ ಸೇರಿಸಿ ಎತ್ತುಗಳಿಗೆ ಕೊಟ್ಟರೆ ಜ್ವರ ಕಡಿಮೆ ಆಗುತ್ತದೆ. ಪಶುಗಳಿಗೆ 'ಕೂನ್ನು' ಎಂಬ ರೋಗ ಬರುತ್ತದೆ. ಇದು ಬಂದರೆ ಕಾಲುಗಳಲ್ಲಿ ಉಸಿರು ಇಲ್ಲಿದ ಹಾಗೆ ಆಗಿ ಅವುಗಳು ಹಾಗೆ ನಿಂತುಕೊಳ್ಳುತ್ತವೆ. ಅದಕ್ಕೆ ಬೇವಿನ ಮರದ ಚಕ್ಕೆಗಳನ್ನು ತೆಗೆದುಕೊಂಡು ಅದನ್ನು ಪುಡಿ ಮಾಡಿ ಕುಡಿಸಿದರೆ ಈ ಕೂನ್ನು ರೋಗ ಹೋಗುತ್ತದೆ.

ದನಗಳು ಈಯುವಾಗ ಕರವು ಸರಿಯಾಗಿ ಹೊರ ಬರುತ್ತಿರುವುದಿಲ್ಲ ಆಗ ತಮ್ಮ ಕೈಯಿಂದಲೇ ಕರುವನ್ನು ಹೊರ ತೆಗೆದು ಔಷದ ಕೊಡುತ್ತಾರೆ.

ದನಗಳು ಎಮ್ಮೆಗಳು ಈಯುವಾಗ ಸರಿಯಾಗಿ ಮಾಸ ಆಗಿರುವುದಿಲ್ಲ. ಅಗ 'ಮಧುವನಿಕ ಗಿಡದ' ಎಲೆ ಕಾಂಡವನ್ನು ತಂದು ಅದನ್ನು ಅರೆದು ಮಾಸ ಆದ ಜಾಗಕ್ಕೆ ಹಚ್ಚುತ್ತಾರೆ.

ಪಶುಗಳಿಗೆ ನಿಶಕ್ತಿಯಾದ ಉಂಟಿಗೆ ತಪ್ಪಲ, ಕಟ್ಟಿ ಸೊಪ್ಪು ಹಾಕಿ ಪಶುಗಳಿಗೆ ತಿನ್ನಿಸುತ್ತಾರೆ ಇದನ್ನು ಮೂರು ದಿನ ತಿನ್ನಿಸಿದರೆ ನಿಶಕ್ತಿ ಹೋಗುತ್ತದೆ.

ಪಶುಗಳಿಗೆ ಹುಳ ಮುಟ್ಟಿದರೆ ಅಂದರೆ ಹಾವು ಚೇಳು ಕಡಿದರೆ, ಮುಳುಗಡೆಯಾದ ನಾಣಿಕೇರಿ ತುಂಬಿಟ್ಟಿನ ಗುಡ್ಡದಲ್ಲಿ ಸಿಗುವ 'ಹೂಳುದ ಗಿಡದ ಕಾಂಡವನ್ನು ತೆಗೆದುಕೊಂಡು ಅದನ್ನು ಬಿಸಲಲ್ಲಿ ಒಣಗಿಸಿ ಅದಕ್ಕೆ ಮೆಣಸು ಬೆಳ್ಳುಳ್ಳಿ ಸೇರಿಸಿ-ಹುಳ ಮುಟ್ಟಿದ ಜಾಗಕ್ಕೆ ಹಚ್ಚಿದರೆ ಬೇಗ ಗುಣವಾಗುತ್ತದೆ.

ಪಶುಗಳಿಗೆ 'ರಥಗುಂದ' ಎಂಬ ರೋಗ ಬರುತ್ತದೆ. ಈ ರೋಗ ಬಂದರೆ ಇವುಗಳು ಮುಂದಕ್ಕೆ ಚಲಿಸುವುದಿಲ್ಲ. ಸೆಟೆದು ನಿಂತು ಬಿಡುತ್ತವೆ. ಆಗ ಕಾದ ಕಬ್ಬಿಣದಿಂದ ಬರೆ ಹಾಕುತ್ತಾರೆ. ಬರೆ ಹಾಕಿದ ಜಾಗಕ್ಕೆ ಪಶುಗಳ ದೇಹದಲ್ಲಿ ಶೇಖರಣೆಯಾದ ಕೆಟ್ಟ ಹೊರಕ್ತ ರಕ್ತವು ಬರುತ್ತದೆ.

ಪಶುಗಳಾದ ಎತ್ತು, ದನ, ಎಮ್ಮೆಗಳಿಗೆ ಕೋಡು ಮುರಿದಾಗ ರಂಜಕ ತಪ್ಪಲು ತೆಗೆದುಕೊಂಡು ಅದನ್ನು ಸಣ್ಣಗೆ ರುಬ್ಬಿ, ಅದರ ಜೊತೆ ಸುಣ್ಣ ಕಲಸಿ ಕೊಂಬು ಮುರಿದ ಜಾಗಕ್ಕೆ ಕಟ್ಟಿದರೆ ಆ ಗಾಯ ವಾಸಿಯಾಗಿ ಕೊಂಬು ಮತ್ತೆ ಬೆಳೆಯುತ್ತದೆ. ಅಥವಾ ಕೊಂಬು ಬೆಳೆಯದಿದ್ದರೆ. ಅದಕ್ಕೆ ಪೆನ್ಸಿಲ್ ಪುಡಿಯನ್ನು ಬಟ್ಟೆಯಲ್ಲಿ ಹಾಕಿ ಕಟ್ಟಿದರೆ ಕೊಂಬು ಬೆಳೆಯುತ್ತದೆ.

ಹಾಲು ಕೊಡುವ ಆಕಳುಗಳಿಗೆ ಕಣ್ಣು ದೃಷ್ಟಿಯಾಗಿದ್ದರೆ, ಲೋಬಾನವನ್ನು ಮಂತ್ರಿಸಿಕೊಡುತ್ತಾರೆ. ಆ ಲೋಭಾನ ಹಾಕಿದರೆ ಹಾಲು ಕೊಡುತ್ತದೆ ಎಂಬ ನಂಬಿಕೆ. ಹಾಲು ಕಡಿಮೆ ಕೊಡುವಂತಹ ಪಶುಗಳಿಗೆ 'ಮರಳುಮಾತಂಗಿ ತಪ್ಪಲು' ಅನ್ನು ತಿನ್ನಿಸಿದರೆ. ಮೂರು ದಿನ ಸುಮ್ಮನೆ ಇದ್ದು ಮರು ದಿನದಿಂದ ಜಾಸ್ತಿ ಹಾಲು ಕೊಡುತ್ತದೆ.

ಪಶುಗಳಿಗೆ ತುರುಕೆ ಉಂಟಾಗಿ ಮೈಮೇಲಿನ ಕೂದಲು ಉದುರಿದಾಗ ಆಗ ನಂಜುನಾರಾಯಿಣಿ ತಪ್ಪಲನ್ನು ಕರ್ಪೂರದ ಜೊತೆಗೆ ಪುಡಿ ಮಾಡಿ ಅದನ್ನು ಕೊಬ್ಬರಿ ಎಣ್ಣೆಯಲ್ಲಿ ಹಾಕಿ ಕಲಸಿ ಅದನ್ನು ಪಶುಗಳ ಮೈಗೆ ಹಚ್ಚಿದರೆ ತುರಕೆ, ಕೂದಲು ಉದುರುವುದು ಕಡಿಮೆಯಾಗುತ್ತದೆ.

ಹಾಲು ಕೊಡುವಂತ ಆಕಳು, ಎಮ್ಮೆ ಕೆಚ್ಚುಲುಗಳಲ್ಲಿ ಗಡ್ಡೆಯಾಗಿ ಹಾಲು ಬರದೆ ಹೋದರೆ ಔಡಲ ಎಣ್ಣೆ, ಎಳ್ಳಣ್ಣೆ, ಕೊಬ್ಬರಿ ಎಣ್ಣೆ ಈ ಮೂರನ್ನು, ಸತತವಾಗಿ ಮೂರು ದಿನ ಹಚ್ಚಿದರೆ ಗಡ್ಡೆ ಹೋಗುತ್ತದೆ ಹಾಗೂ ಹಾಲುನ್ನು ಹಿಂಡಿದರೆ ಹಾಲು ಚೆನ್ನಾಗಿ ಬರುತ್ತದೆ.

ದನಕರುಗಳು ಹೊಲ ಮುಂತಾದ ಪ್ರದೇಶಗಳಲ್ಲಿ ಮೇಯುವಾಗ ಏನನ್ನಾದರು ದಾಟಿದರೆ, ಅವುಗಳಿಗೆ ಕಾಲದೂಳ ಆಗುತ್ತದೆ. ಆಗ ಲೋಬಾನವನ್ನು ಹಾಕಿದರೆ ಮೇವನ್ನು ಚೆನ್ನಾಗಿ ತಿನ್ನುತ್ತವೆ.

ಕಣ್ಣು ದೃಷ್ಟಿಯಾದಾಗ, ಕೆಚ್ಚಲುಗಳಲ್ಲಿ ಗಡ್ಡೆಯಾಗಿ ಹಾಲು ಬರುವ ಬದಲು ರಕ್ತ ಬರುವಾಗ ಲೋಬಾನವನ್ನು ಹಾಕಿದರೆ ರಕ್ತ ಬರುವುದು ನಿಂತು, ಹಾಲು ಬರುತ್ತದೆ.

ಹಿಂಡಿರಸ, ಸಕ್ಕವರಿ ತಸಪ್ಪಲು, ತೊಂಡಿ ತಪ್ಪಲು, ಹಿರೇಮದ್ದಿನ ಬೇರನ್ನು ಸಣ್ಣಗೆ ತುಂಡು ಮಾಡಿ. ಇವುಗಳನ್ನು ಒಂದು ಗಡಿಗೆಯಲ್ಲಿ ಹಾಕಿ ಇದರ ಜೊತೆಗೆ ಅರಿಷಿಣ ಉಪ್ಪು ಹಾಕಿ, ಸೆಗಣಿಯ ತಿಪ್ಪೆಯಲ್ಲಿ ೨೧ ದಿನಗಳವರೆಗೆ ಮುಚ್ಚಿಡಬೇಕು.

ಸೆಗಣಿಯ ಶಾಖಕ್ಕೆ ಒಳಗಡೆ ಕುದಿಯುತ್ತ ರಸ ಆಗುತ್ತದೆ. ಇದನ್ನು ಪಶುಗಳ ಸರ್ವರೋಗಕ್ಕೆ ಬಳಸುತ್ತಾರೆ. ಇದನ್ನು ಮೂರು ದಿನ ಐದು ದಿನ ನೀಡಿದರೆ. ನಂಜಿನ ಕಾಯಿಲೆ, ನಿಶಕ್ತಿ, ಸಣ್ಣ ವಯಸ್ಸಿಗೆ ಕರುಗಳನ್ನು ಹಾಕಿದರೆ ಮತ್ತೆ ಗರ್ಭಕಟ್ಟಲು ಈ ಔಷಧ ಕೊಟ್ಟರೆ ಮತ್ತೆ ಗರ್ಭ ಕಟ್ಟುತ್ತದೆ.

ಈ ಔಷಧವು ಕೆಲಸ ಮಾಡುವುದಿಲ್ಲ ಎಂಬ ಅಪನಂಬಿಕೆ ಬಂದಾಗ ಈ ಪಶು ವೈದ್ಯರು ಆಲೋಪತಿಕ್ ಔಷಧ ನೀಡುತ್ತಾರೆ. ಈ ಗಿಡ ಮೂಲಿಕೆ ಔಷಧಿಗಳನ್ನು ನೀಡಿದ ೨೪ ಘಂಟೆವರೆಗೆ ಕೆಲಸ ಮಾಡಿ ನಂತರ ಗುಣ ಮುಖವಾಗುತ್ತದೆ. ಆದರೆ ಇಂಗ್ಲೀಷ್ ಔಷದಿ ನೀಡಿದ ೪ ಗಂಟೆಯೊಳಗೆ ಕೆಲಸ ಮಾಡಿ ಗುಣ ಮುಖವಾಗುತ್ತವೆ. ಹೀಗಾಗಿ ಇಂದು ರೈತರು, ಹೈನುಗಾರಿಕೆ ಮಾಡುವವರು ಈ ಔಷಧಿಗಳಿಗೆ ಮಾರು ಹೋಗುತ್ತಿದ್ದಾರೆ. ಇವರಿಗೆ ಪಶುಗಳು ಗುಣ ಮುಖವಾಗುವುದು ಮುಖ್ಯವಲ್ಲ, ತಮ್ಮ ಕೆಲಸ ಮಾಡಲು ತಯಾರಾಗಿರುವುದು ಮುಖ್ಯವಾಗಿರುತ್ತದೆ.

ಇಂದು ಗಿಡಮೂಲಿಕೆ ಔಷಧ ನೀಡುವವರೆ ಇಂಗ್ಲೀಷ್ ಔಷಧಿ ನೀಡಲು ಶುರುಮಾಡಿದ್ದಾರೆ. ಪಶು ವೈದ್ಯಕೀಯ ಓದಿದವರು ನೀಡುವ ಔಷಧ ಪ್ರಮಾಣಕ್ಕಿಂತ ಇವರು ಹೆಚ್ಚಿನ ಪ್ರಮಾಣ ಔಷಧ ನೀಡಿ ಗುಣ ಮುಖರಾಗಿಸುತ್ತಾರೆ. ವೈದ್ಯರು 5ML ಗಿಂತ ಹೆಚ್ಚಿನ ಔಷಧಿ ನೀಡುವುದು ಕಡಿಮೆ, ಇವರು ಪಶುಗಳ ತೂಕವನ್ನು ನೋಡಿ ಔಷಧ ಪ್ರಮಾಣವನ್ನು ನಿಗದಿ ಮಾಡಿ ನೀಡುತ್ತಾರೆ.

ಇವರುಗಳು ಹಣದ ಅಪೇಕ್ಷೆ ಮಾಡುವುದಿಲ್ಲ. ತಮ್ಮ ತಲೆಮಾರಿನಿಂದ ಬಂದಂತಹ ಜ್ಞಾನವನ್ನು ಬಳಸಿ ಔಷಧ ನೀಡುತ್ತಾರೆ. ದನ ಕರುಗಳ ಚಿಕಿತ್ಸೆಗೆ ಹೋಗಿ ಬರುವವರಿಗೆ ಬಸ್ಸಿನ ಪ್ರಯಾಣ ವೆಚ್ಚ ಜೊತೆಗೆ ಊಟದ ವೆಚ್ಚವನ್ನು ನೀಡುತ್ತಾರೆ. ಸ್ಥಳೀಯವಾಗಿ ನೋಡಲು ಹೋದರೆ ಯಾವುದೇ ವೆಚ್ಚವನ್ನು ಕೇಳುವುದಿಲ್ಲ. ಕೊಡುವವರು ತಮ್ಮ ಆರ್ಥಿಕ ಸ್ಥಿತಿಗೆ ಅನುಗುಣವಾಗಿ ನೀಡುತ್ತಾರೆ.

ಇಂದು ಜನಪದ ವೈದ್ಯರೆ ಇಂಗ್ಲೀಷ್ ಔಷಧಿಗಳನ್ನು ಕೊಡುವುದನ್ನು ಕಲಿತಿದ್ದಾರೆ. ಇವರೆ ಔಷಧಿಯ ಹೆಸರನ್ನು ಬರೆದು ಕೊಡುತ್ತಾರೆ ಯಾವ ಸಮಯಕ್ಕೆ ಎಷ್ಟು ಕೊಡಬೇಕು ಎಂದು ಹೇಳಿ ಕಳುಹಿಸುತ್ತಾರೆ.

ತಾವು ಹಿರಿಯರಿಂದ ಕಲಿತ ಈ ಪಾರಂಪರಿಕ ಜ್ಞಾನವನ್ನು ಇಂದು ಜನರು ಕಡೆಗಣಿಸುವುದರ ಬಗ್ಗೆ ಇವರಿಗೆ ಅಸಮಾಧಾನವಿದೆ. ಮುಂದಿನ ಪೀಳಿಗೆಯವರು ಈ ಜ್ಞಾನದ ಬಗ್ಗೆ ಗಮನ ಹರಿಸುತ್ತಿಲ್ಲ ಎಂಬುದು ಇವರ ಚಿಂತೆಯಾಗಿದೆ.

### ವೈದ್ಯ ಪದ್ಧತಿ : ಮಾನವ :

ಮಕ್ಕಳಿಗೆ ಜ್ವರ ಬಂದಾಗ ಚಿಟಿಕೆ ಹಾಕುತ್ತಾರೆ. ಚಿಟಕೆ ಎಂದರೆ ಒಂದು ಕಡ್ಡಿಯನ್ನು ತೆಗೆದು ಕೊಂಡು ಅದನ್ನು ಬೆಂಕಿಯಲ್ಲಿ ಕಾಯಿಸಿ ಅದನ್ನು ದುರ್ಬಲ ನರಗಳಿಗೆ ಕಾಯಿಸಿದ ಕಡ್ಡಿಯಿಂದ ಚಿಟಿಕೆ ರೂಪದಲ್ಲಿ ಮುಟ್ಟಿಸುತ್ತಾರೆ ಆಗ ಜ್ವರ ಕಡಿಮೆಯಾಗುತ್ತದೆ.

ಇದಲ್ಲದೆ ಯಾವ ನಕ್ಷತ್ರಗಳಲ್ಲಿ ಜ್ವರ ಬಂದರೆ ಎಷ್ಟು ದಿನ ಇರುತ್ತದೆ ಎಂದು ಹೇಳುತ್ತಾರೆ.

ರೋಹಿಣಿ ಪುರ್ವಸು, ಪುಷ್ಯ, ಉತ್ತರ-ಬಾದ್ರ-ಈ ನಕ್ಷತ್ರಗಳಲ್ಲಿ ಜ್ವರ ಬಂದರೆ ೭ ದಿವಸ ಜ್ವರ ಕಾಡುವುದು.

ಅಶ್ವಿನಿ, ಕೃತಿಕ, ಮೂಲ, ಶತತಾರ, ಚಿತ್ತ, ಶ್ರವಣ, ಮಾಗಗಳಲ್ಲಿ ೨೦ ದಿವಸ ಜ್ವರ ಇರುತ್ತದೆ.

ದನಿಷ್ಠ, ವಿಷಕ, ಹಸ್ತ ಗಳಲ್ಲಿ ಜ್ವರ ಬಂದರೆ ೨೫ ದಿವಸಗಳವರೆಗೆ ಭರಣಿ, ಮೃಗಶಿರ, ಹಸ್ತಗಳಲ್ಲಿ ಜ್ವರ ಬಂದರೆ ೨೫ ದಿವಸಗಳವರೆಗೆ ಭರಣಿ, ಮೃಗಶಿರ, ಅರಿದ್ರ, ಅಶ್ವಜ, ಹುಬ್ಬ, ಸ್ವಾತಿ, ಅನುರಾಧ, ಜೇಷ್ಠ ಪೂರ್ವ ಆಷಾಡ, ಉತ್ತರ ಆಷಾಡ, ಪೂರ್ವಬಾದ್ರ, ರೇವತಿ ನಕ್ಷತ್ರಗಳಲ್ಲಿ ಜ್ವರ ಬಂದರೆ ೧೧ ದಿವಸ ಕಾಡುವುದು.

ದೊಡ್ಡವರಿಗೆ ಜ್ವರ ಬಂದರೆ-ನಿಂಬೆ ಹಣ್ಣಿನಿಂದ ಈಳೆ ತೆಗೆದು ಹಾಕವುದು.

ಊಟಕ್ಕೆ ಕುಂತಾಗ ಕಣ್ಣು ದೃಷ್ಠಿಯಾದರೆ, ಮಾಡಿದ ಅನ್ನವನ್ನು ಬಡಿಸದೆ ಮೂರು ಹಿಡಿ ಅನ್ನವನ್ನು ದೃಷ್ಟಿ ತೆಗೆದು ಅದನ್ನು ದಾರಿಯಲ್ಲಿ ಹಾಕಬೇಕು.

ಮಕ್ಕಳಿಗೆ ಕಾಲ್ದುಳಿ ಆಗಿದ್ದರೆ. ಒಂದು ಅಗಲವಾದ ಪಾತ್ರೆ ತೆಗೆದುಕೊಂಡು ಸೆಗಣಿಯ ಉಂಡಿ ಮಾಡಿ ಆ ಉಂಡಿಗೆ ನಾಲ್ಕು ಕಡ್ಡಿ ಸಿಗಿಸಿ, ಅದರ ಮೇಲೆ ೩ ತುಂಡು ಬೆಂದಿ ಚಿಟ್ಟೆ ಹಾಕಿ, ಆ ಪಾತ್ರೆಯಲ್ಲಿ ಮುಸರೆ ನೀರನ್ನು ಹಾಕಬೇಕು, ಬೆಂದಿ ಚಿಟ್ಟೆಗೆ ಬೆಂಕಿ ಹಾಕಿ, ಮತ್ತೊಂದು ಪಾತ್ರೆಯಿಂದ ಮಕ್ಕಳಿಗೆ ಮೂರು ಸಾರಿ ಈಳೆ ತೆಗೆದು ಬೆಂಕಿಹಾಕಿದ ಪಾತ್ರೆಗೆ ಮುಚ್ಚಬೇಕು. ಹಾಗೆ ಮುಚ್ಚಿದಾಗ ಮುಸರೆ ನೀರೆಲ್ಲಾ ಪಾತ್ರೆ ಒಳಗಡೆ ಹೋಗುತ್ತದೆ ಆಗ ಮಕ್ಕಳಿಗೆ ಕಾಲ್ದುಳಿ ಕಡಿಮೆ ಆಗುತ್ತದೆ.

ವಾಂತಿ-ಬೇದಿಯಾದರೆ- ನಿಂಬೆಹಣ್ಣಿನ ರಸ ಮತ್ತು ಜೇನು ತುಪ್ಪ ಕಲಸಿಕೊಟ್ಟರೆ ಕಡಿಮೆಯಾಗುತ್ತದೆ.

ಮಕ್ಕಳಿಗೆ ಹೊಟ್ಟೆನೋವು ಬಂದರೆ ಕೊಬ್ಬರಿ ಎಣ್ಣೆ ಕಾಯಿಸಿ ಹೊಟ್ಟೆಯ ಹೊಕ್ಕಳ ಸುತ್ತ ಹಾಗೂ ಕಾಲಿನ ಪಾದಗಳ ಹಿಂಬದಿಗಳಲ್ಲಿ ಮೃದುವಾಗಿ ನೇವುತ್ತಾರೆ.

ತಲೆನೋವು ಬಂದರೆ ಬೆಳ್ಳುಳ್ಳಿ ಅರೆದು ಹಣೆಯ ಬಲಗಡೆಯ ಭಾಗ ಹಾಗೂ ಎಡಗಡೆ ಭಾಗಕ್ಕೂ ಹಚ್ಚಿಕೊಳ್ಳಬೇಕು.

ಮನುಷ್ಯ ತನಗೆ ಗೊತ್ತಿದ್ದೋ ಗೊತ್ತಿಲ್ಲದೆಯೋ ಹತ್ತು ಹಲವು ಔಷಧಿಗಳನ್ನು ಕಂಡು ಕೊಂಡಿದ್ದಾನೆ. ಮನುಷ್ಯನಿಗೆ ಆಹಾರದಷ್ಟೇ ಆರೋಗ್ಯವು ಮುಖ್ಯ ಎನ್ನುವುದು ಇದು ಸೂಚಿಸುತ್ತದೆ. ಇವರು ಉಪಯೋಗಿಸುವ ಔಷಧಿಗಳಾಗಲಿ, ರೋಗನ್ನು ನಿಯಂತ್ರಿಸಲು ನಡೆಸುವ ತಾಂತ್ರಿಕ ಸ್ವರೂಪಗಳಾಗಲಿ ವೈಜ್ಞಾನಿಕತೆಯಿಂದ ಕೂಡಿದೆ ಎಂದು ತಿಳಿಸುವುದು ಕಷ್ಟವಾದರೂ ಇವು ನಿರುಪಯುಕ್ತ ಔಷಧಿಗಳೆಂದು ವಾದಿಸುವುದು ಕಷ್ಟ. ತಲೆ ಮಾರುಗಳಿಂದ ಇವರೊಳಗೆ ಬಳಕೆಗೊಳ್ಳುತ್ತಿರುವ ನಾಟಿ ಔಷಧಿಗಳು ರೋಗಗಳನ್ನು ನಿಯಂತ್ತಿಸುವ ಶಕ್ತಿಯನ್ನು ಹೊಂದಿದವುಗಳಾಗಿರುವುದರಿಂದ ಇವರೊಳಗೆ ಇನ್ನೂ ಜೀವಂತವಾಗಿ ಉಳಿದು ಬಂದಿರಬೇಕು, ಇವರು ಉಪಯೋಗಿಸುವ ಗೃಹ ಉಪಯೋಗಿಬಳಕೆಯ ಔಷಧಿಗಳನ್ನು ವೈಜ್ಞಾನಿಕ ಶೋಧನೆಯೊಳಗೆ ಒರೆ ಹಚ್ಚಿ ನೋಡಿ ಸಾರ್ವಜನಿಕರ ಉಪಯೋಗಕ್ಕೆ ದೊರೆಯುವಂತೆ ಮಾಡಿದಲ್ಲಿ ಎಷ್ಟೋ ಹೊಸ

ರೋಗಗಳಿಗೆ ಹೊಸ, ಹೊಸ, ಔಷಧಿಗಳು ದೊರೆಯ ಬಹುದೇನೋ. ಆಧುನಿಕತೆಯ ಮೋಹದಿಂದ ಮೆರೆಯುವ ಇಂದಿನ ಪೀಳಿಗೆಗೆ ಇಂತಹ ಬುಡಕಟ್ಟು ಸಮುದಾಯಗಳು ಬಳಸುವ ಔಷಧಿಗಳು ಅವೈಜ್ಞಾನಿಕವಾಗಿವೆಯೆಂದು ಕಂಡುಬಂದರೂ ಅವರ ಆಲೋಚನಾ ಕ್ರಮ ಪೂರ್ಣವಾಗಿ ಸರಿಯಾದುದಲ್ಲ ಎಂದು ಹೇಳುವುದು ಸರಿಯಲ್ಲ.

**೩.೬. ಬೇಟೆ :**

ಈ ಭೂಮಿಯ ಮೇಲೆ ಮನುಷ್ಯನ ಹುಟ್ಟು ಎಂದು ಪ್ರಾರಂಭವಾಯಿತೋ ಅಂದಿನಿಂದಲೇ ಬೇಟೆಯ ಹುಟ್ಟನ್ನು ನಾವು ಕಾಣುತ್ತೇವೆ. ಅಂದೇ ಬೇಟೆಯು ಪ್ರಾರಂಭವಾಗಿರುವ ಸಾಧ್ಯತೆ ಉಂಟು. ಮೂಲ ಮಾನವನ ಚರಿತ್ರೆಯನ್ನು ಗಮನಿಸಿದಾಗ ಬೇಟೆಯು ಅವನ ಎಲ್ಲಾ ಜೀವನದ ಸರ್ವಸ್ವವಾಗಿತ್ತು. ಅಂದರೆ ತನ್ನ ಹಸಿವೆಗಾಗಿ ಬೇಟೆಯನ್ನು ತನ್ನ ಮೂಲ ವೃತ್ತಿಯನ್ನಾಗಿ ಮಾಡಿಕೊಂಡಿದ್ದಾನೆ. ಅದೇ ಪ್ರವೃತ್ತಿ ಗುಂಪು ಜೀವನ, ಬುಡಕಟ್ಟು ಜೀವನ, ಗ್ರಾಮ ಜೀವನ, ನಗರ ಜೀವನಗಳಲ್ಲಿಯೂ ಸಹ ಮುಂದುವರೆಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಹಾಗೇಯೇ ಮರಿಯಮ್ಮನ ಹಳ್ಳಿ ಜನಪದರು ಸಹ ಇವತ್ತಿಗೂ ಬೇಟೆ ಸಂಸ್ಕೃತಿಯನ್ನು ಮುಂದುವರೆಸಿಕೊಂಡು ಬಂದಿರುವುದನ್ನು ಕಾಣುತ್ತೇವೆ.

ಈ ಮರಿಯಮ್ಮನ ಹಳ್ಳಿಯನ್ನು ಗಮನಿಸಿದಾಗ ಬೇಟೆಯು ಒಂದು ವೃತ್ತಿಯಾಗಿರದೆ ಹವ್ಯಾಸವಾಗಿರುವುದನ್ನು ಕಾಣಬಹುದು. ಈ ಹವ್ಯಾಸಿ ಬೇಟೆ ಪದ್ದತಿಯು ಸರಕಾರದ ಕಾನೂನಿನಿಂದಾಗಿ ಇತ್ತೀಚೆಗೆ ಕಣ್ಮರೆಯಾಗುವ ನಿಟ್ಟಿನಲ್ಲಿದೆ. ಆದರೂ ಸಹ ವಾಲ್ಮೀಕಿ ಸಮುದಾಯದವರು ತಮ್ಮ ಪರಂಪರಾನುಗತವಾಗಿ ಬಂದ ಪದ್ಧತಿಯಿಂದಾಗಿ ಕೆಲವೊಂದು ಹಬ್ಬ ಆಚರಣೆಗಳಲ್ಲಿ ಬೇಟೆಯಾಡುವ ಹವ್ಯಾಸವನ್ನು ಇಟ್ಟುಕೊಂಡಿರುವುದನ್ನು ಕಾಣುತ್ತೇವೆ.

ಯುಗಾದಿ ಹಬ್ಬದ ಮಾರನೇ ದಿನ ಅಂದರೆ ಕರಿ ದಿನ ಸಮೀಪದ ಗುಂಡಾ ಅರಣ್ಯ ಪ್ರದೇಶಕ್ಕೆ ಬೇಟೆಗೆ ಹೋಗುತ್ತಾರೆ. ಮೊದಲೆಲ್ಲಾ ಕಾಡುಹಂದಿ, ಮೊಲ ಮುಂತಾದ ಕಾಡು ಪ್ರಾಣಿಗಳನ್ನು ಬೇಟೆಯಾಡುತ್ತಿದ್ದರು. ಈಗ ಈ ಗುಂಡಾ ಅರಣ್ಯ ಪ್ರದೇಶ ಗಣಿಗಾರಿಕೆಯಿಂದಾಗಿ ಕಾಡು ಬರಿದಾಗುತ್ತಿದೆ. ಹಾಗಾಗಿ ಕಾಡು ಪ್ರಾಣಿಗಳು ನಶಿಸಿ ಹೋಗುತ್ತಿವೆ. ಇಂದು ಬೇಟೆಯಾಡಲು ಹೋದರೆ ಚಿಕ್ಕ ಪ್ರಾಣಿಗಳಾದ ಮೊಲ ಮಾತ್ರ ಬೇಟೆಯಾಡಲು ಸಿಗುತ್ತವೆ.

ಬೆಸ್ತರು ಸಾಮಾನ್ಯವಾಗಿ ತುಂಗಾಭದ್ರಾ ನದಿಗೆ ಮತ್ತು ಸಮೀಪ ಇರುವ ಡಣಾಯಕನಕೆರೆಗೆ ಮೀನನ್ನು ಹಿಡಿಯಲು ಹೋಗುತ್ತಾರೆ.

ಈ ಊರಿನ ಬೇಟೆಯ ವಿಶೇಷತೆ ಎಂದರೆ ಮರಿಯಮ್ಮನಹಳ್ಳಿಯಲ್ಲಿ ಮೂಲ ಊರಿನವರು ಮತ್ತು ಮುಳುಗಡೆಯಾದ ಹಳ್ಳಿಗಳಿಂದ ನೆಲೆಸಿದವರಲ್ಲಿ ಮೂಲ ಊರಿನವರು ಮಾತ್ರ ಯುಗಾದಿ ದಿನದಂದು ಬೇಟೆಗೆ ಹೋಗುತ್ತಾರೆ. ವಲಸೆ ಬಂದಂತಹ ಹಳ್ಳಿಯ ಜನರು ಬೇಟೆಗೆ ಹೋಗುವುದಿಲ್ಲ. ಕಾರಣವೇನೆಂದರೆ ತಾವು ವಲಸೆ ಬರುವುದಕ್ಕಿಂತ ಮುಂಚಿತವಾಗಿ ಯುಗಾದಿ ಹಬ್ಬದ ಮೂರನೆ

ದಿನದಂದು ಬೇಟೆ ಮಾಡುವ ಪದ್ದತಿ ಇರಲಿಲ್ಲ. ಇಂದಿಗೂ ಕೂಡ ವಲಸೆ ಬಂದಿರುವವರು ಯಾರು ಕೂಡ ಬೇಟೆಗೆ ಹೋಗುವುದಿಲ್ಲ.

**೩.೭. ಕಲೆಗಳು :**

ಕಲಾಭಿರುಚಿ ಮಾನವನ ಹುಟ್ಟುಗುಣ ತನ್ನ ಅನಿಸಿಕೆಗಳನ್ನು ತೋಡಿಕೊಳ್ಳಲು ಅವನು ಸಾಹಿತ್ಯದಂತೆ ಕಲೆಗಳನ್ನು ಬಳಸಿಕೊಂಡಿದ್ದಾನೆ. ಹಲವಾರು ಜನ ವಿದ್ವಾಂಸರು ಕಲೆಯನ್ನು ಕುರಿತು ಈ ಕೆಳಗಿನಂತೆ ವ್ಯಾಖ್ಯಾನಿಸಿದ್ದಾರೆ. 'ಟಾಲಸ್ಟಾಲ್'ರವರು 'ಮಾನವ ಕಲ್ಯಾಣಕ್ಕೆ ಹೇತುವಾದುದೇ ಕಲೆ' ಎಂದು, ಸಿ.ಜೋಡ್‌ರು 'ಆತ್ಮದರ್ಶನ ಮಾಡಿಸುವುದೇ ಕಲೆ' ಎಂದರು. ಅರವಿಂದರು ಮುಂತಾದವರು ಕಲೆ ಎಂದರೆ ಸೌಂದರ್ಯದರ್ಶನ ಎಂದರು. ಹೀಗೆ ಹೇಳುವ ವ್ಯಾಖ್ಯಾನಗಳು ಜನಪದ ಕಲೆಗಳಿಗೂ ಅನ್ವಯಿಸಿದವುಗಳಾಗಿವೆ. ಜನಪದ ಕಲೆಗಳು ಇಂದು ನಿನ್ನೆಯದಲ್ಲ. ತಲಾತಲಾಂತರಗಳಿಂದ ಒಕ್ಕಲು ಮಕ್ಕಳ ಕೂಲಿಯಾಳುಗಳ ಅಂಗಳದಲ್ಲಿ ಹುಟ್ಟಿಕೊಂಡು ಬಂದವುಗಳಾಗಿವೆ.

ಧಾರವಾಡನಗರದ ಬಗ್ಗೆ ಒಂದು ತಮಾಷೆಯ ಮಾತಿದೆ ಈ ನಗರದ ಯಾವುದಾದರೂ ಬೀದಿಯಲ್ಲಿ ನಿಂತು ಕಲ್ಲೆಸೆದರೆ, ಅದು ಒಬ್ಬ ಸಾಹಿತಿ ಅಥವಾ ಒಬ್ಬ ಪ್ರಾಧ್ಯಾಪಕ ಕನಿಷ್ಠ ಪಕ್ಷ ಒಬ್ಬ ವಿದ್ಯಾರ್ಥಿ ತಲೆಯ ಮೇಲೆ ಬೀಳುತ್ತದೆ ಎಂದು ದಾರವಾಡ ಶೈಕ್ಷಣಿಕ ಹಾಗೂ ಸಾಹಿತ್ಯಕ ಕೇಂದ್ರವಾಗಿರುವುದರಿಂದ ಈ ರೀತಿ ಪ್ರತೀತಿಯಾಗಿದೆ. ಹಾಗೆಯೇ ಮರಿಯಮ್ಮನಹಳ್ಳಿಯ ಒಂದು ಬೀದಿಯಲ್ಲಿ ನಿಂತು ಕಲ್ಲೆಸೆದರೆ ಅದು ಒಬ್ಬ ಕಲಾವಿದನಿಗೆ (ಈ ಕಲಾವಿದ ನಟ-ನಟಿ, ವಾದ್ಯ ಸಂಗೀತಗಾರ, ಬಯಲಾಟದ ಭಾಗವತ, ಚಿತ್ರ ಕಲಾವಿದ ಯಾರಾದರೊಬ್ಬರಾಗಿರುತ್ತಾರೆ) ತಾಗುತ್ತದೆ ಎಂದು ಹೇಳಬಹುದಾದಷ್ಟು ಜನ ಕಲಾವಿದರು ಈ ಊರಲ್ಲಿ ಇದ್ದಾರೆ (ಗುಡಿಹಳ್ಳಿ ನಾಗರಾಜ್, ಕಲಾಗ್ರಾಮ ಮರಿಯಮ್ಮನಹಳ್ಳಿ; ಪು.೧) ಕಲೆಗಳ ತವರೂರು ಎನಿಸಿಕೊಂಡಿರುವ ಮರಿಯಮ್ಮನಹಳ್ಳಿಯು ಜನಪದ ಕಲೆಗಳ ಆಗರವಾಗಿದೆ. ಇಲ್ಲಿನ ಕಲೆಗಳಲ್ಲಿ ಪ್ರಾದೇಶಿಕ ಭಿನ್ನತೆ ಇದ್ದರೂ ವೈವಿಧ್ಯಮಯವಾಗಿವೆ. ಈ ಕಲೆಗಳ ಮುಖ್ಯ ಧ್ಯೇಯ ಆನಂದ ನೀಡುವಂತಹದ್ದು. ಈ ಆನಂದದ ಜೊತೆಗೆ ಹೃದಯ ಸಂಸ್ಕಾರವೂ ನಡೆಯುತ್ತದೆ.

ಕನ್ನಡ ರಂಗಭೂಮಿಗೆ ಈ ಊರು ನೀಡಿದ ಕಾಣಿಕೆ ಅಮೂಲ್ಯವಾದುದು. ಕಂಪನಿ ನಾಟಕಗಳು ಕರ್ನಾಟಕದಲ್ಲಿ ನೆಲೆಯೂರಿದ (೧೯ನೇ ಶತಮಾನದ ಕೊನೆಯಲ್ಲಿ ೧೮೮೦ರ ಸುಮಾರಿಗೆ) ನಂತರ ಸುಮಾರು ೩ ದಶಕಗಳ ಕಾಲ ಮಹಿಳೆಯರು ರಂಗ ಪ್ರವೇಶ ಮಾಡಿರಲಿಲ್ಲ. ಮಹಿಳೆ ಮೊಟ್ಟ ಮೊದಲು ಮುಖಕ್ಕೆ ಬಣ್ಣ ಹಾಕಿದ್ದು ಈ ಶತಮಾನದ ಮೊದಲ ದಶಕದಲ್ಲಿ, ವಿಜಾಪುರ ಜಿಲ್ಲೆ ಗುಳೇದಗುಡ್ಡದಯಲ್ಲೂ ಬಾಯಿ ಪ್ರಥಮ ಮಹಿಳಾ ನಟಿ ಎನಿಸಿದಳು. ನಂತರ ಸುಮಾರು ಒಂದು ದಶಕದ ಕಾಲ ಮತ್ತೆ ನಾಟಕದಲ್ಲಿ ಅಭಿನಯಿಸಲು ಮಹಿಳೆಯರ ಕೊರತೆ ಇತ್ತು. ಈ ಕೊರತೆಯನ್ನು ತುಂಬಿ ಮೊದಲ ತಲೆ ಮಾರಿನ ನಟಿಯರೆಂದು ನಾಡಿನಾದ್ಯಂತ

ಖ್ಯಾತಿ ಪಡೆದವರು ಈ ಊರಿನ (ಈಗಿನ ಮರಿಯಮ್ಮನಹಳ್ಳಿ ಆಗಿನ ನಾಣಿಕೆರೆ) ಮಹಿಳೆಯರು. ರಂಗಭೂಮಿಗೆ ಮಹಿಳೆಯರನ್ನು ಕೊಟ್ಟ ಈ ಪರಂಪರೆ ಈಗಲೂ ಈ ಊರಿನಲ್ಲಿ ಮುಂದುವರೆದಿದೆ.

ಮರಿಯಮ್ಮನ ಹಳ್ಳಿಯ ಕಲೆಗಳನ್ನು ಜನಪದ ಕಲೆಗಳು ಮತ್ತು ಶಿಷ್ಟ ಕಲೆಗಳು ಎಂದು ವಿಂಗಡಿಸಲಾಗಿದೆ ಏಕೆಂದರೆ ಮರಿಯಮ್ಮನಹಳ್ಳಿಯಲ್ಲಿ ರಂಗಕಲಾವಿದರು ಸಿಗುತ್ತಾರೆ. ಈ ರಂಗ ಕಲಾವಿದರು ಕೆಲವೊಮ್ಮೆ ಜನಪದ ಕಲೆಗಳಲ್ಲಿಯೂ ಸಹ ಭಾಗಿಯಾಗಿರುವುದುಂಟು. ಜೊತೆಗೆ ಇಲ್ಲಿ ಜನಪದ ಮತ್ತು ರಂಗ ಕಲೆಗಳು ಪರಸ್ಪರ ಕೊಡುಕೊಳ್ಳುವಿಕೆಯ ಮೂಲಕ ಪ್ರಚಲಿತದಲ್ಲಿರುವುದನ್ನು ಕಾಣುತ್ತೇವೆ. ಹಾಗಾಗಿ ಇಲ್ಲಿಯ ಕಲೆಗಳನ್ನು ನಿರ್ಧಿಷ್ಟವಾಗಿ ಜನಪದ ಕಲೆಗಳು ಮತ್ತು ರಂಗ ಕಲೆಗಳೆಂದು ವರ್ಗೀಕರಣ ಮಾಡಲು ಸಾಧ್ಯವಾಗಿದ್ದರೂ ಸಹ ಪ್ರಸ್ತುತ ಅಧ್ಯಯನದಲ್ಲಿ ಜನಪದ ಕಲೆಗಳು ಮತ್ತು ರಂಗಕಲೆಗಳು ಹಾಗೆಯೇ ಜನಪದ ಕಲಾವಿದರು ರಂಗಕಲಾವಿದರು ಎಂದು ಅಧ್ಯಯನಕ್ಕಾಗಿ ಮಾಡಿಕೊಳ್ಳಲಾಗಿದೆ.

ಹಲವಾರು ಕಲೆಗಳು ಬರುಬರುತ್ತಾ ವೃತ್ತಿ ಕಲೆಗಳಾಗಿ ಪರಿವರ್ತಿತವಾಗಿರುವುದು ಮರಿಯಮ್ಮನಹಳ್ಳಿಯಲ್ಲಿ ಕಾಣಬಹುದು. ಇಲ್ಲಿನ ಕೆಲವು ಕಲೆಗಳು ಉಪಜೀವನದ ಮಾರ್ಗ ಹಿಡಿದಿವೆಯಾದರೂ ಇನ್ನೂ ಕೆಲವು ಮನರಂಜನೆಯ ಮಾಧ್ಯಮವಾಗಿವೆ.

**ಹಲಗೆ ವಾದ್ಯ :**

ಜನಪದ ಕಲೆಗಳಲ್ಲಿ ಒಂದಾದ ಹಲಗೆ ವಾದ್ಯ ನುಡಿಸುವವರು ಈ ಊರಿನಲ್ಲಿ ಕಂಡು ಬರುತ್ತಾರೆ. ಎಲ್.ರಾಮಾಂಜನಿ, ಆನಂದಪ್ಪ, ಮಾದರುನಾಗಪ್ಪ, ಎಲ್.ಮಾರೆಪ್ಪ, ಕೆ.ಹುಲುಗಪ್ಪ ಇವರುಗಳು ಹಲಗೆ ಬಾರಿಸುತ್ತಾರೆ. ಅನೇಕ ಜಾನಪದ ಉತ್ಸವಗಳಲ್ಲಿ, ಮೈಸೂರು ದಸರಾ ಉತ್ಸವಗಳಲ್ಲಿ ಕಾರ್ಯಕ್ರಮ ನೀಡಿದ್ದಾರೆ. ಹಲಗೆ ವಾದ್ಯವು ಹಳ್ಳಿಯ ಸಾಂಸ್ಕೃತಿಕ ಜೀವನದಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ಜಾತ್ರೆ, ಉತ್ಸವ, ಕುಣಿತ ಹಬ್ಬ, ಬಯಲಾಟ, ಸಾವಿನ ಸಂದರ್ಭದಲ್ಲಿ ಮೆರವಣಿಗೆಗಳಿಗೆ ಹಲಗೆ ಅವಶ್ಯಕವಾಗಿದೆ.

ಹಲಗೆಯನ್ನು ನುಡಿಸುವುದಕ್ಕೆ ಮೊದಲು ಬೆಂಕಿಯಲ್ಲಿ ಕಾಯಿಸಿದರೆ ನಾದ ಹಿತವಾಗಿರುತ್ತದೆ ಹಲಗೆ ಕಂಠಕ್ಕೆ ತೊಗಲಿನ ಬಾರು ಇರುತ್ತದೆ. ಇದನ್ನು ಹೆಗಲಿಗೆ ಏರಿಸಿ ಎದೆಯ ಎಡ ಭಾಗಕ್ಕೆ ಎತ್ತರಿಸಿ ನುಡಿಸುತ್ತಾರೆ. ಎಡಗೈ ಕಂಠದ ಮೇಲ್ಗಡೆಯಲ್ಲಿರುತ್ತದೆ. ಈ ಕೈಗೆ ಒಂದೂವರೆ ಅಡಿ ಉದ್ದ ಬೆತ್ತದ ಇಲ್ಲವೆ ಬಿದಿರಿನ 'ಧಡಿ' ಇರುತ್ತದೆ. ಎಡಗೈ ಹಲಗೆಯ ಕಂಠದ ಭಾಗದಲ್ಲಿ ಮಾತ್ರ ನುಡಿಸುತ್ತಿದ್ದರೆ ಬಲಗೈ ಗುಣಿಕೆ ಹಲಗೆಯ ವಿವಿಧ ಭಾಗಗಳಲ್ಲಿ ಸಂಚರಿಸಿ ವಿವಿಧ ಗತಿಯ ನಾದವನ್ನು ಹೊರಡಿಸುತ್ತಾರೆ.

ಹಲಗೆ ಬಾರಿಸುವವರು ನೆಲದ ಮೇಲೆ ಇರುವ ನೋಟುಗಳನ್ನು ಸೂಜಿ, ಇತ್ಯಾದಿಗಳನ್ನು ಕಣ್ಣು ರಪ್ಪೆಯಿಂದ ತೆಗೆಯುತ್ತ ಹಲಗೆ ಬಾರಿಸುತ್ತಾರೆ. ಕೆಲವರು ಎರಡು ಹಲಗೆಯನ್ನು ಇಟ್ಟುಕೊಂಡು

ಬಾರಿಸುವುದು. ಮುಂದಕ್ಕೆ ಉರುಳಿ, ಅಕ್ಕ ಪಕ್ಕಕ್ಕೆ ತಿರುಗಿ ಅಂಗಾತ ಮಲಗಿ ಎರಡು ಕಾಯಿಗಳ ಮಧ್ಯೆ ಹಲಗೆ ಇಟ್ಟು ಬಾರಿಸುತ್ತಾರೆ. ಇಂದಿಗೂ ಮರಿಯಮ್ಮನಹಳ್ಳಿಯಲ್ಲಿ ಹಲಗೆ ವಾದ್ಯ ನುಡಿಸುವರು ಕಂಡು ಬರುತ್ತಾರೆ.

**ಡಂಗೂರ ಸಾರವುದು. :**

ಮರಿಯಮ್ಮನಹಳ್ಳಿಯಲ್ಲಿ ಇಂದಿಗೂ ಊರಿನ ಜನರಿಗೆ ವಿಷಯ ತಿಳಿಸಬೇಕೆಂದರೆ ಡಂಗೂರ ಸಾರಿಸುತ್ತಾರೆ. ರಾಜರ ಕಾಲದಲ್ಲಿ ಹಲಗೆ ಬಡಿಯುತ್ತಲೇ ಡಂಗೂರ ಸಾರುವುದಿತ್ತು. ಕಾಲರಾ, ನೆರೆ ಮುಂತಾದ ಕಾಯಿಲೆ ಬಂದಾಗ ತಕ್ಷಣ ಎಚ್ಚರಿಕೆ ವಹಿಸಬೇಕಾದ ಸಂದರ್ಭಗಳಲ್ಲಿ ಡಂಗೂರ ಸಾರುತ್ತಿದ್ದರು. ಜಾಗತೀಕರಣದ ಸಂದರ್ಭದಲ್ಲಿ ಆಧುನಿಕ ಮಾಧ್ಯಮಗಳ ಮೂಲಕ ವಿಷಯ ತಿಳಿಸುವುದರಿಂದ ಬಹಳ ಕಡೆ ಡಂಗೂರ ಸಾರುವುದು ಕಂಡು ಬರುತ್ತಿಲ್ಲ. ಆದರೆ ಮರಿಯಮ್ಮನ ಹಳ್ಳಿಯಲ್ಲಿ ಇಂದಿಗೂ ಆಚರಣೆ, ಜಾತ್ರೆ, ಉತ್ಸವ, ಬಯಲಾಟ ಹಾಗೂ ಯಾವುದೇ ಸರ್ಕಾರಿ ಕಾರ್ಯಕ್ರಮಗಳು, ಶಿಬಿರಗಳು, ಪಂಚಾಯಿತಿ, ಇಂತಹ ವಿಷಯಗಳನ್ನು ಊರಿನ ಜನರಿಗೆ ತಿಳಿಸಲು ಡಂಗೂರ ಸಾರಿಸುತ್ತಾರೆ. ಡಂಗೂರ ಸಾರುವವರು ಗ್ರಾಮದ ಪ್ರತಿ ಓಣಿಗೆ ಹೋಗಿ ಡಂಗೂರ ಸಾರಿ ಬರುತ್ತಾರೆ.

**ಜೋಗತಿ ಕುಣಿತ ಮತ್ತು ಚೌಡಿಕೆ :**

ಮರಿಯಮ್ಮನ ಹಳ್ಳಿಯಲ್ಲಿ ಜೋಗತಿ ಕುಣಿತವು ಮತ್ತು ಚೌಡಿಕೆ ಮೇಳ ಕಂಡು ಬರುತ್ತದೆ. ಈ ಊರಿನ ಜೋಗತಿಯರು ನಾಡಿನಾದ್ಯಂತ ಇವರ ಕುಣಿತದಿಂದ ಪ್ರಸಿದ್ಧಿ ಪಡೆದಿದ್ದಾರೆ. ಈ ಕಲೆಯಿಂದಾಗಿಯೇ ಕಾಳಮ್ಮ ಜೋಗತಿಯು ಕರ್ನಾಟಕ ಸರ್ಕಾರದ ೨೦೦೦-೦೧ ಸಾಲಿನ ರಾಜ್ಯೋತ್ಸವ ಪ್ರಶಸ್ತಿಯನ್ನು ಪಡೆದಿದ್ದರೆ ಇವರ ಶಿಷ್ಯ ಮಂಜಮ್ಮ ಜೋಗತಿಯು ೨೦೦೬-೦೭ ಸಾಲಿ ಜಾನಪದ ಅಕಾಡಮಿ ಪ್ರಶಸ್ತಿಯನ್ನು ಪಡೆದಿದ್ದಾರೆ.

ಈ ಕಲಾ ತಂಡವು ನಾಡಿನಾದ್ಯಂತ ಸಭೆ-ಸಮಾರಂಭ, ಜಾನಪದ ಉತ್ಸವ, ದಸರಾ ಉತ್ಸವ, ಜಾತ್ರೆ, ಹಂಪಿ ಉತ್ಸವಗಳಲ್ಲಿ ಪ್ರದರ್ಶನ ನೀಡಿದ್ದಾರೆ.

೧೧ಜನರ ಗುಂಪು ಪ್ರದರ್ಶನ ನೀಡುತ್ತಾರೆ. ಮಂಜಮ್ಮ, ರಾಮವ್ವ ಭಾಗ್ಯಮ್ಮ, ನಾಗಮ್ಮ ಮಾರಕ್ಕ, ಸೋಮಕ್ಕ, ಹಾವಕ್ಕ, ಗಂಗಮ್ಮ, ಹೊನ್ನೂರಮ್ಮ, ಮಂಜಕ್ಕ, ಅರ್ಜಿ ಜೋಗತಿ ಇವರುಗಳು ತಂಡಗಳನ್ನು ಕಟ್ಟಿಕೊಂಡು ಪ್ರದರ್ಶನ ನೀಡುತ್ತಾರೆ.

ತಾಮ್ರದ ಕೊಡಕ್ಕೆ ಯಲ್ಲಮ್ಮನ ಮೂರ್ತಿಯನ್ನು ಕಟ್ಟಿ ಕೊಡದ ತುಂಬ ನೀರನ್ನು ತುಂಬಿಸಿ ಅದರ ಕಂಠಕ್ಕೆ ಎಲ್ಲಮ್ಮನ ಮೂರ್ತಿಯನ್ನು ಕಟ್ಟಿ ನವಿಲುಗರಿಯ ಅಲಂಕಾರ ಮಾಡುತ್ತಾರೆ. ಇದನ್ನು ಹೊತ್ತು ಕೊಂಡು ಒಬ್ಬರು ಕುಣಿಯುತ್ತಾರೆ. ಉಳಿದವರು, ಎಲ್ಲಮ್ಮನ ಪದ, ಹುಲಿಗೆಮ್ಮನ ಪದ, ಪರಶುರಾಮನ ಪದ, ನಾಗ ಪಂಚಮಿ ಪದ, ಹೇಮರೆಡ್ಡಿ ಮಲ್ಲಮ್ಮನಪದ ಹಾಡುತ್ತಾರೆ.

ಕೊಡವನ್ನು ತಲೆ ಮೇಲೆ ಇಟ್ಟು ಕೊಂಡರೂ ಅದು ತಾನಾಗೇ ತನ್ನ ಸಮಸ್ಥಿತಿಯನ್ನು ಕಾಯ್ದುಕೊಳ್ಳುತ್ತಿರುವಂತೆ ಸದಾ ತಲೆ ಮೇಲೆ ಇರುತ್ತದೆ. ನಡೆಯುವಾಗ, ಕೂಡುವಾಗ, ಏಳುವಾಗ ಮತ್ತು ಕುಣಿಯುವಾಗ ಅದನ್ನು ಕೈಯಲ್ಲಿ ಹಿಡಿಯುವುದಿಲ್ಲ. ಅಷ್ಟರ ಮಟ್ಟಿಗೆ ಅದು ಸದಾ ತಲೆಮೇಲಿದ್ದು ದೇಹದ ಒಂದು ಭಾಗ ಎಂಬಂತೆ ರೂಢಿಯಾಗಿರುತ್ತದೆ. ಜೋಗತಿಯವರು ಕುಣಿಯುವಾಗ ಹೆಚ್ಚು ರಭಸವಿರುತ್ತದೆ. ಹೆಜ್ಜೆಗಳು ತಟತಟನೆ ಬದಲಾಗುತ್ತಿರುತ್ತವೆ. ಬಾಲಿಕೆ, ಚೌಡಿಕೆ, ಶೃತಿ ಮತ್ತು ಸಂಬಾಳದ ಗತಿ ಇವರ ಕುಣಿತಕ್ಕೆ ಹಿನ್ನೆಲೆಯಾಗಿರುತ್ತದೆ. ಕುಣಿಯುವ ಮತ್ತು ಗರ್‍ರನೆ ತಿರುಗುವ ರಭಸಕ್ಕೆ ಕೊಡಕ್ಕೆ ಅಲಂಕರಿಸಿದ ವಸ್ತುಗಳು ಮತ್ತು ಹೂಮಾಲೆಗಳು ಕೂಡ ಹಾರಾಡುತ್ತಾ ಹೊಸ ವಿನ್ಯಾಸವೊಂದನ್ನು ರೂಢಿಸುತ್ತವೆ. ಕುಣಿಯುತ್ತಾ ಮೈದುಂಬುವ ಜೋಗತಿಯರು ರಭಸವಾದಷ್ಟು ಕುಣಿತ ಗೌಣವಾಗಿಸಿ ದೇವಿಯ ಜೊತೆ ಸಂಬಾಷಿಸುತ್ತ ಅವಿನಾಭಾವ ಸಂಬಂಧ ಏರ್ಪಡಿಸುತ್ತಾರೆ.

ಕೇವಲ ದೇವಿ ಆರಾಧನೆಯ ಹಾಡುಗಳನ್ನು ಹಾಡದೆ, ಜನರಿಗೆ ತಿಳುವಳಿಕೆ ಮೂಡಿಸುವಂತಹ, ಜಾಗೃತಿ ತರಿಸುವಂತಹ ವಿಷಯಗಳ ಬಗ್ಗೆ ಹಾಡುತ್ತಾರೆ. ಏಡ್ಸ್, N.S.U, ಗರ್ಭಿಣಿ ಸ್ತ್ರೀಯರಿಗೆ, ಜನನ ಮರಣದ ಬಗ್ಗೆ, ಪರಿಸರ ನೈರ್ಮಲ್ಯದ ಬಗ್ಗೆ ಪದವನ್ನು ಕಟ್ಟಿ ಹಾಡುತ್ತಾರೆ.

ಸುಗ್ಗಿ ಕಾಲದಲ್ಲಿ ಹಳ್ಳಿ ಹಳ್ಳಿಗೆ ಹೋಗಿ ಜೋಗತಿ ನೃತ್ಯ ಪ್ರದರ್ಶನ ನೀಡಿ ರೈತರು ನೀಡುವ ದವಸಧಾನ್ಯಗಳನ್ನು ಪಡೆದುಕೊಳ್ಳುತ್ತಾರೆ.

**ಕಾಳವ್ವ ಜೋಗತಿ :**

ಜೋಗತಿಯರು ಬರೀ ಭಿಕ್ಷೆ ಬೇಡುವುದರಲ್ಲಯೇ ನಿರತರಾಗಿದ್ದ ಸಂದರ್ಭದಲ್ಲಿ ಅವರಲ್ಲಿ ಒಬ್ಬರು ರಾಜ್ಯದಲ್ಲಿ ಜೋಗತಿ ಕುಣಿತದಿಂದ ಪ್ರಸಿದ್ಧಿ ಪಡೆದಿರುವರು ಇದ್ದಾರೆ. ಅವರೆ ಕಾಳವ್ವ ಜೋಗತಿ, "ಜೋಗತಿ ನೃತ್ಯ ಪ್ರದರ್ಶನ" ಹಾಡುವುದರಿಂದಲೇ ಕರ್ನಾಟಕ ಸರ್ಕಾರದ ೨೦೦೧ ಸಾಲಿನ ರಾಜ್ಯೋತ್ಸವ ಪ್ರಶಸ್ತಿ ಪಡೆದಿದ್ದಾರೆ. ಮೂಲತಹ ಹಗರಿ ಬೊಮ್ಮನಹಳ್ಳಿಯ ವಾಸಿಯಾದ ಇವರು ಮರಿಯಮ್ಮನ ಹಳ್ಳಿಗೆ ಬಂದು ನೆಲೆ ನಿಂತು ಜೋಗತಿ ತಂಡವನ್ನು ಕಟ್ಟಿ ರೇಣುಕಾದೇವಿ ಮಹಾತ್ಮೆ' ನಾಟಕ ಪ್ರದರ್ಶನ ನೀಡುತ್ತಿದ್ದರು. ಅದರಲ್ಲಿ 'ರೇಣುಕಾ ದೇವಿಯಾಗಿ ಅಭಿನಯಿಸುತ್ತಿದ್ದಾಳೆ. ರಾಜ್ಯದ ನಾನಾ ಕಡೆ ಜೋಗತಿ ಕುಣಿತ, ಪ್ರದರ್ಶನ ನೀಡಿದ್ದಾರೆ. ಜಾನಪದ ಉತ್ಸವ, ಗಡಿನಾಡ ಉತ್ಸವದಲ್ಲಿ ಪ್ರದರ್ಶನ ನೀಡಿದ್ದಾರೆ. ೨೦೦೪ರಲ್ಲಿ ಕಾಳವ್ವ ಜೋಗತಿ ನಿಧಾನರಾದರು. ತಮ್ಮ ಕಲೆಯನ್ನು ಮಂಜಮ್ಮ ಜೋಗತಿಗೆ ಧಾರೆ ಎರೆದರು ಅವರು ಇಂದಿಗೂ ಮುಂದುವರೆಸಿಕೊಂಡು ಬರುತ್ತಿದ್ದಾರೆ.

**ಮಂಜಮ್ಮ ಜೋಗತಿ :**

ಕಾಳಮ್ಮ ಜೋಗತಿಯ ಶಿಷ್ಯೆಯಾದ ಮಂಜಮ್ಮ ಜೋಗತಿಯು ತಮ್ಮ ಗುರುವಿನ ಪರಂಪರೆ ಮುಂದುವರೆಸಿಕೊಂಡು ಬಂದಿದ್ದಾರೆ. ನಾಡಿನ ಸಾಹಿತ್ಯ ಸಮ್ಮೇಳನ, ಜಾನಪದ ಜಾತ್ರೆ,

ವಿಶ್ವವಿದ್ಯಾಲಯಗಳಲ್ಲಿ, ಸರ್ಕಾರಿ ಉತ್ಸವಗಳ ದಸರಾ ಉತ್ಸವದಲ್ಲಿ ಹೀಗೆ ಪ್ರತಿ ಜಿಲ್ಲೆಯಲ್ಲಿ ತಮ್ಮ ಜೋಗತಿ ನೃತ್ಯ ಪ್ರದರ್ಶನ ನೀಡಿದ್ದಾರೆ.

ಅಲ್ಲದೆ ಜೋಗತಿ ಕುಣಿತ ತರಬೇತಿ ಶಿಬಿರದಲ್ಲಿ ೧೦ ಜನ ಜೋಗತಿಯರಿಗೆ ನೃತ್ಯ ಪದರ್ಶನವನ್ನು ಆರು ತಿಂಗಳವರೆಗೆ ಕಲಿಸಿದ್ದಾರೆ. ಸರ್ಕಾರ ಇವರ ಪ್ರತಿಭೆಗೆ, ೨೦೦೬-೦೭ ಸಾಲಿನ ಜ಼ಾನಪದ ಅಕಾಡಮಿ ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

**ಸವಾಲ್-ಜವಾಬ್-ಪದಗಳು :**

ಮರಿಯಮ್ಮನ ಹಳ್ಳಿಯಲ್ಲಿ ಸವಾಲ್-ಜವಾಬ್-ಪದಗಳನ್ನು ಹಾಡುವವರ ಒಂದು ತಂಡವಿದೆ. ಆ ತಂಡದಲ್ಲಿ ಪೀರ್‌ಸಾಬ್ ಪ್ರಧಾನರು. ಅವರ ಜೊತೆ ಗೌಸ್‌ಸಾಬ್, ಸತ್ತರ್ ಇಮಾ ಇದುತ್ತಾರೆ ಮ್‌ಸಾಬ್,

ಇವರು ಮರಿಯಮ್ಮನ ಹಳ್ಳಿಯಷ್ಟೇ ಅಲ್ಲದೇ, ಹೊಸಪೇಟೆ, ಬಳ್ಳಾರಿ, ಕೊಪ್ಪಳ, ಹಡಗಲಿ, ರಾಣಿಬೆನ್ನೂರು, ಹಾನಗಲ್ಲು ಮುಂತಾದ ಕಡೆಗಳಲ್ಲಿ ಜಾತ್ರೆ, ಉರುಸ್, ಸಂದರ್ಭಗಳಲ್ಲಿ ಹೋಗಿ ಕಾರ್ಯಕ್ರಮ ನೀಡಿದ್ದಾರೆ. ಇದುವರಿಗೂ ಪೀರ್‌ಸಾಬ್ವರು ೩೦೦ ಕಾರ್ಯಕ್ರಮ ನೀಡಿದ್ದಾರೆ.

ಜಾತ್ರೆ-ಉರುಸಿನ ಸಂದರ್ಭದಲ್ಲಿ ಈ ಹಾಡುಗಾರಿಕೆ ಹಗಲು-ರಾತ್ರಿ ಸತತವಾಗಿ ನಡೆಯುತ್ತದೆ ಸವಾಲ್-ಜವಾಬ್ ಹಾಡುಗಾರಿಕೆ ಆರಂಭ ಮಾಡುವುದು ಸ್ತುತಿಯಿಂದ. ನಂತರ ಚರಿತ್ರೆ, ಪುರಾಣ, ಆಧ್ಯಾತ್ಮ, ನೀತಿ ಮತ್ತು ತತ್ವ ಈ ಎಲ್ಲಾ ಸರದಿಗಳು ಮುಗಿಯುವ ವೇಳೆ ಶೋತೃಗಳು ಬೇಸತ್ತಿರುತ್ತಾರೆ. ಆಗ ಪ್ರೇಕ್ಷಕರ ಕಡೆಯಿಂದ ಅಶ್ಲೀಲ ಹಾಡುಗಳನ್ನು ಹಾಡಲು ಹೇಳುತ್ತಾರೆ. ಹಾಗಾಗಿ ಹಾಡುಗಾರ ತುಂಬಾ ಸೂಕ್ಷ್ಮಮತಿಯುಳ್ಳವನಾಗಿದ್ದು, ಸಭೆಯ ರಂಗು ನೋಡಿ ರಾಗ ತೆಗೆಯುವ ಕಲೆಗಾರಿಕೆ ಅವನಿಗೆ ಗೊತ್ತಿರುತ್ತದೆ. ಅವನು ಹೇಳುವ ಹಾಡುಗಳು ಪ್ರೇಕ್ಷಕರನ್ನು ಮೋಡಿಗೊಳಿಸುವಂಹ ಹಾಡುಗಳು ಆಗಿರುತ್ತವೆ.

**ಚಿತ್ರಕಲೆ :**

ಮರಿಯಮ್ಮನಹಳ್ಳಿಯಲ್ಲಿ ಚಿತ್ರಕಲೆ ಬಿಡಿಸುವುದರಲ್ಲಿ ಪ್ರಸಿದ್ಧಿ ಹೊಂದಿದವರು ಕಂಡು ಬರುತ್ತಾರೆ. ಕೇವಲ ಒಂದು ತೈಲ ಚಿತ್ರದ ಮೂಲಕ ನಾಡಿನಾದ್ಯಂತ ಅಲ್ಲದೇ ಬೇರೆ ರಾಜ್ಯದಲ್ಲಿಯೂ ಕೂಡ ಪ್ರಸಿದ್ಧಿ ಪಡೆದವರು ಊರಿನಲ್ಲಿ ಕಂಡು ಬರುತ್ತಾರೆ. ಅವರ ಹೆಸರು ಹೆಚ್.ಶ್ರೀನಿವಾಸ್‌ರಾವ್. ಇವರ 'ಶಿವದರ್ಶನ' ಎಂಬ ತೈಲಚಿತ್ರವು ರಾಜ್ಯ ಹೊರ ರಾಜ್ಯಗಳಲ್ಲಿಯೇ ವಿದೇಶಿಗಳಲ್ಲಿಯೂ ಪ್ರಸಿದ್ಧಿ ಪಡೆದಿದೆ. ಚಿತ್ರದಲ್ಲಿ ಎರಡು ಮರಗಳ ನಡುವೆ ಶಿವನ ಮುಖ ಅಡಕವಾಗಿರುವ ಚಿತ್ರವಾಗಿದೆ. ಇದಲ್ಲದೇ ಪ್ರಕೃತಿದತ್ತ ಚಿತ್ರಗಳು, ಮರಿಯಮ್ಮನಹಳ್ಳಿಯ ಸಂಪೂರ್ಣ ನಕಾಶೆ ಇರುವ ಚಿತ್ರ, ತುಂಗಾಭಾದ್ರ ಏತ ನೀರವಾರಿಯೋಜನೆಯ ಚಿತ್ರ ಅಲ್ಲದೇ, ಸರ್ಕಾರಿ ಯೋಜನೆ ಚಿತ್ರ, ಹನುಮ ಬೀವ ಮಧ್ವ ಅನೇಕ ದೇವರುಗಳ ಚಿತ್ರ ರಚಿಸಿದ್ದಾರೆ. ಅನೇಕ ಸಂಘ ಸಂಸ್ಥೆಗಳು ಇವರನ್ನು

ಸಮ್ಮಾನಿಸಿ ಗೌರವಸಿದ್ದಾರೆ. ಮೂಲತಹ ಇವರು ತುಂಗಾ ಭದ್ರಾ ಜಲಾಷಯದಲ್ಲಿ ಮುಳುಗಡೆಯಾದ ಅರಳಿಹಳ್ಳಿ ಗ್ರಾಮದವರು.

**ಗರಡಿ ಕಲೆ :**

ಜನಪದ ಕಲೆಯಾದ ಗರಡಿ ಕಲೆಯು ಮರಿಯಮ್ಮನ ಹಳ್ಳಿಯಲ್ಲಿ ಕಂಡು ಬರುತ್ತದೆ. ಇಲ್ಲಿ ಏಳು ಗರಡಿ ಮನೆಗಳು ಕಂಡು ಬರುತ್ತವೆ. ಪ್ರತಿಯೊಂದು ವಾರ್ಡ್‌ಗಳಲ್ಲಿ ಒಂದೊಂದು ಗರಡಿ ಮನೆ ಕಂಡು ಬರುತ್ತದೆ.

ಇಲ್ಲಿ ಹೆಚ್ಚಾಗಿ ಗರಡಿ ಮನೆಗಳಲ್ಲಿ ಕಂಡುಬರುವವರು ವಾಲ್ಮೀಕಿಗಳು, ಹರಿಜನರು ಮತ್ತು ಮುಸ್ಲಿಂರು. ನಾಣಿಕೇರಿಯಲ್ಲಿ ಕೂಡಾ ಈ ಗರಡಿ ಕಲೆ ತುಂಬ ಪ್ರಸಿದ್ಧಿ ಹೊಂದಿತ್ತು. ಈ ಊರು ಮುಳುಗಡೆ ಆದ ನಂತರ ಮರಿಯಮ್ಮ ಹಳ್ಳಿಯಲ್ಲಿ ಗರಡಿ ಮನೆಗಳನ್ನು ಸ್ಥಾಪಿಸಿ ಈ ಪ್ರಾಚೀನ ಕಲೆಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ.

ಈ ಊರಿನ ಕೆಲವು ಕುಸ್ತಿ ಪಟುಗಳು ಜಿಲ್ಲೆ, ರಾಜ್ಯ, ಅಂತರ್ ರಾಜ್ಯಗಳಲ್ಲಿ ನಡೆದ ಸ್ಪರ್ಧೆಯಲ್ಲಿ ಅನೇಕ ಬಹುಮಾನಗಳನ್ನು ಪಡೆದಿದ್ದಾರೆ.

ರೆಡ್ಡಿ ರಾಜಣ್ಣಿಸಾಬ್, ರೆಡ್ಡಿ ಹುಸೇನ್ ಪೀರ್‌ಸಾಬ್, ದಾವಾಲ್‌ಸಾಬ್, ದೊಡ್ಡಹುಸೇನ್ ಸಾಬ್, ಸಣ್ಣ ಹುಸೇನ್ ಸಾಬ್, ಸೊಟ್ಟಾಲಿ ಪೀರ್ ಸಾಬ್, ಮರಡಿ ಹುಲುಗಪ್ಪ ಸೀಗನಳ್ಳಿ ಯಮುನಪ್ಪ, ಅಗಸರ ಮರಲಿಂಗಪ್ಪ, ಉದ್ದೇಕಲ್ ವೆಂಕಟೇಶ್, ಎಲ್.ವೆಂಕಟೇಶ್, ತಳವಾರ್ ವೆಂಕಟೇಶ್, ಸೈಫುಲ, ಜಾಕೀರ್ ಇನ್ನೂ ಮುಂತಾದ ಕುಸ್ತಿ ಪಟುಗಳು ಅನೇಕ ಊರುಗಳಲ್ಲಿ ಕುಸ್ತಿ ಪ್ರದರ್ಶಿಸಿ ಹೆಸರುಗಳಿಸಿದ್ದಾರೆ.

**ಕೋಲಾಟ :**

ಇಲ್ಲಿ ಕೋಲಾಟವಾಡಲು ಒಂದು ಸಂಘವೇ ಇದೆ. ಬಸವೇಶ್ವರ ಕೋಲಾಟ ಸಂಘ, ಕೋಲಾಟ ತರಬೇತಿ ನೀಡುವ ಗುರು ಇದ್ದಾರೆ. ಅವರ ಹೆಸರು ಹರಿಜನರ ಅಂಬಣ್ಣ. ಹಬ್ಬಗಳಲ್ಲಿ ಕೋಲಾಟ ಆಡುತ್ತಾರೆ.

ಇದೇ ಸಂಘ ಭಜನೆಯನ್ನು ಮಾಡುತ್ತದೆ. ಭಜನೆ ಹಾಡುಗಳ ಗುರು ಈಡಿಗೇರ್ ಕಾಶೀಮಪ್ಪ, ಈತನಿಗೆ ನೂರಾರು ಭಜನೆ ಹಾಡುಗಳು ಗೊತ್ತು. ಕಿಂದರೆ ಕಾಯಿ (ಕಿನ್ನರ)ಯ ನಾದದಿಂದ ನಾದವನ್ನು ನುಡಿಸುತ್ತಾ ಭಜನೆ ಹಾಡು ಹಾಡುತ್ತಾರೆ, ಕೋಲಾಟದ ವೇಷಭೂಷಣಗಳು ಬಿಳಿಯ ಅಂಗಿ ಕೆಂಪು ಬಣ್ಣದ ಚಡ್ಡಿ ಮತ್ತು ನಡುವಿಗೆ ಬಣ್ಣದ ವಸ್ತ್ರ, ಕಾಲಿಗೆ ಗೆಜ್ಜೆ ತೊಟ್ಟಿರುತ್ತಾರೆ. ಕೋಲಾಟ ಆಡುವಾಗ ಹತ್ತರಿಂದ ಹದಿನಾರು ಜನ ಕಲಾವಿದರು ಭಾಗವಹಿಸುತ್ತಾರೆ.

ಗಣೇಶನ ಸ್ತುತಿಯೊಂದಿಗೆ ಕೋಲಾಟ ಪ್ರಾರಂಭವಾಗುತ್ತದೆ.

ಶರಣ ಶರಣವಯ್ಯ ಗಣನಾಯ್ಕ

ನಮ್ಮ ಕರುಣದಿಂದಲಿ ಕಾಯೋ ಗಣನಾಯ್ಕ: ಶರಣು..

ಎಂದು ಗಣೇಶ ಸ್ತುತಿ ಮಾಡಿದ ನಂತರ ಗುರುವಿಗೆ ನಮಸ್ಕರಿಸುತ್ತಾರೆ. ಗಣೇಶ ಸ್ತುತಿಯೊಂದಿಗೆ ಕೋಲುಗಳ ಸಪ್ಪಳವೂ ನಿಧಾನಗತಿಯಲ್ಲಿ ಆರಂಭವಾಗುತ್ತದೆ. ಆನಂತರ ಊರಿನ ದೇವರ ಹಾಡು ಹಾಡುತ್ತ ಕೋಲು ಹಾಕುತ್ತಾರೆ.

ಚಂಗೀಳಿಕೆಮ್ಮನ ಆಚರಣೆಯಲ್ಲಿ ನಾಣಿಕೇರಿಯ ಹರಿಜನರು ತಮ್ಮ ಮಕ್ಕಳಿಗೆ ಕೋಲಾಟ ಕಲಿಸಿ, ಊರಿನ ಬಸ್ ಸ್ಟಾಂಡ್‌ನ ಚಂಗೀಳಿಕೆಮ್ಮನ ಮುಂದೆ ಮಕ್ಕಳಿಂದ ಕೋಲಾಟ ಆಡಿಸುತ್ತಾರೆ.

**ಬಯಲಾಟ :**

ಮರಿಯಮ್ಮಹಳ್ಳಿಯಲ್ಲಿ ಹಿಂದಿನಿಂದಲೂ ಬಯಲಾಟ ಆಡುವುದು ಕಂಡು ಬರುತ್ತದೆ. ತಮ್ಮ ಮೂಲ ಊರಿನಲ್ಲಿಯೂ ಬಯಲಾಟ ಆಡುತ್ತಿದ್ದರು. ಊರು ಮುಳುಗಿದ ಮೇಲೆ ಮರಿಯಮ್ಮನಹಳ್ಳಿಗೆ ಬಂದು ನೆಲೆಸಿದ ನಂತರವೂ ಬಯಲಾಟ ಆಡುವುದನ್ನು ನಿಲ್ಲಿಸಲಿಲ್ಲ. ಮೊದಲೆಲ್ಲಾ ಶ್ರೀ ಕೃಷ್ಣ ಪಾರಿಜಾತ, ರಾಮಾಂಜನೇಯ ಯುದ್ಧ, ಗಿರಿಜಾ ಕಲ್ಯಾಣ, ಮುಂತಾದ ಆಟಗಳನ್ನು ಆಡುತ್ತಿದ್ದರು. ಈಗ ಮಾರುತಿ ಕಲಾ ರಂಗದವರು ಬಯಲಾಟಗಳನ್ನು ನಿರಂತರವಾಗಿ ಆಡುತ್ತ ಬರುತ್ತಿದ್ದಾರೆ. ವರ್ಷಕ್ಕೊಮ್ಮೆ ಆಗಬೇಕಾದ ಜಾತ್ರೆಗೆ ಕಾಯಬೇಕಿಲ್ಲ. ಬಯಲಾಟಕ್ಕೆ ಈ ತಂಡ ಯಾವಾಗೆಂದರೆ ಅವಾಗ ಸಿದ್ಧ.

ಬಬ್ರುವಾಹನ ಕಾಳಗ, ರತಿ ಕಲ್ಯಾಣ, ರಾಮಯಾಣ ಇಂತಹ ಪ್ರಮುಖ ಬಯಲಾಟಗಳಾಗಿ ಈಗಲೂ ಆಡುತ್ತಾರೆ. ಪ್ರಮುಖ ಕಲಾವಿದರಾದ ಕೆ.ಯಂಕಣ್ಣ, ಕೆ.ರಾಮಚಂದ್ರಪ್ಪ ಈಡಿಗರ ಕೊಂಡಪ್ಪ, ಸೋಗಿ ದುರುಗಪ್ಪ, ಬೆಲಕ ನಟ ಸೋಮಣ್ಣ, ಬಿ.ಚಿದಾನಂದಪ್ಪ, ಎ.ಕೃಷ್ಣಪ್ಪ, ಈ.ಸೋಮಣ್ಣ ಇವರುಗಳಿಗೆ ಮರಿಯಮ್ಮನಹಳ್ಳಿಯವರೆ ಆದ ಮಾಸ್ತರ ಪತ್ತರ್ ಖಾದರ್‌ಸಾಬ್ ಬಯಲಾಟವನ್ನು ಕಲಿಸುತ್ತಾರೆ.

**ರಂಗ ಕಲೆಗಳು :**

ತುಂಗಾಭದ್ರಾ ನದಿಯಷ್ಟೇ ಈ ಊರು ಹೆಸರುವಾಸಿ ತನ್ನ ಕಲಾ ಸಂಪತ್ತಿಗಾಗಿ. ಕನ್ನಡ ರಂಗಭೂಮಿಗೆ ಈ ಊರು ನೀಡಿದ ಕಾಣಿಕೆ ಅಮೂಲ್ಯವಾದುದು. ಕಂಪನಿ ನಾಟಕಗಳು (ಪಾರ್ಸಿ ರಂಗಭೂಮಿ) ಕರ್ನಾಟಕದಲ್ಲಿ ನೆಲೆಯೂರಿದ (೧೯ನೇ ಶತಮಾನದ ಕೊನೆಯಲ್ಲಿ ೧೮೮೦ರ ಸುಮಾರಿಗೆ) ನಂತರ ಸುಮಾರು ೩ ದಶಕಗಳ ಕಾಲ ಮಹಿಳೆಯರು ರಂಗ ಪ್ರವೇಶ ಮಾಡಿರಲಿಲ್ಲ. ಮಹಿಳೆ ಮೊಟ್ಟಮೊದಲು ಮುಖಕ್ಕೆ ಬಣ್ಣ ಹಾಕಿದ್ದು ಈ ಶತಮಾನದ ಮೊದಲ ದಶಕದಲ್ಲಿ. ವಿಜಾಪುರ ಜಿಲ್ಲೆ ಗುಳೇದಗುಡ್ಡದ ಯಲ್ಲೂಬಾಯಿ ಪ್ರಥಮ ಮಹಿಳಾ ನಟಿ ಎನಿಸಿದಳು. ನಂತರ ಸುಮಾರು ಒಂದು ದಶಕದಕಾಲ ಮತ್ತೆ ನಾಟಕದಲ್ಲಿ ಅಭಿನಯಿಸಲು ಮಹಿಳೆಯರ ಕೊರತೆ ಇತ್ತು. ಈ ಕೊರತೆಯನ್ನು ತುಂಬಿ ಮೊದಲ ತಲೆಮಾರಿನ ನಟಿಯರೆಂದು ನಾಡಿನಾದ್ಯಂತ ಖ್ಯಾತಿ ಪಡೆದವರು ಈ ಊರಿನ (ಈಗಿನ ಮರಿಯಮ್ಮನಹಳ್ಳಿ –ಆಗಿನ ನಾಣಿಕೆರೆ) ಮಹಿಳೆಯರು. ರಂಗಭೂಮಿಗೆ ಮಹಿಳೆಯರನ್ನು ಕೊಟ್ಟ ಈ ಪರಂಪರೆ ಈಗಲೂ ಈ ಊರಿನಲ್ಲಿ ಮುಂದುವರಿದಿದೆ.

ಗರೂಡ ಸದಾಶಿವರಾಯರ ದತ್ತಾತ್ರೇಯ ನಾಟಕ ಮಂಡಳಿ ೧೯೨೦ರ ಸುಮಾರಿನಲ್ಲಿ ಹೊಸಪೇಟೆಯಲ್ಲಿ ಕ್ಯಾಂಪು ಮಾಡಿತ್ತು. ಆ ಕ್ಯಾಂಪಿನಲ್ಲಿ ಪುರುಷರೇ ಮಹಿಳೆಯರ ಪಾತ್ರ ಅಭಿನಯಿಸುತ್ತಿದ್ದರು. ಮಹಿಳಾ ಪಾತ್ರಧಾರಿಗಳು, ವಾದ್ಯದವರು, ಹಾಡುಗಾರರು ಆ ಕಂಪನಿಗೆ ಬೇಕಿತ್ತು. ಸಮೀಪದ ನಾಣಿಕೆರೆಯಲ್ಲಿ ಬಡತನದಿಂದ ನರಳುತ್ತಿದ್ದ, ಹಿಂದುಳಿದ ವರ್ಗದ, ಕಲಾಕಾರರ ಒಂದು ಇಡೀ ಕುಟುಂಬದ ಸಹೋದರ ಬಳಗವೇ ಗರೂಡರ ನಾಟಕ ಕಂಪನಿ ಸೇರಿತು. ಅದೇ ದುರ್ಗಾದಾಸ್ ಅವರ ಕುಟುಂಬ. ಹೊಟ್ಟೆ ಪಾಡಿಗೆ ಆ ಕಂಪನಿ ಸೇರಿದ ಈ ಕುಟುಂಬಕ್ಕೆ ಮುಂದೆ ಇಂತಹ ಖ್ಯಾತಿ ಬರಬಹುದೆಂಬ ಕಲ್ಪನೆಯೂ ಆಗ ಇರಲಿಕ್ಕಿಲ್ಲ. ಗರೂಡರ ಕಂಪನಿಯಲ್ಲಿ ಅಕ್ಕಂದಿರಾದ ಸಂಜೀವಮ್ಮ, ಅಂಜಿನೆಮ್ಮ ಮುಖಕ್ಕೆ ಬಣ್ಣ ಹಚ್ಚಿದರೆ, ತಮ್ಮ ಹನುಮಂತಪ್ಪ ಸಂಗೀತಕ್ಕೆ ಸಾಥಿ ನೀಡಲು ವಾದ್ಯ ಹಿಡಿದರು. ಎಲ್ಲರಿಗಿಂತ ಚಿಕ್ಕವರಾದ ದುರ್ಗಾದಾಸ್ ಬಾಲ ಪಾತ್ರದಾರಿಯಾದರು.

ಅಪ್ಪನ ಬಯಲಾಟಗಳಲ್ಲಿ ಹಾಡಿ, ನರ್ತಿಸಿ ಅಭಿನಯಿಸಿ ಪರಿಚಯವಿದ್ದ ಸಂಜೀವಮ್ಮ ಮತ್ತು ಅಂಜಿನೆಮ್ಮ ಅವರಿಗೆ ಇಲ್ಲಿ ಒಳ್ಳೆಯ ಅಖಾಡವೇ ದೊರೆಯಿತು. ಗರೂಡರ ಗರಡಿಯಲ್ಲಿ ಪಳಗಿ ಒಳ್ಳೆಯ ನಟಿಯರೆನಿಸಿಕೊಂಡರು. ಅವರೊಂದಿಗೆ ಎಲ್ಲಾ ಪ್ರಮುಖ ಪಾತ್ರಗಳಲ್ಲಿ ಅಭಿನಯಿಸಿ ಹೆಸರಾಂತ ಕಲಾವಿದರಾದರಲ್ಲದೆ, ಕಂಪನಿಯ ಶ್ರೇಯಸ್ಸನ್ನು ಹೆಚ್ಚಿಸಿದರು. ಅದುವರೆಗೂ ಪುರುಷರೇ ಮಹಿಳೆಯ ಪಾತ್ರಗಳನ್ನು ನಿರ್ವಹಿಸುತ್ತಿದ್ದರು. ಮಹಿಳೆಯರೇ ಮಹಿಳೆ ಪಾತ್ರ ಮಾಡುವುದನ್ನು ನೋಡಲು ಪ್ರೇಕ್ಷಕರ ಕುತೂಹಲ ಹೆಚ್ಚಿತು. ಇದರಿಂದ ಪ್ರೇಕ್ಷಕರ ಸಂಖ್ಯೆಯೂ ಬೆಳೆಯಿತು. ಕನ್ನಡ ರಂಗಭೂಮಿಗೆ ದಕ್ಕಿದ ಈ ಹೊಸ ಆಯಾಮದ ಕೀರ್ತಿಯಲ್ಲಿ ಮರಿಯಮ್ಮನಹಳ್ಳಿಯ ಪಾಲು ದೊಡ್ಡದು.

ಆ ಕಾಲದಲ್ಲಿ ನಟ-ನಟಿಗೆ ಚೆನ್ನಾಗಿ ಹಾಡಲು ಬರಲೇಬೇಕಾಗಿತ್ತು. ಅಭಿನಯಕ್ಕೆ ಹಾಡುವುದು ಅನಿವಾರ್ಯವಾಗಿದ್ದ ಕಾಲ ಅದು. ಅಂಜಿನೆಮ್ಮನವರು ಹಾಡುಗಾರಿಕೆಯಲ್ಲಿ ಎಷ್ಟು ಎತ್ತರಕ್ಕೇರಿದರೆಂದರೆ ಅವರು ಹಾಡುವಾಗ ಸ್ವತಃ ಗರೂಡರೇ ಸೈಡ್‌ವಿಂಗ್‌ನಲ್ಲಿ ಕುಳಿತು ತನ್ಮಯರಾಗಿ ಆಲಿಸುತ್ತ ಮೈ ಮರೆಯುತ್ತಿದ್ದರಂತೆ. ಅಂಜಿನೆಮ್ಮ ಅವರು 'ಮಾಯಾ ಬಜಾರ್' ನಾಟಕಕ್ಕೆ ಹಾಡಿದ 'ಏನಗೇಕೀ ಲಗ್ನದ ಬಂಧ, ಮನ ಒಪ್ಪಿದ ವರನೇ ಚಂದ' ಹಾಡನ್ನು ಹಳೇ ಕಾಲದ ವೃದ್ಧರು ಈಗಲೂ ನೆನೆಸಿಕೊಳ್ಳುತ್ತಾರೆ. ಆ ಕಂಪನಿಯ ಋಣ ತೀರಿದ ಮೇಲೆ, ಮುಂದೆ ಕನ್ನಡದ ಹೆಸರಾಂತ ನಾಟಕ ಕಂಪನಿಗಳಲ್ಲೆಲ್ಲಾ ಅಭಿನಯಿಸಿದ ಈ ಸಹೋದರ ವರ್ಗ ೧೯೩೪ರಲ್ಲಿ ಸಂಜೀವಮ್ಮನವರ ನೇತೃತ್ವದಲ್ಲಿ ಸ್ವತಃ ಒಂದು ನಾಟಕ ಕಂಪನಿಯನ್ನೇ ಸ್ಥಾಪಿಸಿ ಕೆಲ ಕಾಲ ನಡೆಸಿತು. ಬಾಲ ಪಾತ್ರವಹಿಸುತ್ತಿದ್ದ ದುರ್ಗಾದಾಸ್ ಮುಂದೆ ಬಹುತೇಕ ನಾಟಕ ಕಂಪನಿಗಳ ಹೀರೋ ಆಗಿ ಅಭಿನಯಿಸಿ ಹೆಸರಾಂತ ನಟರಾದರು. ಆ ಕಾಲದ ಅತ್ಯಂತ ಸುಪ್ರಸಿದ್ಧ ನಟರಲ್ಲಿ ದುರ್ಗಾದಾಸ್ ಪ್ರಮುಖರು.

ಕೆಲವು ಪ್ರಖ್ಯಾತ ನಟ-ನಟಿಯರಿಗೆ ಹೊಂದಿಕೆಯಾಗುವಂತೆ ಪಾತ್ರರಚನೆ ಮಾಡುತ್ತಿದ್ದರೆಂಬ ಪ್ರತೀತಿ ಕರ್ನಾಟಕದ ಶೇಕ್ಷ್ಪಿಯರ್ ಎನಿಸಿದ್ದ ಕಂದಗಲ್ ಹನುಮಂತರಾಯರಿಗಿತ್ತು. ಆ ಕಾಲದ ಕನ್ನಡದ ಘಟಾನುಘಟಿ ನಟರುಗಳಿಗೆ ಒಪ್ಪುವಂತ ಪಾತ್ರವೊಂದಕ್ಕೆ ಪ್ರಾಧಾನ್ಯತೆ ನೀಡಿ ಅವರು ಕೆಲವು ನಾಟಕಗಳನ್ನು ರಚಿಸಿದರು ಎಂದೂ ಹೇಳಲಾಗುತ್ತದೆ. ಅದೃಶ್ಯಪ್ಪ ಮಾನ್ವಿ ಅವರನ್ನು ಗಮನದಲ್ಲಿಟ್ಟುಕೊಂಡು ಭೀಮನ ಪಾತ್ರಕ್ಕೆ ಆದ್ಯತೆ ನೀಡಿ 'ಬಾಣಸಿಗ ಭೀಮ', ಎಲಿವಾಳ ಸಿದ್ಧಯ್ಯಸ್ವಾಮಿ ಅವರನ್ನು ಗಮನದಲ್ಲಿಟ್ಟುಕೊಂಡು ಅಶ್ವತ್ಥಾಮನ ಪಾತ್ರಕ್ಕೆ ಪ್ರಾಧಾನ್ಯತೆ ನೀಡಿ 'ರಕ್ತರಾತ್ರಿ' ನಾಟಕವನ್ನು ರಚಿಸಿದರು. ಗೋಕಾಕ ಬಸವಣ್ಣೆಪ್ಪ ಅವರಿಗಾಗಿ ಮಹಾಭಾರತ ಕುರಿತ ಎಲ್ಲ ನಾಟಕಗಳಲ್ಲಿ ಕೃಷ್ಣನ ಪಾತ್ರಕ್ಕೆ ವಿಶೇಷ ಟಚ್ ನೀಡದರು. ಅರ್ಜುನನ ಪಾತ್ರಕ್ಕೆ ದುರ್ಗಾದಾಸ್ ಅವರನ್ನೇ ಗಮನದಲ್ಲಿಟ್ಟುಕೊಂಡ ಕಂದಗಲ್ಲರು 'ಚಿತ್ರಾಂಗದಾ' ಎಂಬ ಸುವಿಖ್ಯಾತ ನಾಟಕ ರಚಿಸಿದರು. ಸಿದ್ಧಯ್ಯಸ್ವಾಮಿ, ಅದೃಶ್ಯಪ್ಪ, ಗೋಕಾಕ ಬಸವಣ್ಣೆಪ್ಪ ಅವರ ಸಾಲಿನಲ್ಲಿ ನಿಲ್ಲುವ ಹೆಸರು ಈ ಊರಿನ ದುರ್ಗಾದಾಸ್ ಅವರದು.

ಹೆಚ್ಚು ಓದಿರದ ದುರ್ಗಾದಾಸ್ ನಾಟಕ ಕಂಪನಿಗಳ ತಮ್ಮ ಸುದೀರ್ಘ ಅನುಭವದಿಂದಲೇ ನಾಟಕಗಳನ್ನು ರಚಿಸಿ ನಾಟಕಕಾರರೂ ಆದದ್ದು ಸೋಜಿಗದ ಸಂಗತಿ. ಅವರು ರಚಿಸಿದ 'ನಿರ್ಮಲಾ', 'ಪಾಶುಪತಾಸ್ತ್ರ', 'ದ್ರುಪದ ಕನ್ಯಾ' ನಾಟಕಗಳನ್ನು ಹಲವು ನಾಟಕ ಕಂಪನಿಗಳು ಅಭಿನಯಿಸಿದವು. ಮುದ್ರಣಗೊಂಡ ಅವನ್ನು ನಂತರ ಹಳ್ಳಿಗಾಡಿನ ಜನರು ಅಭಿನಯಿಸಿದರು. ದುರ್ಗಾದಾಸ್ ಅವರ ಮಗಳು ಹನುಮಕ್ಕ ನೀನಾಸಂನ ನಾಟಕ ಡಿಪ್ಲೊಮಾ ಪದವೀಧರೆ. ಕಳೆದ ೪ ವರ್ಷಗಳ ತಿರುಗಾಟದ ಪ್ರದರ್ಶನಗಳಲ್ಲಿ ಆಕೆ ಪ್ರಮುಖ ನಟಿಯಾಗಿದ್ದಾರೆ. 

೧೯೨೦ರ ದಶಕದಲ್ಲೇ ನಾಣಿಕೆರೆಯಲ್ಲಿ ಅರ್ಷಿ ಅಡಿವಾಚಾರ್ಯರು ಹವ್ಯಾಸಿ ರಂಗ ತಂಡವೊಂದನ್ನು ಕಟ್ಟಿದ್ದರಲ್ಲದೆ, ಚಂದ್ರಘಾಟ್ ಮತ್ತು ಮೇಘಘಾಟ್ ಎಂಬ ಎರಡು ನಾಟಕ ಕಂಪನಿಗಳು ಈ ಊರಿನಲ್ಲಿ ಸತತವಾಗಿ ನಾಟಕಗಳನ್ನು ಪ್ರದರ್ಶಿಸುತ್ತಿದ್ದವಂತೆ. ಚಿದ್ರಿ ವೆಂಕಟರಮಣ ಶೆಟ್ಟಿ, ಉಪೇಂದ್ರಚಾರ್, ಕೊಟ್ರಗೌಡ(ಸಚಿವ ಎಂ.ಪಿ.ಪ್ರಕಾಶರ ದೊಡ್ಡಪ್ಪ) ಮುಂತಾದ ಪ್ರತಿಭಾವಂತ ನಟರು ಆ ಕಾಲಕ್ಕೆ ಈ ಊರಿನಲ್ಲಿ ರಂಗ ಚಟುವಟಿಕೆಯನ್ನು ಜೀವಂತವಾಗಿಟ್ಟಿದ್ದರು. ಬಹುಶಃ ಇದೇ ದಿನಗಳಲ್ಲಿ ಈ ಊರಿನ ಬ್ರಾಹ್ಮಣರ ಹೆಣ್ಣು ಮಗಳೊಬ್ಬಳು ಊರು ತೊರೆದು ಹೋಗಿ, ಅಲ್ಲಿ ಇಲ್ಲಿ ಅಲೆದಾಡಿ ಸುಬ್ಬಯ್ಯನಾಯ್ಡು ಅವರನ್ನು ವರಿಸಿದ ಪ್ರಖ್ಯಾತ ರಂಗನಟಿ ಲಕ್ಷ್ಮೀಬಾಯಿ ಎಂದು ಸುದ್ದಿಯೊಂದು ಬಾಯಿಂದ ಬಾಯಿಗೆ ಹಬ್ಬಿತ್ತು. ಆದರೆ ಈ ಬಗ್ಗೆ ಖಚಿತ ಮಾಹಿತಿಗಳಿಲ್ಲ. ಕಮಲಾಬಾಯಿ ಮತ್ತು ಲಕ್ಷ್ಮೀಬಾಯಿ ಸಹೋದರಿಯರು ಆರ್. ನಾಗೇಂದ್ರರಾವ್ ಅವರನ್ನು ವರಿಸಿದ ಕಮಲಾಬಾಯಿ ಸಹ ಪ್ರಖ್ಯಾತ ಅಭಿನೇತ್ರಿ. ಈ ಇಬ್ಬರೂ ಬೆಂಗಳೂರು ಸಮೀಪದ ಹಳ್ಳಿಯವರೆಂದು ಕಮಲಾಬಾಯಿ ಅವರ ಕುರಿತು ಪತ್ರಿಕೆಗಳಲ್ಲಿ ಬಂದಿರುವ ಬರಹಗಳಿಂದ ತಿಳಿದು ಬರುತ್ತದೆ. ಈ ಕತೆ ಈ ಊರಿನ ಬಗ್ಗೆ ಯಾಕೆ ಹರಡಿತೋ ತಿಳಿಯದು. ಅಪಾರ ಸಂಖ್ಯೆಯ ಕಲಾವಿದರನ್ನು ಹೆತ್ತ ಊರು ಎಂಬ ಹೆಚ್ಚುಗಾರಿಕೆಯನ್ನು ಸಾರಲೆಂದು ಇಂತಹ ಐತಿಹ್ಯಗಳು ಹುಟ್ಟಿಕೊಂಡಿರಬೇಕು.

ಕೂಲಿ ಮಾಡುವುದಕ್ಕೆ ಬದಲಾಗಿ ಕಲಾವಿದೆಯರಾಗುವುದು ಅಷ್ಟರ ಮಟ್ಟಿಗೆ ಉತ್ತಮ ಎನ್ನುವುದನ್ನು ಬಿಟ್ಟರೆ. ಇಲ್ಲಿನ ಕಲಾವಿದರಿಗೆ ಅಭಿನಯ, ಸಂಗೀತ ಕಲಿಯುವ ವಾತಾವರಣ ಯಾವತ್ತೂ ಇರಲಿಲ್ಲ. ಮೊದಲಿನ ತಲೆಮಾರಿನ ನಟಿಯರು ತಮ್ಮೂರಿನಲ್ಲಿ ಆಗುತ್ತಿದ್ದ ಬಯಲಾಟಗಳಿಂದ ಕುಣಿತ, ಹಾವ-ಭಾವ ಕಲಿತು ಮುಖಕ್ಕೆ ಬಣ್ಣ ಹಚ್ಚಿದರು. ಆಗಾಗ ಕ್ಯಾಂಪು ಮಾಡುತ್ತಿದ್ದ ನಾಟಕ ಕಂಪನಿಗಳಲ್ಲಿಯ ಅಭಿನಯ ನೋಡಿ ಅದರಿಂದ ಕಲಿತರು. ಹಳ್ಳಿಗಳ ಜನ ವರ್ಷಕ್ಕೊಮ್ಮೆಯೋ ಅಥವಾ ಎರಡುಬಾರಿಯೋ ಜಾತ್ರೆ ಉತ್ಸವಗಳಲ್ಲಿ ಮಾಡುತ್ತಿದ್ದ ಬಯಲಾಟಗಳನ್ನು (ಜಾನಪದ ನಾಟಕ) ಸ್ವಲ್ಪ ಮಟ್ಟಿಗೆ ಕೈಬಿಟ್ಟು, ಆ ಜಾಗದಲ್ಲಿ ನಾಟಕ ಕಂಪನಿ ಮಾದರಿಯಲ್ಲಿ ನಾಟಕಗಳನ್ನು ಆಡಲು ಆರಂಭಿಸಿದ ಕಾಲ ಅದು. ಮಹಿಳೆ ಪಾತ್ರಗಳನ್ನೂ ಪುರುಷರೇ ಮಾಡುತ್ತಿದ್ದರು. ಮಹಿಳೆಯರು ಈಗ ನಟಿಸುತ್ತಾರೆ. ಅಂತಹ ನಟಿಯರು ಮರಿಯಮ್ಮನಹಳ್ಳಿಯಲ್ಲಿದ್ದಾರೆ ಎಂದು ಗೊತ್ತಾದ ಸುತ್ತಲಿನ ಹಳ್ಳಿಯ ಜನ ಈ ಊರಿಗೆ ಬಂದು ಮಹಿಳೆಯರನ್ನು ತಮ್ಮ ಊರಿನ ನಾಟಕದಲ್ಲಿ ಪಾರ್ಟು (ಪಾತ್ರ) ಮಾಡಲು ಆಹ್ವಾನಿಸಿದರು. ನಾಣಿಕೆರೆ ಮುಳುಗಿ ಅಲ್ಲಿಯ ಕಲಾ ಸಂಪತ್ತು ಮರಿಯಮ್ಮನಹಳ್ಳಿಗೆ ವರ್ಗಾವಣೆಯಾದ ೫೦ರ ದಶಕದಿಂದ ಈ ಪರಿಪಾಠ ಮಾಡುತ್ತಿದ್ದರು. ನಟಿಯರಿಗೆ ಆರೇಳು ದಿನಗಳ ತಾಲೀಮು ಸಾಕಾಗುತ್ತಿತ್ತು. ಆರೇಳು ದಿನ ತಾಲೀಮು ಮಾಡಿ ತಮ್ಮ ಊರಿಗೆ ವಾಪಸ್ ಹೋಗಿ ನಾಟಕದ ದಿನ ಬರುತ್ತಿದ್ದರು. ನಂತರ ಬರಬರುತ್ತ ಒಂದೆರಡು ದಿನ ಮಾತ್ರ ಪ್ರಾಕ್ಟೀಸಿಗೆ ಹೋಗಲು ಆರಂಭಿಸಿದರು. ಈಗೀಗ ದೇವದಾಸಿಯಾಗುವುದರಿಂದ ಇಂತಹ ಸ್ವಾತಂತ್ರ್ಯ ಲಭಿಸುತ್ತದೆ. ಇದೇ ಕಾರಣಕ್ಕೆ ತನ್ನ ವೈಯಕ್ತಿಕ ಬದುಕಿನಲ್ಲಿ ಸದಾ ಅಭದ್ರತೆಯಲ್ಲಿ ತೊಳಲಾಡುವುದು ಇದರ ಇನ್ನೊಂದು ಮುಖ. ದೇವದಾಸಿಯನ್ನು ವೇಶ್ಯೆಯೆಂದು ಸಮೀಕರಿಸುವುದರಿಂದ ಈ ಪದ್ಧತಿಯನ್ನು ಅರ್ಥ ಮಾಡಿಕೊಂಡಂತಾಗುವುದಿಲ್ಲ. ವೇಶ್ಯೆ ಯಾರಾದರೂ ಆಗಬಹುದು. ದೇವದಾಸಿಯೇ ಆಗಬೇಕೆಂದೇನೂ ಇಲ್ಲ. ಈ ಪದ್ಧತಿ ಆಚರಿಸುತ್ತಿದ್ದ ಕೆಲ ಕುಟುಂಬಗಳು ಈಗೀಗ ಕೈ ಬಿಡುತ್ತಿವೆ. ಹಾಗಾಗಿ ಮಹಿಳಾ ಕಲಾವಿದರೂ ಕಡಿಮೆಯಾಗುತ್ತಿದ್ದಾರೆ. ಗದಗ, ಹುಬ್ಬಳ್ಳಿ, ಇಳಕಲ್, ಕೂಡ್ಲಿಗಿ, ಬಳ್ಳಾರಿ ಮುಂತಾದ ಊರುಗಳು ಕನ್ನಡ ರಂಗಭೂಮಿಗೆ ಹೆಚ್ಚಿನ ಮಹಿಳಾ ಕಲಾವಿದರನ್ನು ಕೊಟ್ಟಿವೆ. ಈಗೀಗ ನಾಟಕದ ದಿನವೇ ನೇರವಾಗಿ ಹೋಗುತ್ತಾರೆ. ಸೀಜನ್ ಇಲ್ಲದಾಗ ಮಧ್ಯೆ ಯಾವುದಾದರೂ ನಾಟಕ ಕಂಪನಿಗಳಲ್ಲಿ ಕರೆ ಬಂದರೆ ಕೆಲ ಕಾಲ ಹೋಗಿ ನಟಿಸಿ ಬಂದದ್ದೂ ಇದೆ. ಆದರೆ ಹಳ್ಳಿ ನಾಟಕಗಳನ್ನೇ ತಮ್ಮ ವೃತ್ತಿಯಾಧಾರವಾಗಿ ಮಾಡಿಕೊಂಡವರು ವೃತ್ತಿ ರಂಗ ಕಲಾವಿದರಾದರು. ಕರ್ನಾಟಕದಲ್ಲಿ ಆರಂಭವಾದ ಈ ಹೊಸ ಪರಂಪರೆಯ ಮೊದಲ ಪೀಳಿಗೆಯ ನಟಿಯರು ಈ ಊರಿನವರು ಎಂಬುದೇ ಈ ಕಲಾ ಗ್ರಾಮದ ವಿಶೇಷತೆ. ಅಲ್ಲಿಂದ ಮುಂದುವರಿದ ಈ ಯಶೋಗಾಥೆ ಹಿಂತಿರುಗಿ ನೋಡಲೇ ಇಲ್ಲ.

**ಬಾರಿಕರ ಲಿಂಗಮ್ಮ** : ೮೫ ವರ್ಷದ ಹಿರಿಯ ರಂಗ ಕಲಾವಿದೆ. ೬೦ ವರ್ಷಗಳ ಹಿಂದೆ ನಾಣಿಕೆರೆ ಹಾಗೂ ಸುತ್ತಲಿನ ಕೆಲವು ಹಳ್ಳಿಗಳಲ್ಲಿ ಹವ್ಯಾಸಕ್ಕಾಗಿ 'ಕೃಷ್ಣ ತುಲಾಬಾರ', 'ಪ್ರಮೀಳಾ

ದರ್ಬಾರ', 'ಶಾಕುಂತಲಾ' ಮುಂತಾದ ನಾಟಕಗಳಲ್ಲಿ ಅಭಿನಯಿಸಿದರು. ಇವರ ಮಗ ಡಾ.ಬಿ.ಅಂಬಣ್ಣ ಅವರು ತಾಯಿಯ ಹೆಸರಿನ ದತ್ತಿ ಸ್ಥಾಪಿಸಿ ರಂಗ ಚಟುವಟಿಕೆಗಳಿಗೆ ಈಗಲೂ ಪ್ರೋತ್ಸಾಹ ನೀಡುತ್ತಿದ್ದಾರೆ.

**ತಳವಾರ ಹನುಮಂತಮ್ಮ** : ತಮ್ಮ ಕಂಚಿನ ಕಂಠದಿಂದ, ಅಮೋಘ ಅಭಿನಯದಿಂದ ನಾಲ್ಕು ದಶಕಗಳ ಕಾಲ ಸುತ್ತಲಿನ ನೂರೆಂಟು ಹಳ್ಳಿಗಳಲ್ಲಿ ಹೆಸರುವಾಸಿಯಾದ ಖ್ಯಾತಿ ವೃತ್ತಿ ನಟಿ ಇವರು. ಇವರ ಪತಿ ಶೆಟ್ರು ಶೇಷಗಿರಿಯಪ್ಪ ಅವರಿಂದ ಇವರಿಗೆ ಹೆಚ್ಚಿನ ಪ್ರೋತ್ಸಾಹ ಸಿಕ್ಕಿತು. ಮರಿಯಮ್ಮನಹಳ್ಳಿಯಲ್ಲಿ ಈಗ ಸಹೋದರಿಯ ಮಕ್ಕಳೊಂದಿಗೆ (ಇವರಿಗೆ ಮಕ್ಕಳಿಲ್ಲ) ನಿವೃತ್ತ ಜೀವನ ಸಾಗಿಸಿದ್ದಾರೆ.

**ಮಣಿಗಾರ ಹನುಮಂತಮ್ಮ** : ಹಳ್ಳಿಗಳಲ್ಲಿ ನಟಿಸುತ್ತಿದ್ದ ಈ ಪ್ರಸಿದ್ಧ ರಂಗ ತಾರೆಯನ್ನುವರಿಸಿದ ಗಂಗಾವತಿಯ ಪಂಪನಗೌಡ ಎಂಬುವರು ಇವರಿಗಾಗೇ ಒಂದು ನಾಟಕ ಕಂಪನಿ ಮಾಡಿಕೊಟ್ಟಿದ್ದರು. ಕೆಲ ಕಾಲ ನಡೆದು ಅದು ನಿಂತಿತು. ಅಲ್ಲಿಂದ ಹನುಮಂತಮ್ಮ ಅಭಿನಯ ನಿಲ್ಲಿಸಿದರು. ಶಿವದೀಕ್ಷೆ ಪಡೆದು ಲಿಂಗಾಯಿತರಾಗಿ, ಹೆಸರನ್ನೂ ಬದಲಿಸಿಕೊಂಡು ಗಂಗಾವತಿಯಲ್ಲಿ ನೆಲೆನಿಂತರು. ಮಕ್ಕಳು ವ್ಯಾಪಾರ ಮಾಡುತ್ತಿದ್ದಾರೆ. ಇವರ ತಂಗಿ ಮಣಿಗಾರ ಭೀಮವ್ವ ಸಹ ಕೆಲ ದಿನ ನಟಿಸುತ್ತಿದ್ದರು.

**ಸೆರೆಗಾರ ಸುವರ್ಣಮ್ಮ** : ಚಿಕ್ಕ ವಯಸ್ಸಿನಲ್ಲೇ ರಂಗಕ್ಕೆ ದುಮುಕಿದ ಈ ವೃತ್ತಿ ಕಲಾವಿದೆ ಮಲ್ಲಿಕಾರ್ಜುನನ ಪಾತ್ರದಲ್ಲಿ ಹೆಚ್ಚು ಪ್ರಸಿದ್ಧರಾಗಿದ್ದರು. ಇವರ ಮಕ್ಕಳಾದ ಶಾಮಲಾ ಮತ್ತು ಎಸ್.ರೇಣುಕ ಸಹ ತಾಯಿಯ ವೃತ್ತಿಯನ್ನು ಮುಂದುವರಿಸಿದರು. ಶಾಮಲಾ ನಟಿಸುವುದನ್ನು ಕೆಲ ವರ್ಷಗಳ ಹಿಂದೆ ನಿಲ್ಲಿಸಿದರು. ಎಸ್.ರೇಣುಕ ಹಾಲಿ ನಟಿಸುತ್ತಿರುವ ಪ್ರತಿಭಾವಂತ ಕಲಾವಿದೆ. ಪಾತ್ರಕ್ಕೆ ಜೀವ ತುಂಬುವಲ್ಲಿ ಈಕೆ ಎತ್ತಿದಕೈ. ಆದರೆ ಇತ್ತೀಚಿನ ವರ್ಷಗಳಲ್ಲಿ ರೇಣುಕಾ ನಟನೆಯಲ್ಲಿ ಆಸಕ್ತಿ ಕಡಿಮೆ ಮಾಡಿಕೊಂಡಿರುವುದು ಕಲಾರಂಗಕ್ಕೆ ಆದ ನಷ್ಟದ ಸಂಗತಿ.

ಭೀಮನ ಪಾತ್ರದಲ್ಲಿ ಹೆಸರು ವಾಸಿಯಾಗಿದ್ದವರು ಸುಮತ್ರಮ್ಮ ಪೌರಾಣಿಕ ನಾಟಕಗಳ ಕ್ಲಿಷ್ಟ ಮಾತುಗಳನ್ನು ಪಟ, ಪಟನೆ ಹೇಳುತ್ತಿದ್ದ ಮಾತ್ತೊಬ್ಬ ಪ್ರಖ್ಯಾತ ನಟಿ ಸೆರೆಗಾರ ಗಂಗಮ್ಮ, ಜೋಗಿ ಬಸಮ್ಮ ಎಲ್ಲ ಬಗೆಯ ನಾಟಕಗಳಲ್ಲಿ ಹೆಸರಾದವರು ಪಾತ್ರಕ್ಕೆ ಅಂದವಾಗಿ ಒಪ್ಪುತ್ತಿದ್ದ ಅಷ್ಟೇ ಉತ್ತಮವಾಗಿ ಅಭಿನಯಿಸುತ್ತಿದ್ದ ತಿಮ್ಮವ್ವ (ತಿರುಮಲ) ದೀರ್ಘ ಕಾಲ ಇದೇ ವೃತ್ತಿಯನ್ನು ಅವಲಂಬಿಸಿದರು. ಇವರ ಮಗಳು ಶಾರದಾ ಹಾಲಿ ಅಭಿನಯಿಸುತ್ತಿರುವ ಹೆಚ್ಚಿನ ಬೇಡಿಕೆ ಇರುವ ನಟಿ. ಎಂ.ಅಂಬುಜಾ, ನಂದಿಹಳ್ಳಿ ರಾಮಕ್ಕ ಎಂಬುವರು ಬೇಗ ವೃತ್ತಿಯಿಂದ ನಿವೃತ್ತಿ ಹೊಂದಿ ಹೊಲ ಗದ್ದೆ ಕೆಲಸಗಳಿಗೆ ಕೂಲಿ ಹೋಗಲಾರಂಭಿಸಿದರು. ಕನಕವ್ವ ಎಂಬ ವೃತ್ತಿ ನಟಿ ಮಕ್ಕಳನ್ನು ಓದಿಸಿ, ನೌಕರಿ ಕೊಡಿಸಿದ್ದಾರೆ.

ಅರಸಿಕೇರಿ ಯಲ್ಲಮ್ಮ ಸಾಮಾಜಿಕ, ಪೌರಾಣಿಕ ನಾಟಕಗಳೆರಡರಲ್ಲೂ ಪ್ರಸಿದ್ಧಿ ಹೊಂದಿದ್ದರು. ದೀರ್ಘ ಕಾಲ ರಂಗದ ಮೇಲಿದ್ದ ಇವರು ಮಕ್ಕಳಾದ ಪಾರ್ವತಿ ಮತ್ತು ಎ.ರೇಣುಕಾ ಅವರನ್ನು ನಟಿಯರಾಗಿ ತರಬೇತಿಗೊಳಿಸಿದರು.

ಪಾರ್ವತಿ ಬೇಡಿಕೆಯ ನಟಿಯಾಗಿದ್ದ ದಿನಗಳಲ್ಲೇ ವಿಷಕುಡಿದು ಸತ್ತರು. ಎ.ರೇಣುಕಾಗೆ ನಾಟಕಗಳೇ ಆಸರೆ. ಚಿಕ್ಕಾಡಿ ಗಂಗಮ್ಮ ಎಂಬ ನಟಿ ೩೫ರ ಆಕಾಲ ವಯಸ್ಸಿನಲ್ಲೇ ತೀರಿಹೋದರು. ಎಲ್ಲಿಂದಲೋ ಬಂದು ಮರಿಯಮ್ಮನಹಳ್ಳಿಯಲ್ಲಿ ನೆಲೆಸಿದ್ದ ಆರ್.ನಾಗವೇಣಿ ಎಂಬ ನಟಿ ಇತ್ತೀಚೆಗೆ ತೀರಿಕೊಂಡರು. ಗಾಯನ ಅಭಿನಯ ಎರಡರಲ್ಲೂ ಪರಿಣಿತಿ ಇದ್ದ. ಉಜ್ವಲ ಭವಿಷ್ಯವಿದ್ದ ಮತ್ತೊಬ್ಬ ಪ್ರತಿಭಾವಂತ ಯುವ ನಟಿಯ ಶೋಭ ೧೫ ವರ್ಷಗಳ ಹಿಂದೆ ನಿಗೂಢವಾಗಿ ವಿಷ ಕುಡಿದು ಸತ್ತರು.

ಕೂಡ್ಲಿಗಿ ನಾಗವೇಣಿ ಎಂಬ ನಟಿ ಹಳ್ಳಿಗಳಲ್ಲಿ ನಟಿಸುವುದರೊಂದಿಗೆ ಕೆಲ ಕಾಲ ನಾಟಕ ಕಂಪನಿಗಳಲ್ಲೂ ಇದ್ದರೂ ನೌಕರಿಯಲ್ಲಿರುವ ಮಕ್ಕಳು ಇಳಿವಯಸ್ಸಿನಲ್ಲಿ ಆಸರೆಯಾಗಿದ್ದಾರೆ. ಗಂಟೆ ಹುಲಿಗಮ್ಮ, ಗಂಟೆ ಅಂಜಿನಮ್ಮ ಎಂಬುವರು ಅನಕ್ಷರಸ್ಥ ಪರಂಪರೆಯ ಮತ್ತಿಬ್ಬರು ನಟಿಯರು. ಮುಗಲಿ ಬಸಮ್ಮ ಎಂಬ ಕಲಾವಿದೆ ಅನಾರೋಗ್ಯದಿಂದ ನರಳಿ ಸತ್ತರು. ಎಚ್.ಶಾಂತಮ್ಮ ಮತ್ತು ಜಿ.ಶಾಮಲ ಎಂಬ ಅಕ್ಕ ತಂಗಿಯರು ಒಂದು ದಶಕ ಕಾಲ ನಟಿಸಿ ನಿವೃತ್ತಿ ಹೊಂದಿದರು. ಕೆಲಕಾಲ ನಟಿಸಿದರು ತಮ್ಮ ಛಾಪು ಮೂಡಿಸಿದವರು ಪದ್ಮಮ್ಮ (ಪದ್ಮಾವತಿ) ಚಂದ್ರಮ್ಮ (ಚಂದ್ರಕಲಾ) ಮತ್ತು ಕಾಳಿಗಂಗಮ್ಮ, ಮಧ್ಯಕ್ಕೆ ನಿಲ್ಲಿಸಿದರು, ಶೈಲಶ್ರೀ ಕೆ.ಅಂಬುಜ ಶ್ಯಾಮಲಾ ಕಲಾವತಿ. ಹಾಲಿ ನಟಿಸುತ್ತಿರುವ ನಟಿಯರೆಂದರೆ ಶಾರದಾ, ಸಾವಿತ್ರಿ, ಸರ್ವಮಂಗಳ, ಉಮಾ ಎನ್.ರೇಣುಕ, ಕೆ.ನಾಗರತ್ನಮ್ಮ.

**ಲಲಿತ ಕಲಾರಂಗ :**

ಲಲಿತ ಕಲಾ ರಂಗ ಎಂಬ ಪ್ರಯೋಗಶೀಲ ನಾಟಕ ತಂಡದ ಹುಟ್ಟು ವೃತ್ತಿಯ ಶಿಸ್ತು. ಹವ್ಯಾಸಿಯ ಪ್ರಯೋಗಶೀಲತೆ ಎರಡನ್ನು ಮೈಗೂಡಿಸಿಕೊಂಡ ಗ್ರಾಮೀಣ ಭಾಗದ ವಿಶಿಷ್ಟ ತಂಡ ಇದಾಗಿದೆ. ಇದರ ರೂವಾರಿ ಮರಿಯಮ್ಮನಹಳ್ಳಿ ಹತ್ತಿರ ಇರುವ ಜಿ.ನಾಗಲಾಪುರ ಗ್ರಾಮದ ಮ.ಬ.ಸೋಮಣ್ಣವರು. ತಬಲಾ ನುಡಿಸುವುದು, ನಾಟಕರಚಿಸುವುದು, ಅಭಿನಯ, ನಿರ್ದೇಶನ ಹೀಗೆ ರಂಗದ ಹಲವು ಮುಖಗಳಲ್ಲಿ ಪಳಗಿರುವ ಸೋಮಣ್ಣ ಹೊಸಪೇಟೆಯಲ್ಲಿ ಶಿಕ್ಷಕರಾಗಿದ್ದಾರೆ. ಈ ಊರಿನ ರಸೂಲ್, ನಾರಾಯಣ ಮೂರ್ತಿ, ಪತಿಬಸಪ್ಪ ನೇಮಿರಾಜ ಚಿದಂಬರ ದೀಕ್ಷಿತ್, ಡಾ.ಅಂಬಣ್ಣ, ವಿರುಪಾಕ್ಷಪ್ಪ, ನಾಗರತಮ್ಮ, ಕೆ.ಎಸ್.ರೇಣುಕ ಎನ್.ರೇಣುಕ, ಶಾರದ, ಯಶೋದ ಮುಂತಾದವರು ಇಂತಹ ತಂಡಕ್ಕಾಗಿ ಕಾಯ್ದಿದ್ದವರಂತೆ ಇದನ್ನು ಬೆಳೆಸಿದರು. ಇವರೆಲ್ಲರು ಕನಸಿನ ಪ್ರತೀಕವಾಗಿ ಈ ತಂಡ ರೂಪುಗೊಂಡಿತು. ಕೃಷಿಕರು, ಶಿಕ್ಷಕರು, ಚಿಕ್ಕ ವ್ಯಾಪಾರಿಗಳು, ಕರಕುಶಲ ಕರ್ಮಿಗಳು ಹೀಗೆ ಎಲ್ಲಾ ವರ್ಗದವರು ಈ ತಂಡದ ಸದಸ್ಯರಾಗಿದ್ದಾರೆ.

ಕಂಪನಿ ನಾಟಕಗಳಿಂದ ಆರಂಭಿಸಿ ಎಲ್ಲಾ ಮಾದರಿಯ ನಾಟಕಗಳನ್ನು ತಂಡ ಇದುವರೆಗೆ ಪ್ರಯೋಗಿಸುತ್ತ ಬಂದಿದೆ. ವಿಭಾಗ ಮಟ್ಟದ ನಾಟಕ ಸ್ಪರ್ಧೆಗಳನ್ನು ಏರ್ಪಡಿಸಿದೆ. ರಂಗ ಶಿಬಿರಗಳನ್ನು ನಡೆಸಿದೆ. ನೀನಾಸಂ, ಸಮುದಾಯ ಸೇರಿದಂತೆ ಎಲ್ಲ ಪ್ರಮುಖ ನಾಟಕ ತಂಡಗಳನ್ನು ಇಲ್ಲಿಗೆ ಕರೆಸಿಕೊಂಡಿದೆ. ನವೀನ, ಜಾನಪದ, ಕಂಪನಿ ಎಲ್ಲ ಶೈಲಿ ನಾಟಕಗಳು ಇದರಿಂದ ಪ್ರದರ್ಶಿತಗೊಂಡಿದೆ.

ಹವ್ಯಾಸಿ ತಂಡಗಳಲ್ಲಿ ಕೊರತೆ ಎಂದರೆ ಮಹಿಳಾ ನಟಿಯರು, ಹಳ್ಳಿ ಜನವಾದರೆ ವೃತ್ತಿ ನಟಿಯರನ್ನು ಕರೆಸಿಕೊಳ್ಳುತ್ತಾರೆ. ಪಟ್ಟಣದವರು ಆದಷ್ಟು ಮಹಿಳೆಯರೇ ಇಲ್ಲದೆ ನಾಟಕಗಳನ್ನು ಹುಡುಕುತ್ತಾರೆ. ಇವೆರಡು ಮಿತಿಗಳು ಈ ತಂಡಕ್ಕಿಲ್ಲ. ಈ ತಂಡದ ಮಹಿಳಾ ಸದಸ್ಯರೆಲ್ಲರೂ ವೃತ್ತಿರಂಗ ಕಲಾವಿದರು.

೧೯೯೮ರಲ್ಲಿ ಸ್ಥಾಪನೆಯಾದ ಲಲಿತ ಕಲಾರಂಗವು ಆರಂಭಕ್ಕೆ 'ರೊಟ್ಟಿ ಋಣ' (ಎನ್.ಎಸ್.ರಾವ್) 'ಗಂಡನ ಆಜ್ಞೆ' (ಲಂಗರಾಜ್) ರೀತಿಯ ಕಂಪನಿ ಶೈಲಿಯ ನಾಟಕ ಪ್ರದರ್ಶಿಸಿದರು. ಮಂಗಳೂರಿನ ಮೋಹನಚಂದ್ರರವರು ಮರಿಯಮ್ಮನಹಳ್ಳಿಯಲ್ಲಿ ರಂಗ ಶಿಬಿರ ನಡೆಸಿ, ಕಂಬಾರರ ಕಾಡುಕುದುರೆ ನಾಟಕ ಕಲಿಸಿದರು. ನೀನಾಸಂ ತಿರುಗಾಟದ ಕಲಾವಿದರು ಪ್ರತಿ ವರ್ಷನಾಟಕ ಪ್ರದರ್ಶಿಸಿದರು ಲಲಿತ ಕಲಾ ರಂಗ ಆರಂಭದಲ್ಲಿ ಗಮಕ ಸಂಯೋಜನೆಗಳನ್ನು ನಡೆಸಿತು, ಬಯಲಾಟ, ಕಲಾವಿದರ ಸಂಮ್ಮೇಳನ ಜರುಗಿಸಿತು.

೧೯೮೭ರಲ್ಲಿ ಲಲಿತ ಕಲಾರಂಗ ನಡೆಸಿದ ನಾಟಕೋತ್ಸವದಲ್ಲಿ ಹೈದ್ರಾಬಾದ್- ಕರ್ನಾಟಕದ ೯ ನಾಟಕಗಳು ಪ್ರದರ್ಶನಗೊಂಡವು. ಪ್ರತಿ ವರ್ಷ ಈ ಉತ್ಸವ ನಡೆಯುತಿತ್ತು.

ಡಾ.ಮಂಜುನಾಥ ಬೇವಿನಕಟ್ಟಿ ನೇತೃತ್ವದಲ್ಲಿ ೧೧ನೇ ವರ್ಷದ ಉತ್ಸವವು ಜಾನಪದ ಉತ್ಸವವಾಗಿತ್ತು.

ದೋಣಿಮಲೈನಲ್ಲಿ ೧೯೮೭ರಲ್ಲಿ ರಾಜ್ಯಮಟ್ಟದ ನಾಟಕ ಸ್ಪರ್ಧೆಯಲ್ಲಿ 'ರೊಟ್ಟಿ ಋಣ' ಪ್ರದರ್ಶಿಸಿದರು. ಕೆ.ನಾಗರತ್ನಮ್ಮ ಶ್ರೇಷ್ಠ ನಟಿ ಪ್ರಶಸ್ತಿ ಪಡೆದರು. ಅದೇ ವರ್ಷ ಟಿ.ಬಿ.ಡ್ಯಾಂ ಕನ್ನಡ ಕಲಾ ಸಂಘ ಏರ್ಪಡಿಸಿದ ಸ್ಪರ್ಧೆಯಲ್ಲಿ ಎಚ್, ರಸೂಲ್ ಮತ್ತು ನಾಗರತ್ನಮ್ಮ ಶ್ರೇಷ್ಠ ನಟ ಹಾಗೂ ನಟಿ ಪ್ರಶಸ್ತಿ ಪಡೆದರು.

೧೯೮೮ರಲ್ಲಿ ವಾರ್ತಾಇಲಾಖೆ ನೆರವಿನಿಂದ ಲಲಿತ ಕಲಾರಂಗವು ಹರಪನಹಳ್ಳಿ, ಹಡಗಲಿ, ಹಗರಿಬೊಮ್ಮನಹಳ್ಳಿಯಲ್ಲಿ ಆತ್ಮ ಯಾವ ಕುಲ, ಜೀವ ಯಾವ ಕುಲ ನಾಟಕಗಳನ್ನು ಪ್ರದರ್ಶಿಸಿದರು. ಅದೇ ವರ್ಷ ಗಂಗಾಧರ ಸ್ವಾಮಿ ನಿರ್ದೇಶನದಲ್ಲಿ ರಂಗ ತರಬೇತಿ ಶಿಬಿರ ನಡೆಯಿತು.

ಟಿ.ಬಿ.ಡ್ಯಾಂನಲ್ಲಿ ಏರ್ಪಡಿಸಿದ್ದ ಸ್ಪರ್ಧೆಯಲ್ಲಿ ಪ್ರದರ್ಶಿಸಿದ ಸಾಮ್ರಾಟ ಅಶೋಕ್ ನಾಟಕಕ್ಕೆ ಬಿ.ಎಂ.ಎಸ್. ಪ್ರಭು ಮತ್ತು ಎಸ್.ರೇಣುಕಾ ಅವರಿಗೆ ಶ್ರೇಷ್ಠ ಅಭಿನಯ ಪ್ರಶಸ್ತಿ ಸಂದವು. ೧೯೯೯ರಲ್ಲಿ ಮೋಹನ ಚಂದ್ರ ಕೀರಣಗಿ ಅವರ 'ಆದರ್ಶ ಪ್ರೇಮ' (ಅಂತರ್ಜಾತಿ ವಿವಾದ ನಾಟಕದ ಕಥವಸ್ತು) ಎಂಬ ಕಂಪನಿ ಶೈಲಿಯ ನಾಟಕವನ್ನು ಆಧುನಿಕ ಸ್ಪಾಟ್‌ಲೈಟ್ ಬೆಳಕಿನಲ್ಲಿ ಪ್ರದರ್ಶಿಸಲಾಯಿತು.

ಮರಿಯಮ್ಮನಹಳ್ಳಿಯ ಕಲಾಪರಂಪರೆಗೆ ಕಳಸವಿಟ್ಟ ಕೀರ್ತಿ ಪಡೆದವರು ಮೂರು ಕಲಾವಿದರು. ದುರ್ಗಾದಾಸ್ ಅವರು ೧೯೮೦ರಲ್ಲಿ ನಾಟಕ ಅಕಾಡಮಿ ಪ್ರಶಸ್ತಿಗೆ ಪಾತ್ರರಾದವರು, ೧೯೯೪ರಲ್ಲಿ ನಾಗರತ್ನಮ್ಮರಿಗೆ ನಾಟಕ ಅಕಾಡೆಮಿ ಪ್ರಶಸ್ತಿ, ೧೯೯೯ರಲ್ಲಿ ಸಾವಿತ್ರಮ್ಮ ದೇಜಗೌ ಮಹಿಳಾ ಪ್ರಶಸ್ತಿ, ೨೦೦೨ರಲ್ಲಿ ರಾಜ್ಯೋತ್ಸವ ಪ್ರಶಸ್ತಿ, ಮೈಲಾರಪ್ಪನವರಿಗೆ ತೆರೆಮರೆಯ ಕೆಲಸಕ್ಕಾಗಿ, ೧೯೯೮ರಲ್ಲಿ ನಾಟಕ ಅಕಾಡೆಮಿಯ ಪದ್ದಣ್ಣಶ್ರಮ ಪ್ರಶಸ್ತಿ ದೊರೆತಿದೆ.

**ಮಹಿಳಾ ವೃತ್ತಿರಂಗ ಕಲಾವಿದರ ಸಂಘ :**

೧೯೮೦ರಲ್ಲಿಯೇ ಅಸ್ತಿತ್ವದಲ್ಲಿತ್ತು. ಹೊಸಪೇಟೆ ಮತ್ತು ಸುತ್ತ ಮತ್ತಲಿನ ಗ್ರಾಮಗಳಲ್ಲಿ ಕೆಲವು ಕಾಲ ಕ್ಯಾಂಪ್ ಮಾಡಿದ ಆಗಿನ ತಂಡದಲ್ಲಿ ಸುಭದ್ರಮ್ಮ ಮನ್ಸೂರು, ಉಳೇಬೀಡು ರಂಗಮ್ಮ, ಭವಾನಿ, ವೀಣಾ, ವರಲಕ್ಷ್ಮಿ, ಕೂಡ್ಲಿಗಿ ಮುದ್ದಮ್ಮ, ಅಂಜನಮ್ಮ ಬಳ್ಳಾರಿ ಸುಜಾತಮ್ಮ ಅನ್ನಪೂರ್ಣ, ಸುಮಿತ್ರಮ್ಮ, ಎಸ್.ರೇಣುಕಾ, ಮುಂತಾದವರು ನಾಟಕವಾಡುತ್ತಿದ್ದರು. ನಂತರ ಈ ಸಂಘವು ತನ್ನ ಚಟುವಟಿಕೆಯನ್ನು ನಿಲ್ಲಿಸಿತು. ಈ ಸಂಘಕ್ಕೆ ನಾಗರತ್ನಮ್ಮನವರು ೧೯೯೮ರಲ್ಲಿ ಮರುಹುಟ್ಟು ನೀಡಿದರು. ಇಲ್ಲಿನ ಮಹಿಳಾ ಕಲಾವಿದರಿಗೆ ಒಂದು ರಂಗ ತರಬೇತಿ ಶಿಬಿರ ನಡೆಸಿ ಶಾಕುಂತಲಾ ನಾಟಕ ಪ್ರದರ್ಶಿಸಿದರು. ಇದಲ್ಲದೆ ಪ್ರೇಮಿಳಾ ರಾಜ್ಯ, ಹೇಮರೆಡ್ಡಿ ಮಲ್ಲಮ್ಮ, ಹಸಿರು ಬಳೆ, ರಕ್ತರಾತ್ರಿ ಮುಂತಾದ ನಾಟಕಗಳನ್ನು ರಾಜ್ಯಾದ್ಯಂತ ಪ್ರದರ್ಶಿಸಿದ್ದಾರೆ. ಈಗಲೂ ರಂಗ ಚಟುವಟಿಕೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ.

**೩.೮. ಜನಪದ ಕ್ರೀಡೆಗಳು :**

ಕ್ರೀಡೆಗಳು ಮಾನವ ಜೀವನದಲ್ಲಿ ಬಹು ಮಹತ್ತರವಾದ ಸ್ಥಾನವನ್ನು ಪಡೆದಿವೆ. ಈ ಕ್ರೀಡೆಗಳು ಮನುಷ್ಯನ ಹುಟ್ಟಿನೊಂದಿಗೆ ಹುಟ್ಟಿಕೊಂಡವು. ಏಕೆಂದರೆ ಅವನ ಬಾಲ್ಯಾವಸ್ಥೆಯಲ್ಲಿಯೇ ಗಿಡಗಳು ಚಿಗುರೊಡೆಯುವಂತೆ ಸಹಜವಾಗಿಯೇ ಹುಟ್ಟಿಕೊಂಡಿದೆ ಎಂದರೆ ತಪ್ಪಾಗಲಾರದು. ಅಂದರೆ ಪಕೃತಿಯಲ್ಲಿರುವ ಗಿಡ-ಮರ ಬಳ್ಳಿಗಳು ಗಾಳಿಗೆ ಸೋಂಕಿ 'ಸ್ಯೋಂ' ಎಂದು ಕುಲುಕಾಡುವುದು. ಸಮುದ್ರದಲ್ಲಿರುವ ಅಲೆಗಳ ಹೊಯ್ದಾಟ, ಇವುಗಳನ್ನೆಲ್ಲ ಅವಲೋಕಿಸಿದಾಗ ಪ್ರಕೃತಿ ಸಂಪೂರ್ಣವಾಗಿ ಕ್ರೀಡೆಗಳಲ್ಲಿ ಸಮ್ಮಿಲನಗೊಂಡಿದೆ ಎನ್ನಬಹುದು. ಹೀಗಾಗಿ ನಿಸರ್ಗದ ಮಡಿಲಿನಲ್ಲಿ ಬದುಕುವ ಮಾನವ ಜೀವಿಗೆ ಈ ಆಟಗಳೆಲ್ಲ ನೈಸರ್ಗಿಕವಾಗಿ ಬಂದವೆನ್ನಬಹುದು.

ಮಾನವನಿಗೆ ತಾಯಿಯ ತುಂಬುಮಡಿಲೆ ಈ ಆಟಗಳಿಗೆ ನಾಂದಿ, ಅವಳ ವಾತ್ಸಲ್ಯದ ಬೆಸುಗೆ ಆಟಗಳಿಗೆ ಪ್ರೇರಕ ಶಕ್ತಿಯಾಗಿದೆ. ಆಕೆಯ ಪ್ರೀತಿ ವಾತ್ಸಲ್ಯಗಳಿಂದ ಪುಟಗೊಂಡ ಮನಸ್ಸು ರೆಕ್ಕೆ ಚಿಟ್ಟು ಆಟ ಬಯಸಿ ತನ್ನ ಕೈ-ಕಾಲುಗಳನ್ನು ಆಡಿಸುವುದು ಆಕೆಯ ಬಳೆಗಳೊಂದಿಗೆ ಆಡುವುದು. ಅಂಗಾತ ಮಲಗಿ ತನ್ನ ಕಾಲುಗಳನ್ನು ಎತ್ತಿ ಅಲುಗಾಡಿಸಿ, ಕೇಕೆ ಹಾಕುವುದು ತನ್ನ ಕೈಗೆ ಸಿಕ್ಕ ವಸ್ತುವನ್ನು ಆಚೆ-ಈಚೆ ಬಿಸಾಡಿ ಮತ್ತೆ ಮುಟ್ಟಿ ತೆಗೆದುಕೊಳ್ಳಲು ಪ್ರಯತ್ನಿಸುವುದು

ಹಾಗೆಯೇ ತಾಯಿಯ ತೊಡೆಯ ಮೇಲೆಯೇ ಹಿಂಜೋಲಿ ಮುಂಜೋಲಿ ಹೊಡೆದು ತಾಯಿಯನ್ನು ಆನೆಯಾಟಕ್ಕೆ ಪ್ರೇರೇಪಿಸುವುದು.

"ಆನೆ ಬಂತೋಂದಾನೆ! ಯಾವುರಾನೆ! ಮೈಸೂರಾನೆ! ಇಲ್ಲಿಗ್ಯಾಕೆ ಬಂತು! ಹಾದಿತಪ್ಪಿ ಬಂತು! ಹಾದಿಗೊಂದು ದುಡ್ಡು! ಬೀದಿಗೊಂಡು ದುಡ್ಡು! ಅದೇ ದುಡ್ಡು! ಕೊಟ್ಟು! ಸೇರು ಕೊಬ್ಬರಿ ತಂದು! ಲಟ ಲಟ ಮುರಿದು! ಹುಡುಗ ಕೈಗೆ ಕೊಟ್ಟು! ತಾನಿಷ್ಟು ತಿಂತು! ಓಡೋಡಿ ಬಂತು!! ಎಂದು ಆಟವಾಡಿದಾಗ ಆ ಮಗುವಿಗೆ ಎಲ್ಲಿಲ್ಲದ ಖುಷಿ ಸ್ವಲ್ಪ ಓಡಾಡಲು ಕಲಿತ ಮೇಲೆ ಬಚ್ಚಿಟ್ಟುಕೊಳ್ಳುವ ಆಟವಾಡಿ ತಾನು ಸಂತೋಷಪಟ್ಟು, ಹಿರಿಯನ್ನು ಸಂತೋಷದಲ್ಲಿ ತೇಲಿಸುವುದು. ಮಗುವನ್ನು ಎದುರಿಗೆ ಕುಳ್ಳಿಸಿಕೊಂಡು ಮಗುವಿನ ಒಂದು ಕೈಬೆರಳನ್ನು ಅನ್ನ, ಸಾರು, ಹೋಳಿಗೆ, ತುಪ್ಪ, ಎಂದು ಹೆಸರಿಸಿ ಒಂದೊಂದು ಬೆರಳನ್ನು ಎಣಿಸಿ. ನೀನಿಷ್ಟು ಉಂಡು, ನಿಮ್ಮಪ್ಪ ಇಷ್ಟು ಉಂಡು, ನಿಮ್ಮಮ್ಮ ಇಷ್ಟು ಉಂಡು, ನಾನಿಷ್ಟು ಉಂಡು, ಉಳಿದಿದ್ದೆಲ್ಲ ಬುತ್ತಿಕಟ್ಟಿ ಮಗುವಿನ ಕೈಹಿಡಿದುಕೊಂಡು ನಾಣಿಕೇರಪ್ಪನ ಜಾತಿರಿ ಎಲ್ಲೈತೆ, ಎಲ್ಲೈತೆ ಎಂದು ಕಂಕುಳಲ್ಲಿ ಕಚುಗುಳಿ ಇಟ್ಟರೆ ಆ ಮಗು ನಗುವಿನ ಬುಗ್ಗೆಯನ್ನೆ ತೋರಿಸುತ್ತ ಚಂದಪ್ಪ ಚಂದಪ್ಪ ಚಾರಿಕಾಯಿ ಒಟ್ಲು ತುಂಬ ಬಾರಿಕಾಯಿ ಮಗುಗೊಂದು ಒಟ್ಲು ಬಾರಿಕಾಯಿ ಕೊಡು ಚಂದಪ್ಪ ಎಂದು ಅಂಗೈಯಿಂದ ಬಾರಿ ಕಾಯಿ ಹಿಡಿದ ಹಾಗೆ ಜೇಬಿನಲ್ಲಿ ಹಾಕಿದಂತೆ ಮಾಡಿ ಆಟದ ಮೂಲಕ ಊಟ ಮಾಡಿಸಿದರೆ, ಮಗು ಒಂದು ತುತ್ತು ಹೆಚ್ಚಿಗೆ ಊಟ ಮಾಡುತ್ತದೆ. ಹಾಗೆಯೇ ಮಗುವು ತನ್ನ ಮುಷ್ಠಿ ಬಿಗಿಯಾಗಿ ಹಿಡಿದುಕೊಂಡು ಇರುವುದು ಕಂಡು ತಾಯಿ 'ತಾತಾಗುಬ್ಬಿ ಪಾವನ ಗುಬ್ಬಿ, ಮುಚ್ಚಾ ತೆಗೆದ, ಮುನ್ನೂರು ಗುಬ್ಬಿ' ಎಂದು ಹಾಡಿದರೆ ಮಗುವಿನ ಆಟಕ್ಕೆ ಕಳೆ ಏರಿ ತನ್ನ ಮುಷ್ಠಿ ಬಿಚ್ಚುವುದು ತೆಗೆಯುವುದು ಮಾಡುತ್ತದೆ.

ಈ ಜನಪದ ಆಟವನ್ನು ಚಾರಿತ್ರಿಕವಾಗಿ, ಭೌಗೋಳಿಕವಾಗಿ ಅವಲೋಕಿಸಿದಾಗ ಎಲ್ಲ ಜನಪದ ಕ್ರೀಡೆಗಳು ಎಲ್ಲಾ ಕಾಲದಲ್ಲೂ ಎಲ್ಲಾ ಜನರಲ್ಲೂ ಜನಪ್ರಿಯವಾಗಿರಲಿಲ್ಲ. ಅಂದರೆ ಪರಂಪರಾಗತ ಸಲಕರಣೆಗಳನ್ನು ಬಳಸಿಕೊಂಡು ಮನೆಯ ಹೊರೆಗೆ ಮತ್ತು ಒಳಗೆ ಆಡಲಾಗುವ ಯಾವುದೇ ಗುಂಪಿನ ಜನತೆಯ ಆಟಗಳೇ ಜನಪದ ಕ್ರೀಡೆಗಳು ಭಾರತದಲ್ಲಿರುವ ಬಗೆ ಬಗೆಯ ಆಟಗಳು ಈಜಿಪ್ಟ್, ಬ್ಯಾಬಿಲೋನಿಯಾ ಮತ್ತು ಚೀನಾದಲ್ಲಿ ಸುಮಾರು ೫೦೦೦ವರ್ಷಗಳ ಹಿಂದೆ ಇದ್ದವೆಂಬುದಕ್ಕೆ ಹಲವಾರು ಪುರಾವೆಗಳಿವೆ. ಈಜಿಪ್ಟ್‌ನಲ್ಲಿರುವ ಮಲ್ಲಯುದ್ಧ, ಗೂಳಿ ಕಾಳಗ ಮತ್ತು ಅಂಗಸಾಧನೆ ಹಾಗೂ ಬ್ಯಾಬಿಲೋನಿಯದಲ್ಲಿರುವ ಮುಷ್ಠಿ ಯುದ್ಧ, ಕುಸ್ತಿ, ಬಿಲ್ಲುಗಾರಿಕೆ ಇವೆ. ಇವುಗಳ ಹಾಗೆ ಭಾರತವೂ ಕೂಡ ಕ್ರೀಡಾಸಕ್ತಿಯುಳ್ಳದ್ದು ಎಂಬುದರಲ್ಲಿ ಸಂಶಯವಿಲ್ಲ. ಸಿಂಧೂ ನಾಗರೀಕತೆಯಲ್ಲಿ ಕ್ರೀಡೆಗಳಿಗೆ ಮಹತ್ತರವಾದ ಸ್ಥಾನವಿತ್ತೆಂದು ಇತಿಹಾಸ ಮೂಲಗಳಿಂದ ತಿಳಿದುಬರುತ್ತದೆ. ಹರಪ್ಪ-ಮಹೆಂಜೋದಾರೋದಲ್ಲಿ ದೊರೆತ ಅವಶೇಷಗಳಲ್ಲಿಯೂ ಸಹಿತ ಪಗಡೆಯಾಟದ ದಾಳಗಳು ದೊರಕಿವೆ. ಇನ್ನೂ ವೇದ ಉಪನಿಷ್‌ತ್‌ನಲ್ಲಿ ಕುದುರೆ ಸವಾರಿ,

ದುರ್ಗುವಿದ್ಯೆ, ಓಟ, ಈಜು, ಮುಂತಾದ ಕ್ರೀಡೆಗಳ ಉಲ್ಲೇಖವಿದೆ. ಮಹಾಕಾವ್ಯಗಳಾದ ರಾಮಾಯಣದಲ್ಲಿ ಮುಷ್ಠಿಯುದ್ಧ ಮಲ್ಲಯುದ್ಧದ ಪ್ರಸ್ತಾಪವಿದ್ದರೆ, ಮಹಾಭಾರತದಲ್ಲಿ ದುಷ್ಯಂತನ ಮೃಗಾಯಾವಿಹಾರ, ಭೀಮ-ಜರಾಸಂಧರ, ಬೀಕರ ದ್ವಂದ್ವಯುದ್ಧ ಪಗಡೆಯಾಟದ ಬಗ್ಗೆ ಪ್ರಸ್ತಕವಿದೆ. ಜನಪದರು ಹೇಳುವಂತೆ ಪಗಡೆಯಾಡಿ ಪಾಂಡವರು ಕೆಟ್ಟರು ಎಂದು ಗಾದೆ ಮಾತಿನಲ್ಲಿ ಪಗಡೆ ಯಾಟದ ಪ್ರಮುಖ್ಯತೆಯನ್ನು ನೋಡಬಹುದು.

ಪ್ರಸ್ತುತ ಅಧ್ಯಯನದಲ್ಲಿ ಮರಿಯಮ್ಮನಹಳ್ಳಿ ಪರಿಸರದಲ್ಲಿರುವ ಕೆಲವು ಆಟಗಳನ್ನು ಕ್ಷೇತ್ರ ಕಾರ್ಯದ ಮೂಲಕ ಹಿಡಿದಿಡುವ ಕೆಲಸವನ್ನು ಮಾಡಿದ್ದೇನೆ. ಕ್ಷೇತ್ರ ಕಾರ್ಯದ ಮೂಲಕ ಸಂಗ್ರಹಿಸಿದ ಆಟಗಳಲ್ಲಿ ವರ್ಗೀಕರಿಸುವುದು ಕಷ್ಟದ ಕೆಲಸ ಆದರೂ ಹೊರಾಂಗಣದಾಟ ಮತ್ತು ಒಳಾಂಗಣದಾಟಗಳೆಂದು ವರ್ಗೀಕರಿಸಿದ್ದೇನೆ.

**ಒಳಾಂಗಣದ ಆಟಗಳು :**

ಹೆಸರೇ ಹೇಳುವಂತೆ ಮನೆಯೊಳಗೆ ಆಡುವಂತಹ ಆಟಗಳಿಗೆ ಒಳಾಂಗಣ ಆಟಗಳೆಂದು ಕರೆಯುತ್ತಾರೆ.

**ಕವಡೆಯಾಟ :**

ಇದಕ್ಕೆ ಪಗಡೆಯಾಟ, ಚೌಕಬಾರ, ಚಾವೆಯಾಟ ಎಂದು ಕರೆಯುತ್ತಾರೆ. ಈ ಆಟಕ್ಕೆ ನಾಲ್ಕು ಜನ ಅಥವಾ ಇಬ್ಬರು ಆಡಬಹುದು. ಇಪ್ಪತ್ತೈದು ಅಥವಾ ನಲವತ್ತೊಂಬತ್ತು ಮನೆಗಳಿರುತ್ತವೆ. ಪ್ರತಿ ಆಟಗಾರನೂ ಒಂದೊಂದು ಬಗೆಯ ನಾಲ್ಕು ಅಥವಾ ಎಂಟು ವಸ್ತಗಳನ್ನು ಕಾಯಿಗಳೆಂದು ಬಳಸುತ್ತಾರೆ. (ಕಡ್ಡಿ, ಬಳಪ, ಬಳೆಚೂರು) ಒಬ್ಬರ ಕಾಯಿಗಳಂತೆ ಇನ್ನೊಬ್ಬರದಿರಬಾರದು ಈ ಆಟ ಆಡಲು ನಾಲ್ಕರಿಂದ ಆರು ಕವಡೆ ಅಥವಾ ಕವಡೆ ಬದಲಿಗೆ ಹುಣಸೆ ಬೀಜವನ್ನು ಒಡೆದು ಉಪಯೋಗಿಸುವರು. ಇಲ್ಲಿ ನಾಲ್ಕು ಆಟಗಾರರಿಗೆ ನಾಲ್ಕು ಮನೆಗಳಿರುತ್ತವೆ. ಈ ಮನೆಗಳಿಗೆ ಕಟ್ಟೆ ಎಂದು ಕರೆಯುತ್ತಾರೆ, ೨೫ ರ ಮನೆಯ ಆಟದಲ್ಲಿ ಮತ್ತೆ ನಾಲ್ಕು ಸುರಕ್ಷಿತ ಮನೆಗಳು ಇರುತ್ತವೆ. ಪ್ರತಿಯೊಬ್ಬ ಆಟಗಾರನು ತಮ್ಮ ಕಟ್ಟೆಯಿಂದ ಆಟ ಪ್ರಾರಂಭಿಸುತ್ತಾನೆ ಮಧ್ಯ ಮನೆಗೆ ಹಣ್ಣು ಮನೆ ಎಂದು ಕರೆಯುತ್ತಾರೆ. ಕಾಯಿಗಳು ಕಟ್ಟೆಯಲ್ಲಿದ್ದರೆ, ಸುರಕ್ಷಿತ, ಅಲ್ಲಿ ಯಾರು ಸಾಯುವುದಿಲ್ಲ. ಸಾಮಾನ್ಯವಾಗಿ ಒಂದು ಕಾಯಿ ಇನ್ನೊಂದು ಕಾಯಿ ಹೊಡೆಯುತ್ತ ತಮ್ಮ ರಕ್ಷಣೆ ಮಾಡಿಕೊಳ್ಳುತ್ತ ಹಣ್ಣು ಮನೆಗೆ ಬರುತ್ತವೆ.

**ಗೋಣಿಕುಣಿ ಆಟ :**

ಇದಕ್ಕೆ ಚಿನ್ನೆ ಮಣೆ ಆಟ ಎಂದು ಕೂಡ ಕರೆಯುತ್ತಾರೆ. ಮರದಿಂದ ಮಾಡಿದ ಹದಿನಾಲ್ಕು ಕುಳಿಗಳಿರುತ್ತವೆ. ಈ ಆಟಕ್ಕೆ ಇಬ್ಬರು ಆಟಗಾರರಿರುವುದೇ ಹೆಚ್ಚು. ಇದಕ್ಕೆ ೭೦ಕಲ್ಲುಗಳು ಅಥವಾ ಹುಣಸೆ ಬೀಜದಿಂದ ಆಡುವುದೇ ಹೆಚ್ಚು. ಎಡಗಡೆಯಿಂದ ಕಾಯಿಗಳೆತ್ತಿ ಬಲಕ್ಕಿಡುತ್ತ ಹೋಗಬೇಕು

ಆಟಗಾರನು ಆಟ ಪ್ರಾರಂಭಿಸುವಾಗ ಪ್ರತಿ ಮನೆಯಲ್ಲೂ ಐದರಂತೆ ಕಾಯಿಗಳನ್ನು ಹಾಕುತ್ತ ಹೋಗಿ ತನ್ನ ಕಡೆಯ ಮನೆಯಿಂದ ಆಟ ಪ್ರಾರಂಭಿಸಬೇಕು.

**ಆಣೆಕಲ್ಲಾಟ :**

ಈ ಆಟಕ್ಕೆ ಇಬ್ಬರು ಸಾಕು, ೫ ಕಲ್ಲುಗಳು ಬೇಕು. ಮೊದಲು ಎಲ್ಲಾ ಕಲ್ಲುಗಳನ್ನು ನೆಲದ ಮೇಲೆ ಹಾಕಬೇಕು. ಅದರಲ್ಲಿ ಒಂದು ಕಲ್ಲನ್ನು ಬೇರೆ ಕಲ್ಲುಗಳಿಗೆ ತಾಕಿಸದಂತೆ ಒಂದು ಕಲ್ಲನ್ನು ತೆಗೆದುಕೊಂಡು ಮೇಲಕ್ಕೆ ತೂರಬೇಕು. ತೂರಿದ ಕಲ್ಲು ಕೆಳಗೆ ಬರುವುದರೊಳಗೆ ಒಂದೊಂದು ಕಲ್ಲನ್ನು ತೆಗೆದು ಬದಿಗಿರಿಸಬೇಕು. ಆಮೇಲೆ ಇದೇ ರೀತಿ ತೂರಿ ಆ ಕಲ್ಲು ಕೆಳಗೆ ಬರುವುದರೊಳಗೆ ಜೋಡಿ ಕಲ್ಲುಗಳನ್ನು ನಂತರ ಮೂರು, ಒಂದು ಕಲ್ಲನ್ನು ಮತ್ತು ಕೊನೆಗೆ ನಾಲ್ಕು ಕಲ್ಲುಗಳನ್ನು ಒಟ್ಟಿಗೆ ತೆಗೆದು ಕೊಳ್ಳಬೇಕು.

ಆಮೇಲೆ ನೆಲದ ಮೇಲೆ ಒಂದು ಗೆರೆ ಎಳೆದು ಎಲ್ಲ ಕಲ್ಲುಗಳನ್ನು ನೆಲದ ಮೇಲೆ ಚಿಮ್ಮಿ ಒಂದು ಹರಳು ತೆಗೆದುಕೊಂಡು ಗೆರೆಯ ಮೇಲೆ ಎಡಗೈದು ಹೆಬ್ಬೆರಳು ಮತ್ತು ತೋರು ಬೆರಳುಗಳನ್ನು ಗೋಪುರದಂತೆ ಮಾಡಿ ಮೇಲೆ ತೂರಿದ ಒಂದು ಕಲ್ಲು ತಿರುಗಿ ಬರುವುದರೊಳಗೆ ಒಂದೊಂದು ಕಲ್ಲಗಳನ್ನು ಬೆರಳುಗಳೊಳಗೆ ಕಳುಹಿಸಬೇಕು, ಪ್ರತಿ ಸಾರಿ ಹರಳು ಹಾರಿಸಬೇಕು. ಆಮೇಲೆ ಒಟ್ಟಿಗೆ ಆ ಎಲ್ಲಾ ನಾಲ್ಕು ಕಲ್ಲುಗಳನ್ನು ಒಂದು ಬಿಡದಂತೆ ತೆಗೆದುಕೊಳ್ಳಬೇಕು (ಇದಕ್ಕೆ ೯ನೇ ಆಟ ಎಂತಲೂ ಕೆಲವು ಕಡೆ ಕರೆಯುತ್ತಾರೆ). ಈ ಆಟವು ಮುಂದುವರಿದಂತೆ ಕಪ್ಪೆಯಾಟವಾಡುತ್ತಾರೆ. ಅಂದರೆ ಎಡಗೈಯನ್ನು ಕಪ್ಪೆಯ ರೂಪದಲ್ಲಿಡಬೇಕು. ಮತ್ತೆ ಮೊದಲಿನಂತೆ ಒಂದು ಕಾಯಿ ತೂರಿ ಮಿಕ್ಕ ಕಾಯಿಗಳನ್ನು ಕಪ್ಪೆ ಬಾಳೆಯೊಳಗೆ ದೂಡಬೇಕು. ಆ ಮೇಲೆ ಮೇಲಿನಂತೆ ಎಲ್ಲ ಹರಳುಗಳನ್ನು ಒಟ್ಟಿಗೆ ಹಿಡಿಯಬೇಕು. ಮೇಲೆ ಎಲ್ಲ ಕಾಯಿಗಳನ್ನು ತೂರಿ ಮುಂಗೈ ಮೇಲೆ ಹಾಕಿಕೊಂಡು ಒಟ್ಟಿಗೆ ಹಿಡಿಯಬೇಕು. ಇದಕ್ಕೆ ಹೂವಾಟ ಎಂದು ಕರೆಯುತ್ತಾರೆ.

**ಅತ್ತಿಕಟ್ಟಿಗೆ ಬಿತ್ತಿಕಟ್ಟಿಗೆ ಆಟ :**

ಈ ಆಟಕ್ಕೆ ಎಷ್ಟು ಮಕ್ಕಳಾದರೂ ನೆಡೆಯುತ್ತದೆ, ಎಲ್ಲರೂ ಎರಡೂ ಅಂಗೈಯನ್ನು ನೆಲದ ಮೇಲಿಟ್ಟುಕುಳಿತುಕೊಳ್ಳಬೇಕು. ಅವರಲ್ಲಿ ಒಬ್ಬರು ಪ್ರತಿಯೊಬ್ಬರು ಮುಂಗೈ ಮೇಲೆ ಬೆರಳಿನಿಂದ

ಉ:– ಹೊಲಕ್ಕೊದೆ

ಪ್ರಶ್ನೆ:– ಹೊಲ ಏನು ಕೊಡ್ತು?

ಉ:– ಹೂವ ಕೊಡ್ತು

ಪ್ರ:– ಹೂವವನ್ನು ಏನು ಮಾಡ್ತಿ?

ಉ:–ದೇವರಿಗೆ ಏರಿಸಿದೆ

ಪ್ರ:- ದೇವರೇನು ಕೊಟ್ಟ?

ಉ:- ವರ ಕೊಟ್ಟ

ಎಂದು ಪ್ರತಿಯೊಬ್ಬರೂ ಸಂವಾದದ ಮೂಲಕ ಆಟ ಮುಗಿಸುವರು.

**ರಾಜ, ರಾಣಿ, ಮಂತ್ರಿ, ಪೋಲೀಸ್, ಕಳ್ಳನ ಆಟ :**

ಐದು ಕಾಗದ ತುಂಡುಗಳ ಮೇಲೆ ರಾಜ, ರಾಣಿ, ಮಂತ್ರಿ, ಪೋಲಿಸ್, ಕಳ್ಳ ಎಂದು ಬರೆದು ಕೆಳಗಡೆ ರಾಜನ ಚೀಟಿಗೆ ೧೦೦೦, ರಾಣಿಯ ಚೀಟಿ ೮೦೦, ಮಂತ್ರಿಯ ಚೀಟಿಗೆ ೬೦೦, ಪೋಲಿಸನ ಚೀಟಿಗೆ ೪೦೦, ಕಳ್ಳನ ಚೀಟಿಗೆ ೨೦೦ರಂತೆ ಬರೆದು ಮಡಿಚಿಡಬೇಕು. ಐದು ಜನರಿರುವ ಈ ಆಟದಲ್ಲಿ ಚೀಟಿಗಳನ್ನು ತೂರಬೇಕು. ಅವುಗಳನ್ನು ಪ್ರತಿಯೊಬ್ಬರು ಒಂದೊಂದು ಎತ್ತಿಕೊಳ್ಳಬೇಕು. ಅದರಲ್ಲಿ ಬರೆದ ಹೆಸರುಗಳನ್ನು ಓದಬೇಕು.

ಮುಂದೆ ರಾಜ ಎಂದು ಬರೆದ ಚೀಟಿ ಬಂದವನು ರಾಣಿಯನ್ನು ಹುಡಕಬೇಕು. ರಾಣಿಯು ಮಂತ್ರಿಯನ್ನು, ಮಂತ್ರಿಯು ಪೋಲಿಸನನ್ನು, ಪೋಲಿಸ ಕಳ್ಳನನ್ನು ಹುಡುಕ ಬೇಕು. ಹುಡುಕುವಾಗ ಅವರಿಗೆ ಯಾರು ರಾಜ, ರಾಣಿ ಎಂದು ತಿಳಿದಿರುವುದಿಲ್ಲ. ಸಂಶಯದ ಮೇಲೆ ಹುಡುಕಬೇಕು ಹುಡುಕುವಾಗ ಅವರು ತಪ್ಪಿದರೆ, ಅಂದರೆ ರಾಜನು ರಾಣಿ ಎಂದು ತಿಳಿದು ಕಳ್ಳನ ಚೀಟಿ ಬಂದವನನ್ನ ರಾಣಿ ಎಂದರೆ ಆಗ ಅವರು ಚೀಟಿಗಳ ವಿನಿಮಯ ಮಾಡಿಕೊಂಡು, ಕಳ್ಳನ ಚೀಟಿ ಬಂದವನು ರಾಜನಾಗಿ ಆತನು ರಾಣಿಯನ್ನು ಹುಡುಕಲು ಪ್ರಯತ್ನಿಸುತ್ತಾನೆ. ಹೀಗೆ ಒಂದು ಸುತ್ತು ಕಳ್ಳನನ್ನು ಹುಡುಕಿದ ನಂತರ ಅವರಿಗೆ ಆ ಚೀಟಿಗಳನ್ನು ಬರೆದಿರುವ ಅಂಕಗಳನ್ನು ಕೂಡಿಸಿ ಹೆಚ್ಚಿಗೆ ಬಂದವರಿಗೆ ರಾಜ, ನಂತರ ರಾಣಿ, ಮಂತ್ರಿ, ಪೋಲಿಸ್, ಕಳ್ಳ ಎಂದು ಆಟ ಮುಗಿಸುವರು.

**ಹೊರಾಂಗಣದ ಆಟಗಳು :**

ಹೆಸರೇ ಹೇಳುವಂತೆ ಹೊರಗಡೆಯಾಡುವಂತಹ ಆಟವಾಗಿದೆ. ನಮಗೆ ಸಾಕಷ್ಟು ಸಂಖ್ಯೆಯಲ್ಲಿ ಈ ಹೊರಾಂಗಣ ಆಟಗಳು ಸಿಗುತ್ತವೆ. ಕೆಲವು ಆಟಗಳನ್ನು ವಿವರಿಸಿ ಇನ್ನೂ ಕೆಲವು ಆಟಗಳ ಹೆಸರುಗಳನ್ನು ಹೇಳಲಾಗಿದೆ.

**ಕಣ್ಣು ಮುಚ್ಚಾಟ :**

ಇಲ್ಲಿ ಒಬ್ಬ ನಾಯಕ ಅವನು ಒಬ್ಬನ ಕಣ್ಣನ್ನು ಗಟ್ಟಿಯಾಗಿ ಮುಚ್ಚಿ ಅವನ ಮುಂಗೈ ಹಿಡಿದು ಮುಂದೆ ನಿಂತು ಉಳಿದ ಆಟಗಾರರಲ್ಲಿ ಒಬ್ಬರನ್ನು ತೋರಿಸಿ 'ಅವರು ಬಿಟ್ಟು, ಇವರು ಬಿಟ್ಟು ಇವರ್ಯಾರು' ಎಂದು ಕೇಳುತ್ತಾನೆ. ಕಣ್ಣು ಮುಚ್ಚಿದ ಕಾರಣ ಆ ಹುಡುಗನಿಗೆ ಸರಿಯಾಗಿ ಅವನ ಹೆಸರು ಹೇಳವುದಕ್ಕೆ ಆಗದು, ನಂತರ ಎಲ್ಲರೂ ಅಡಗಿಕೊಂಡ ಮೇಲೆ ತಾವು ಅಡಗಿ ಕೊಂಡುದರ ಸಂಕೇತವೆಂದು 'ಕೊ' ಹಾಕುವರು. ಆಗ ನಾಯಕ

"ಕಣ್ಣು ಮುಚ್ಚೆ ಕಾಡೇ ಗೂಡೆ
ಮುದ್ದಿನ ಗುಬ್ಬಿ ಹಾರಿ ಹೋಯ್ತು
ನಮ್ಮೆಯ ಹಕ್ಕಿ ನಿಮ್ಮಯ ಹಕ್ಕಿ
ಬಿಟ್ಟೆ ಬಿಟ್ಟೆ ಕಟ್ಟಿ ಮನೆಹಾಳಾಯ್ತು"

ಎಂದು ಹಾಡುತ್ತ ಕಟ್ಟಿದ ಕಣ್ಣು ಬಿಚ್ಚುವನು. ಆಗ ಅವನು ಆಡಗಿ ಕೊಂಡವರನ್ನು ಹಿಡಿಯಲು ಪ್ರಯತ್ನಿಸುವನು. ಮೊದಲು ಮುಟ್ಟಿಸಿಕೊಂಡವರು ಮುಂದಿನ ಆಟದಲ್ಲಿ ಕಣ್ಣು ಕಟ್ಟಿಸಿಕೊಳ್ಳಬೇಕು.

**ಲಗೋರಿಯಾಟ :**

ಈ ಆಟಕ್ಕೆ ಎಷ್ಟು ಜನರಾದರೂ ನೆಡೆಯುತ್ತದೆ. ಆ ಜನರನ್ನು ಎರಡು ಗುಂಪು ಮಾಡಿಕೊಳ್ಳುವರು. ಹತ್ತಾರು ಚಪ್ಪಟೆಯಾದ ಕಲ್ಲುಗಳನ್ನು ತೆಗೆದುಕೊಳ್ಳಬೇಕು. ಅವುಗಳನ್ನೆಲ್ಲ ಗುರುತು ಪಡಿಸಿದ ಸ್ಥಳದಲ್ಲಿ ಕಲ್ಲುಗಳನ್ನು ಒಂದರ ಮೇಲೊಂದರಂತೆ ಇಡಬೇಕು. ಕಲ್ಲುಗಳಿಟ್ಟ ಸ್ಥಳದಿಂದ ಒಂದು ಬದಿಗೆ ಸ್ವಲ್ಪದೂರದಲ್ಲಿ ಒಂದು ಗುಂಪಿನವರು ಇನ್ನೊಂದು ಬದಿಗೆ ಇನ್ನೊಂದು ಗುಂಪಿನವರು ನಿಲ್ಲುತ್ತಾರೆ. ಒಂದು ಗುಂಪಿನ ಆಟಗಾರರು ಒಬ್ಬರೇ ಚೆಂಡೆಸೆದು ಕಲ್ಲುಗಳನ್ನು ಬೀಳಿಸಲು ಪ್ರಯತ್ನಿಸುತ್ತಾರೆ. ಒಂದು ವೇಳೆ ಚೆಂಡಿನ ಹೊಡೆತಕ್ಕೆ ಕಲ್ಲುಗಳು ಕೆಳಗೆ ಬಿದ್ದ ಕೂಡಲೆ ಆ ಗುಂಪಿನವರೆಲ್ಲ ಓಡುವರು, ಕಲ್ಲು ಉದುರಿಸಿದರಲ್ಲಿ ಒಬ್ಬರು ಓಡಿ ಬಂದು ಕಲ್ಲಿನ್ನು ಮತ್ತೊಮ್ಮೆ ಸರಿಯಾಗಿಟ್ಟರೆ ಅವರು ಗೆದ್ದಂತೆ, ಕಲ್ಲು ಜೋಡಿಸುವ ಮೊದಲೇ ವಿರುದ್ಧ ಪಕ್ಷದವರು ಮುಟ್ಟಿದರೆ ಮುಟ್ಟಿಸಿಕೊಂಡವರ ಮೇಲೆ ಲಗೋರಿಯಾದಂತೆ.

**ಉಪ್ಪಿನಾಟ :**

ಈ ಕ್ರೀಡೆಯಲ್ಲಿ ಐದು ಹುಡುಗರು ಬೇಕು. ಅಂಗಳದಲ್ಲಿ ದೊಡ್ಡದಾದ ಚೌಕಾಕಾರದ ಗೆರೆ ಎಳೆಯಬೇಕು. ನಾಲ್ಕು ಮೂಲೆಗಳಲ್ಲಿ ನಾಲ್ಕು ಜನ ಮುಂಗೈಯನ್ನು ಹಿಡಿದುಕೊಂಡು ಉಪ್ಪು ಮಾರಲು ಬರುತ್ತಾಳೆ(ನೆ). ಆಗ ಅವಳು ಒಬ್ಬೊಬ್ಬರನ್ನು "ಉಪ್ಪಮ್ಮ ಉಪ್ಪು ಉಪ್ಪು ಬೇಕೆನಮ್ಮ" ಎಂದು ಕೇಳುತ್ತಾರೆ. ಅವಳನ್ನು ಆ ಮನೆಗೆ ಈ ಮನೆಗೆ ಕಳುಹಿಸುತ್ತಾ ತಾವು ಒಬ್ಬೊಬ್ಬರು ತಮ್ಮ ಮೂಲೆಯಿಂದ ಇನ್ನೊಂದು ಮೂಲೆಗೆ ಸ್ಥಳ ಬದಲಾಯಿಸಿಕೊಳ್ಳುತ್ತಾರೆ, ಅವರು ಸ್ಥಳ ಬದಲಾಯಿಸುವುದನ್ನು ಕಂಡ ಚೋರಾದ ಹುಡುಗಿ/ಹುಡುಗ ತೆರವು ಆದ ಮೂಲೆಯನ್ನು ಕಂಡು ಇನ್ನೊಬ್ಬರನ್ನು ಬರುವುದರೊಳಗೆ ತಾನು ನಿಂತರೆ ಮೂಲೆ ಸಿಗದೆ ಇರುವವನು ಮುಂದಿನ ಆಟಕ್ಕೆ ಚೋರನಾಗುತ್ತಾನೆ. ಬಹಳ ಹೊತ್ತು ಈ ಆಟ ಆಡಬಹುದು.

**ಕತ್ತೆಯಾಟ :**

ಅಂಗಳದಲ್ಲಿ ಸುಮಾರು ದೊಡ್ಡದಾದ ಚೌಕಾಕಾರದ ನಾಲ್ಕು ಮನೆಗಳನ್ನು ಮಧ್ಯದಲ್ಲಿ ಸಣ್ಣದಾದ ವರ್ತುಳವನ್ನೆಳೆದು ಅದರಲ್ಲಿ ನಾಲ್ಕು ಸಣ್ಣದಾದ ಕಲ್ಲುಗಳನ್ನಿಡಬೇಕು. ಈ ಆಟಕ್ಕೆ ಐದು

ಜನ ಆಟಗಾರರು ಬೇಕು. ನಾಲ್ಕು ಜನ ಆಟಗಾರರು ನಾಲ್ಕು ಚೌಕದ ಮನೆಗಳಲ್ಲಿ ನಿಲ್ಲುವರು. ಚೋರಾದವರು ಗೆರೆ ಎಳೆದು ಮಧ್ಯದ ಮಾರ್ಗದಿಂದ ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣವಾಗಿ ಓಡಾಡಬೇಕು.

ಆಟ ಪ್ರಾರಂಭವಾಧೊಡನೆ ಕಳ್ಳನು ಎರಡು ಮಾರ್ಗವಾಗಿ ನೆಡೆಯತೊಡಗಿದರೆ ಆತ ದೂರ ಹೋಗುತ್ತಲೇ ಸಮೀಪದ ಆಟಗಾರರು ಕಲ್ಲಿನ್ನೆತ್ತಲು ಪ್ರಯತ್ನಿಸುವರು. ಆಗ ಚೋರನು ಓಡಿ ಬಂದು ಅವರನ್ನು ಮುಟ್ಟಬೇಕು. ಮುಟ್ಟಿಸಿಕೊಂಡವನು ಮುಂದಿನ ಆಟಕ್ಕೆ ಚೋರನಾಗುವನು ಚೋರನು ಮಾತ್ರ ಮಾರ್ಗ ಬಿಟ್ಟು ಆಚೆ ಈಚೆ ಸರಿಯುವುದಿಲ್ಲ. ಚೋರನು ಯಾರನ್ನು ಮುಟ್ಟಲು ಶಕ್ಯವಾಗದೆ ಇದ್ರೆ ಅವನೇ ಕೊನೆಯವರೆಗೆ ಕಳ್ಳನಾಗುತ್ತಾನೆ.

**ರತ್ತೋ ರತ್ತೋ ರಾಯನ ಮಗಳೆ :**

ಈ ಆಟದಲ್ಲಿ ಇಬ್ಬರು ನಾಯಕರಿರುತ್ತಾರೆ. ಎರಡು ಪಕ್ಷದ ಈ ಇಬ್ಬರು ನಾಯಕರು ಒಂದೊಂದು ತಮಗೆ ಬೇಕಾದ ಹೂಗಳ ಹಣ್ಣಿನ ಹೆಸರುಗಳನ್ನು ಇಟ್ಟುಕೊಂಡಿರುತ್ತಾರೆ. ಆ ಇಬ್ಬರು ನಾಯಕರು ಎರಡು ಕೈ ಮೇಲೆತ್ತಿ ಗೋಪುರದ ತರಹ ಹಿಡಿದುಕೊಂಡಿರುತ್ತಾರೆ. ಆಟದಲ್ಲಿರುವ ಉಳಿದ ಹುಡುಗರು ಗೋಪುರದ ಕೆಳಗಿನಿಂದ ಅವರಿಬ್ಬರನ್ನು ಸುತ್ತುವರಿಯುತ್ತಿರುತ್ತಾರೆ. ಆಗ ಇಬ್ಬರು ನಾಯಕರು

"ರತ್ತೋ ರತ್ತೋ ರಾಯನ ಮಗಳೇ

ಬಿತ್ತೋ ಬಿತ್ತೋ ಭೀಮನ ಮಗಳೇ

' ಹದಿನಾರು ಕೊಂಬೆ ಕಾಸಲಾರೆ

ಉಟ್ಟಟ್ಟ ಗುಬ್ಬಿ ಚೂಟ ಗುಬ್ಬಿ" ಎಂದು ಹಾಡುವರು. ಚೂಟಗುಬ್ಬಿ ಎಂದು ಅಂದಾಗ ಸುತ್ತುವರಿಯವರು. ಮಕ್ಕಳಲ್ಲಿ ಗಟ್ಟಿಯಾಗಿ ಹಿಡಿದುಕೊಂಡು ತಾವಿಟ್ಟುಕೊಂಡ ಹೆಸರುಗಳಲ್ಲಿ ಯಾರು ಬೇಕು ಎಂದು ಕೇಳುತ್ತಾರೆ. ಆ ಹುಡುಗರು ಯಾರ ಹೆಸರು ಹೇಳುತ್ತಾರೋ ಅವರು ಆ ಪಕ್ಷಕ್ಕೆ ಸೇರಿದವರೆಂದು ಪರಿಗಣಿಸಿ, ಕೊನೆಗೆ ಎರಡು ಪಕ್ಷದವರು ನಾಯಕರನ್ನು ಮುಂದೆ ಸೇರಿದವರೆಂದು ಪರಿಗಣಿಸಿ, ಕೊನೆಗೆ ಎರಡುಪಕ್ಷದವರು ನಾಯಕರನ್ನು ಮುಂದೆ ಮಾಡಿ ಸೊಂಟದಿಂದ ಸೊಂಟಕ್ಕೆ ಕೈಸುತ್ತು ಹಾಕಿ ಒಬ್ಬರಿಗೊಬ್ಬರು ಎದುರು-ಬದುರಾಗಿ ನಿಂತು ಆ ಪಕ್ಷದವರು, ಈ ಪಕ್ಷದವರು ಜಗ್ಗುತ್ತಾರೆ. ಯಾರ ಪಕ್ಷದಲ್ಲಿ ಶಕ್ತಿವಂತರಿರುವದಿಲ್ಲವೋ ಅವರಿಗೆ ಸೋಲು.

**ಗಣಪತಿ ಬಪ್ಪಾಮೋರೆಯಾಟ :**

ಈ ಆಟಕ್ಕೆ ಮೂವರು ಆಟಗಾರರು ಬೇಕು ಇವರಲ್ಲಿ ಇಬ್ಬರು ಎದುರುಬದುರಾಗಿ ನಿಂತುಕೊಳ್ಳುವರು, ಇವರಿಬ್ಬರು ತಮ್ಮ ಎಡತೋಳುಗಳನ್ನು ಮುಂದೆ ಮಾಡಿ ಬಲ ಅಂಗೈಯನ್ನು

ಅವ್ ಎಂದೆನ್ನುತ ತಮ್ಮ ತೆರೆದ ಬಾಯಿಯ ಮೇಲೆ ಇಟ್ಟು 'ಅಪ್' ಎನ್ನುತ್ತಾ ಆ ಕೈಯಿಂದ ತಮ್ಮ ಎಡತೋಳುಗಳನ್ನು ಹಿಡಿದುಕೊಳ್ಳುವರು. ಅನಂತರ ಎಡಗೈಯಿಂದ ಪರಸ್ಪರ ಕೈಗಳನ್ನು ಗಟ್ಟಿಯಾಗಿ ಹಿಡಿದುಕೊಳ್ಳುವರು. ಆಗ ನಡುವೆ ಒಂದು ಚೌಕಾಕಾರದ ಜಾಗವಾಗುತ್ತದೆ. ಉಳಿದಿರುವ ಇನ್ನೊಬ್ಬ ಆಟಗಾರ ಚೌಕದ ಆಚೆ ಈಚೆ ನಿಂತವರ ತಲೆ ಹಿಡಿದುಕೊಂಡು ಕುಳಿತುಕೊಳ್ಳುವನು ಆಗ ಅವನನ್ನು ಗಣಪತಿ ಬಪ್ಪಾ ಮೋರೆಯಾ ಎನ್ನುತ್ತ ಆಚೆ ಈಚೆ ಓಡಾಡುತ್ತಾರೆ. ಈ ಆಟಕ್ಕೆ ಗಣಪತಿಯಾಗುವ ಹುಡುಗ ಚಿಕ್ಕವನಾಗಿರಬೇಕು.

**ಬೈಸಿಕಲ್ ಸ್ಪರ್ಧೆ :**

ಈ ಕ್ರೀಡೆಯನ್ನು ದೊಡ್ಡವರು ಆಡುತ್ತಾರೆ. ಸ್ವಾತಂತ್ರೋತ್ಸವ ಮತ್ತು ಗಣೇಶನ ಹಬ್ಬದ ಸಂದರ್ಭದಲ್ಲಿ ಸ್ಪರ್ಧೆ ಏರ್ಪಡಿಸುತ್ತಾರೆ. ಹಗರಿಬೊಮ್ಮನಹಳ್ಳಿಯಿಂದ ಮರಿಯಮ್ಮನ ಹಳ್ಳಿಯವರೆಗೆ ಬರುವಂತಹ ಸ್ಪರ್ಧೆ ಏರ್ಪಡಿಸುತ್ತಾರೆ. ಮೊದಲು ಬಂದವರಿಗೆ ಬಹುಮಾನ ನೀಡುತ್ತಾರೆ.

ಈ ಎಲ್ಲಾ ಆಟಗಳನ್ನು ಗಮನಿಸಿದಾಗ ಜನಪದ ಆಟಗಳು ತನ್ನದೆ ಆದ ವಿಶಿಷ್ಟ ಲಕ್ಷಣಗಳನ್ನೊಳಗೊಂಡಿದೆ ಎನ್ನಬಹುದು. ಈ ಕ್ರೀಡೆಗಳಲ್ಲಿ ಹೆಚ್ಚಾಗಿ ಸಂಜ್ಞೆ, ಸಂಕೇತ ದುಷ್ಟ-ಶಕ್ತಿಗಳು ಪಾಪ, ಪುಣ್ಯ ಸಹಿಸುವಂಹತ ಪರಿಕಲ್ಪನೆಗಳು ಆಟಗಳ ತುಂಬಾ ತುಂಬಿಕೊಂಡು ಇನ್ನೂ ಕೆಲವು ಆಟಗಳಲ್ಲಿ ಗಾಂಭಿರ್ಯತೆಯೂ ತುಂಬಿ ತುಳುಕುತ್ತದೆ ಉದಾ:-ಪಗಡೆಯಾಟ, ಕಬ್ಬಡಿ. ಕುಸ್ತಿ ಆಟ ಮುಂತಾದವುಗಳು.

ಜನಪದ ಆಟಗಲ್ಲಿ ಹೆಚ್ಚಾಗಿ ಹುಟ್ಟು-ಸಾವಿನ ಪರಿಕಲ್ಪನೆಯನ್ನು ಕಾಣುತ್ತೇವೆ. ಅಂದರೆ ಹುಟ್ಟು ಸಂತೋಷದ ಸಂಕೇತವಾದರೆ, ಸಾವು ಭಯಾನಕವಾಗಿರುತ್ತದೆ. ಅಂದರೆ ಯಾವುದೇ ಒಂದು ಆಟವಾಡುವಾಗ ಭಯಾನಕವಾಗಿರುತ್ತದೆ. ಅಂದರೆ ಯಾವುದೇ ಒಂದು ಆಟವಾಡುವಾಗ ಎದುರಾಳಿ ಈಗ ನಾನು ನಿನ್ನ ಕಾಯಿನ್ನ ಕಡಿತೀನಿ. ಸಾಯಿಸ್ತೀನಿ ಎಂದರೆ ಆ ಸಾವಿನಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುವ ರೀತಿ ಕಾಣಬಹುದು. ಕೊನೆಗೆ ಎದುರಾಳಿಯಿಂದ ಸೋತು ತನ್ನ ಮನೆಯನ್ನು ಸೇರಿ ಮತ್ತೆ ಗೆಲ್ಲಲು ಪ್ರಯತ್ನಿಸುವ ರೀತಿ ಕಾಣಬಹುದು. ಕೊನೆಗೆ ಕಾಯಿ ಎದುರಾಳಿಯಿಂದ ತಪ್ಪಿಸಿಕೊಂಡು ಹಣ್ಣಿನ ಮನೆಗೆ ಸೇರಿದರೆ ಆ ಕಾಯಿಗಳಿಗೆ ಮುಕ್ತಿ ಸಿಕ್ಕಂತೆ ಅಂದರೆ ಈ ಆಟಗಳಲ್ಲಿರುವ ಮರ್ಮ ಎಂದರೆ ಜನಪದರು ತಮ್ಮ ಬದುಕಿನ ಹೋರಾಟದ ಹುಟ್ಟು, ಸಾವು. ಮುಕ್ತಿ ಇವುಗಳನ್ನು ಈ ಕ್ರೀಡೆಗಳಲ್ಲಿ ಚಿತ್ರಿಸಿದ್ದಾರೆ.

ಇಂತಹ ಹಲವಾರು ಆಟಗಳನ್ನು ನಮ್ಮ ಜನಪದರಲ್ಲಿ ಕಾಣಬಹುದು. ಇಲ್ಲಿ ಕಂಡುಬರುವ ಎಲ್ಲ ಆಟಗಳಿಗೆ ಒಂದು ಸೈದ್ಧಾಂತಿಕ ಚೌಕಟ್ಟು ಇದೆ ಎನ್ನಬಹುದು. ಏಕೆಂದರೆ ತಾತ್ವಿಕ ವಿಚಾರ ಧಾರೆಗಳಿಂದ ತುಂಬಿದಂತಹ ನಮ್ಮ ಜನಪದರ ಬದುಕು ಒಂದು ನಾಟಕರಂಗ ನಾವಿಲ್ಲಿ ಪಾತ್ರಧಾರಿಗಳು ಮೇಲೆ ಆಟ ಆಡಿಸಿದಂತೆ ಆಡುತ್ತೇವೆ ಎಂದು ಹೇಳುತ್ತಾರೆ. ಈ ತಾತ್ವಿಕತೆಯ ಹಿನ್ನಲೆಯಲ್ಲಿ ಸಹಿತ ಜನಪದ ಆಟಗಳನ್ನು ಕಾಣಬಹುದು. ಅವುಗಳಲ್ಲಿ ಅಡಗಿರುವ ಹುಟ್ಟು,

ಸಾವು, ಮುಕ್ತಿ ಈ ಎಲ್ಲವು ಕರ್ಮ ಸಿದ್ಧಾಂತದ ಹಿನ್ನಲೆಯಲ್ಲಿಯೇ ಹುದುಗಿರುವಂತಹವು. ಅಂದರೆ ಕೆಲವೊಂದು ಆಟಗಳಲ್ಲಿ ಆಟಗಾರ ತಾನೇ ಪಾತ್ರಧಾರಿಯಾಗಿ ಆಡುವುದು ಒಂದು ಬಗೆಯಾದರೆ, ಇನ್ನು ಕೆಲವು ಆಟಗಳಲ್ಲಿ ತಾನು ಕಾಯಿಗಳನ್ನು ಪಾತ್ರಧಾರಿಯನ್ನಾಗಿ ಮಾಡಿಕೊಂಡು ಆಟ ಆಡಿಸುತ್ತಾ ತಾನು ದೇವರು ಆಗುತ್ತಾನೆ ಎನ್ನುವ ವಿಚಾರ ತಲೆದೋರುತ್ತದೆ.

ಹಾಗೆಯೇ ಈ ಹಿಂದೆ ತಿಳಿಸುವ ಆಟಗಳಲ್ಲಿ ಹೆಣ್ಣು ಮಕ್ಕಳು ಆಡುವ ಆಟಗಳಾದ ಕುಂಟೆಬಿಲ್ಲೆ ಆಟವು ನವಗ್ರಹಗಳನ್ನು ಸಂಕೇತಿಸುತ್ತದೆಂದು ಹೇಳುತ್ತಾರೆ. ಇವುಗಳಲ್ಲಿರುವ ಗೋಲಾಕಾರದ ಒಂಬತ್ತು ಮನೆಗಳಿಗೆ ಒಂದೊಂದು ವಿಶಿಷ್ಟವಾದ ಹೆಸರಿದೆ. ಜನಪದ ಆಟಗಳಲ್ಲಿ ಕಂಡುಬರುವ ನಕ್ಷೆಗಳು, ಭೂಗೋಳ, ಖಗೋಳದ ವಿಶಿಷ್ಟತೆಯ ಅಂಶಗಳನ್ನು ಪೌರಾಣಿಕ ವಸ್ತುವಿನೊಂದಿಗೆ, ದೈವದೊಂದಿಗೆ ಪ್ರತಿನಿಧಿಸುತ್ತವೆ. ಕ್ರೀಡಾ-ವಿನೋದಗಳಲ್ಲಿ ಈ ಎಲ್ಲ ಜನಪದ ಆಟಗಳು ಒಂದು ಸಮಾಜದ ಸಂಸ್ಕೃತಿಯ ನಿಲುವುಗನ್ನಡಿ ಎಂದೆನ್ನಬಹುದು. ಪಶುಪಾಲನ ವೃತ್ತಿಯಾನಾಗಿ ಮಾಡಿಕೊಂಡಿದ್ದ ಮನುಷ್ಯ ಪ್ರಾಣಿಗಳೊಂದಿಗೆ ನಡೆಸಿದ ಸನ್ನಾಹ ಮತ್ತು ಸಂವಹನ ಎರಡನ್ನು ಬೇಟೆಯಾಟ, ಗಿಡಮಂಗನಾಟ, ಕಪ್ಪೆಯಾಟ, ಗುರಿಸಾಧನೆಯ ಆಟಗಳು, ಕೋಳಿ, ಟಗರು ಮತ್ತು ಗೂಳಿ ಕಾಳಗ ಇಂತಹವುಗಳೆಲ್ಲ ಕಂಡುಬರುತ್ತವೆ. ಹಲವಾರು ವಿದ್ವಾಂಸರುಗಳ ಅಭಿಪ್ರಾಯದಂತೆ ಶಿಲಾಯುಗದಲ್ಲಿ ತಂಡಗಳ ಮಧ್ಯೆ ಘರ್ಷಣೆ ನಡೆಯುತ್ತಿದ್ದು, ಅಂತಹ ಸಮಯದಲ್ಲಿ "ಯುಕ್ತಿ ಆಟಗಳು" ಬೆಳಕಿಗೆ ಬಂದಿವೆ ಎನ್ನುವ ಅಭಿಪ್ರಾಯ ಸಮಂಜಸವಾದದ್ದು ಎನ್ನಬಹುದು. ಆದರೆ ಮುಂದೆ ಮಾನವರಲ್ಲಿ ಕಾಲಕ್ರಮೇಣ ಹೋರಾಟದ ಮತ್ತು ಯುದ್ಧದ ಹಂತಗಳು ಆಳ್ವಿಕೆಯ ಹಂತಗಳು ಯಾವ ರೀತಿ ಬದಲಾದವೋ ಅವುಗಳನ್ನೆ ಅನುಕರಿಸಿ ಆಡುವ ಆಟಗಳು ಹಂತ ಹಂತವಾಗಿ ಬದಲಾಗುತ್ತ ಬಂದಿವೆ ಆಯಗಾರರಾಟ, ಕಳ್ಳ ಪೋಲಿಸರಾಟ ಇವು ಇಂದಿನ ವ್ಯವಸ್ಥೆಯನ್ನೆ ಸೂಚಿಸುತ್ತವೆ.

ನಮ್ಮ ಜನಪದರು ತುಂಬಾ ಬುದ್ಧಿವಂತರೆನ್ನುವುದಕ್ಕೆ ಸಂಶಯವಿಲ್ಲ ಏಕೆಂದರೆ. ಅವರ ಹೆಚ್ಚಿನ ಆಟಗಳಲ್ಲಿ ಬದುಕಿನ ನೀತಿ ಒಂದಾದರೆ, ಮತ್ತೊಂದೆಡೆ ವ್ಯವಹಾರಜ್ಞಾನ ಬೆಳಸುವುದಕ್ಕೆ ಪೂರಕವಾದವಾಗಿದ್ದವು. ಉದಾ:- ಕೈ ಬೆರಳು ಎಣಿಸಿ ಆಡುವ ಆಟ. ಆಯಗಾರರ ಆಟ, ಸರಪಣಿ ಆಟ, ಜೋಡುಕಟ್ಟೆ ಆಟ ಮೊದಲಾದವು. ಇಲ್ಲಿನ ಕೆಲವು ಆಟಗಳಲ್ಲಿ ತಾಳ್ಮೆಯನ್ನು ಹೊರ ಸೂಸುತ್ತವೆ. ಇನ್ನೂ ಕೆಲವು ವ್ಯವಹಾರ ಜ್ಞಾನವನ್ನು ಸೂಚಿಸುತ್ತವೆ. ನಾವು ಇಂದು ಸಹಿತ ಈ ವ್ಯವಹಾರಜ್ಞಾನ ತುಂಬಿದಂತಹ ಹಲವಾರು ಆಟಗಳನ್ನು ಶಾಲೆಗಳಲ್ಲಿ ಮಕ್ಕಳಲ್ಲಿ ಕಾಣಬಹುದು. ಆಟದ ಮೂಲಕ ಪಾಠ ಎನ್ನುವ ರೀತಿಯಲ್ಲಿ ಮಕ್ಕಳಿಗೆ ಕೂಡಿಸುವ, ಕಳೆಯುವ ಲೆಕ್ಕಗಳನ್ನು ಆಟಗಳಿಂದ ಹಾಡುಗಳಿಂದ ಮಕ್ಕಳ ಮನಮುಟ್ಟುವಂತೆ ಶಾಲೆಗಳಲ್ಲಿ ಪಾಠ ನಡೆಯುತ್ತವೆ. ಇನ್ನೂ ಕೆಲವು ಆಟಗಳು ಶಕ್ತಿ ಪ್ರದರ್ಶನ ಮತ್ತು ಯುಕ್ತಿ ಪ್ರದರ್ಶನದ ಆಟಗಳಾಗಿ ಹಿಂದೆಯೂ ಇಂದಿಗೂ ಕಂಡು ಬರುತ್ತದೆ. ಉದಾ:-ಕುಸ್ತಿಯಾಟ, ಭಾರ ಎತ್ತುವಿಕೆ, ನೀರಿನಲ್ಲಿ ಮುಟ್ಟಾಟ ಮುಂತಾದವುಗಳಿವೆ.

ಆದರೆ ಈ ಎಲ್ಲಾ ಆಟಗಳಿಗೆ ಪ್ರಾದೇಶಿಕಭಿನ್ನತೆಯಿದೆ. ಈ ಜನಪದ ಆಟಗಳು ಜನರನ್ನು ದೈಹಿಕವಾಗಿ ಮತ್ತು ಮಾನಸಿಕವಾಗಿ ಸದೃಡರನ್ನಾಗಿ ಮಾಡುವುದು. ಆಟಆಡುವರು ಪೂರ್ವ ಮನೋಸ್ಥಿತಿಯನ್ನು ಪೂರ್ವಸಿದ್ಧತೆಯನ್ನು ಹೊಂದಿರುತ್ತಾರೆ. ಹೆಚ್ಚಾಗಿ ಆಟಗಳೆಲ್ಲಾ ಅನುಕರಣೆಗಳ ಮೂಲಕ ಕಲಿತ ಆಟಗಳು. ಈ ಆಟಗಳು ಜನರಿಗೆ ತನ್ನದೇ ಆದ ಕಲ್ಪನಾಶಕ್ತಿ ವಿವೇಚನಾಶಕ್ತಿಯನ್ನು ಒದಗಿಸುತ್ತದೆಂದು ಹೇಳಬಹುದು.

ದೈಹಿಕ ಮತ್ತು ಮಾನಸಿಕವಾಗಿ ಸದೃಡಗೊಳಿಸುವ ಜನಪದ ಆಟಗಳು ಮಕ್ಕಳಲ್ಲಿರುವ ಆಲಸ್ಯತನವನ್ನು ದೂರಮಾಡಿ ಕ್ರಿಯಾಶೀಲರನ್ನಾಗಿ ಮಾಡುತ್ತದೆ. ಆಟಗಳಿಂದ ದೊರೆಯುವ ವ್ಯಯದಿಂದ ಸ್ನಾಯು ಬಲವೃದ್ಧಿಯಾಗುವುದು. ಇದರಿಂದ ಮನೋಲ್ಲಾಸ ದೊರೆತು ಬೌದ್ಧಿಕ ವಿಕಾಸವೂ ಸಿದ್ಧಿಸುತ್ತದೆ. ಕೇವಲ ಮನೆಯಲ್ಲಿ ಕುಳಿತು ದೂರದರ್ಶನ, ವಿಡಿಯೋಗೇಮ್ಸ್, ಕಂಪ್ಯೂಟರ್, ಆಟಗಳಿಗಿಂತ ನಮಗೆ ಯಾವ ಲಾಭವು ದೊರೆಯುವುದಿಲ್ಲ. ಆಟಗಳನ್ನು ಜನಪದ ಜೀವನದಲ್ಲಿ ಸಂಭವಿಸುವ ಸೋಲುಗೆಲವುಗಳನ್ನು ಹೇಗೆ ಸ್ವೀಕರಿಸಬೇಕೆಂಬುದನ್ನು ಸ್ಪಷ್ಟಪಡಿಸುತ್ತದೆ ವಿನಃ ವಿಡಿಯೋಗೇಮ್ಸ್‌ನಂತಹ ಆಟಗಳಿಂದ ಆ ಕೆಲಸ ಸಾಧ್ಯವಿಲ್ಲ.

ಒಟ್ಟಿನಲ್ಲಿ ನಮ್ಮ ಜನಪದ ಕ್ರೀಡೆಗಳು ಜೀವಂತವಾಗಿರಬೇಕಾದರೆ ನಮ್ಮ ಜನರು ದುಂದು ವೆಚ್ಚದ ಆಟಗಳಿಗೆ ಮಾರು ಹೋಗದೆ ನಮ್ಮ ಸಂಸ್ಕೃತಿಯ ಬೆನ್ನೆಲುಬಾದ ಆಟಗಳನ್ನು ಮನೆಯಲ್ಲಿ, ಶಾಲಾ ಕಾಲೇಜ್‌ಗಳಲ್ಲಿ ಪ್ರಾಧ್ಯಾನ್ಯತೆ ನೀಡಿ ಅವುಗಳ ಅರಿವು ನಮ್ಮ ಮಕ್ಕಳಿಗೆ ಮೂಡಿಸಿದಾಗ ಮಾತ್ರ ನಾವು ನಮ್ಮ ಜನಪದ ಆಟಗಳನ್ನು ಮುಂದಿನ ಶತಮಾನದಲ್ಲಿ ಕಾಣುವುದರೊಂದಿಗೆ ಒಳ್ಳೆಯ ನಾಗರೀಕರನ್ನು ಸೃಷ್ಟಿಸಬಹುದು.

### ೩.೯. ಗ್ರಾಮದ ದೈವಗಳು :

ಮಾನವನು ತನ್ನ ಬೇಟೆ ಸಂಸ್ಕೃತಿಯ ಕಾಲದಲ್ಲಿ ಪ್ರಕೃತಿಯಲ್ಲಿ ನಡೆಯುತ್ತಿದ್ದ ವೈಚಿತ್ರ್ಯಗಳಿಗೆ ಅಂಜಿ ಪ್ರಕೃತಿಯನ್ನು ಆರಾಧಿಸ ತೊಡಗಿದನು. ಪ್ರಕೃತಿಯ ಪ್ರತಿಯೊಂದು ವಸ್ತುವನ್ನು ಪೂಜಿಸತೊಡಗಿದ. ಮುಂದೆ ಇದು ದೇವರುಗಳ ಸೃಷ್ಠಿಗೆ ಕಾರಣವಾಯಿತು. ಮಾನವ ಬೆಳದಂತೆ ಅವನು ಆರಾಧಿಸುತ್ತಿದ್ದ ದೈವಗಳಿಗೆ ವಿಗ್ರಹದ ಕಲ್ಪನೆ ನೀಡತೊಡಗಿದ. ಮುಂದೆ ಅವುಗಳನ್ನು ಆರಾಧಿಸತೊಡಗಿದ. ಇಂದು ನಾವು ನಗರ, ಪಟ್ಟಣ, ಹಳ್ಳಿಗಳಲ್ಲಿ ಈ ಬಗೆಯ ದೇವತೆಗಳಿಂದ ಕೂಡಿರುವುದನ್ನು ನೋಡಬಹುದು. ಕೆಲವು ದೇವತೆಗಳು ಮನೆಯ ದೈವಗಳಾಗಿ ಇನ್ನು ಕೆಲವು ದೈವಗಳು ಊರಿನ ದೈವಗಳಾಗಿ ಪೂಜೆಗೊಳ್ಳುತ್ತವೆ.

ಮರಿಯಮ್ಮನಹಳ್ಳಿಯ ಗ್ರಾಮ ದೈವವಾಗಿ ಪೂಜೆಗೊಳ್ಳುತ್ತಿರುವ ದುರ್ಗಮ್ಮ ಈ ಗ್ರಾಮದ ಪ್ರಾಚೀನ ದೇವತೆ.ಈ ದೇವತೆಯಿಂದಲೇ ಈ ಗ್ರಾಮಕ್ಕೆ ಮರಿಯಮ್ಮನಹಳ್ಳಿ ಎಂದು ಹೆಸರು ಬಂದಿರುವುದನ್ನು ಕಾಣುತ್ತೇವೆ. ದುರ್ಗಮ್ಮ ದೇವತೆಯ ಜೊತೆಗೆ ಹಲವು ಸಮುದಾಯದ ಆರಾಧನಾ ಮಂದಿರಗಳಾದ ದೇವಸ್ಥಾನಗಳು, ಮಸೀದಿ, ಚರ್ಚ್ ಇರುವುದು ಕಂಡು ಬರುತ್ತದೆ. ಮುಸ್ಲಿಂ

ಸಮುದಾಯದವರ ಒಂದು ಮಸೀದಿ, ಕ್ರೈಸ್ತ ಸಮುದಾಯದ ಚರ್ಚ್ ಇದೆ. ಹಿಂದು ಸಮುದಾಯದವರ ಹಲವು ದೇವತೆಗಳ ದೇವಸ್ಥಾನಗಳು ಇಲ್ಲಿ ಕಂಡು ಬರುತ್ತವೆ. ಅವುಗಳಲ್ಲಿ ಮುಖ್ಯವಾದ ದೇವತೆಗಳೆಂದರೆ ದುರ್ಗಮ್ಮ, ನೀಲಕಂಠೇಶ್ವರ. ನಾಗೇಶ್ವರ, ವಿರುಪಾಕ್ಷೇಶ್ವರ ಪಾದಗಟ್ಟಿ ರಾಘವೇಂದ್ರಮಠ ಆಂಜನೇಯ ದೇವಸ್ಥಾನ. ಶನೇಶ್ವರ ದೇವಸ್ಥಾನ. ತಾಯಮ್ಮನ ಗುಡಿ ಹನುಮಪ್ಪನ ಗುಡಿ ಹುಗ್ಗೆಮ್ಮ. ಗುಳೇದ ಲಕ್ಕಮ್ಮ ಹೀಗೆ ಹಲವು ದೇವರು ದೇವಸ್ಥಾನಗಳು ಕಂಡು ಬರುತ್ತವೆ. ಇವುಗಳಲ್ಲಿ ಪ್ರಮುಖವಾದ ಈ ಗ್ರಾಮದ ದೈವಗಳೆಂದರೆ ಆಂಜನೇಯ, ಲಕ್ಷ್ಮೀನಾರಾಯಣ ದೇವರು. ಈ ದೈವಗಳು ನಾರಾಯಣದೇವರ ಕೆರೆಯಲ್ಲಿದ್ದಂತ ದೈವಗಳು. ಗ್ರಾಮ ಮುಳುಗಡೆಯಾದಾಗ ಆ ಗ್ರಾಮದ ದೈವಗಳನ್ನು ಮರಿಯಮ್ಮನ ಹಳ್ಳಿಗೆ ತಂದು ಪ್ರತಿಷ್ಠಾಪಿಸಲಾಯಿತು. ಹೀಗೆ ವ್ಯಕ್ತಿ ಎಲ್ಲಿಯೇ ಇರಲಿ ತನ್ನ ಮೂಲ ಪರಿಸರವನ್ನು ಅದು ಗ್ರಾಮವಾಗಲಿ. ನಂಬಿಕೆ, ವಿಧಿ–ನಿಷೇಧವಾಗಲಿ ಅವನು ಅದನ್ನು ಸ್ವಲ್ಪ ಪರಿವರ್ತಿಸಿಯೇ ಆಗಲಿ ಪ್ರತಿಷ್ಠಾಪಿಸುವುದನ್ನು ಕಾಣಬಹುದು ಈ ಮಾತು ಈ ಗ್ರಾಮದ ದೈವಗಳ ವಿಚಾರದಲ್ಲಿ ಕಂಡು ಬರುತ್ತದೆ ಎಂದು ಹೇಳಬಹುದು. ಹೀಗೆ ಮರಿಯಮ್ಮನಹಳ್ಳಿಯಲ್ಲಿರುವ ಎರಡು ಪ್ರಸಿದ್ಧ ದೈವಗಳೆಂದರೆ ಲಕ್ಷ್ಮೀನಾರಾಯಣ ದೇವರು ಮತ್ತು ಆಂಜನೇಯ ದೇವರುಗಳ ದೇವಸ್ಥಾನ ಎಂದು ಹೇಳಬಹುದು.

ಮರಿಯಮ್ಮನಹಳ್ಳಿಯ ಈ ಎರಡು ದೈವಗಳು ಸುಮಾರು ೭೦೦ ವರ್ಷಗಳ ಇತಿಹಾಸವನ್ನು ಹೊಂದಿವೆ. ಮರಿಯಮ್ಮನಹಳ್ಳಿಯಲ್ಲಿ ಪ್ರತಿಸ್ಥಾಪನೆಗೊಂಡು ೫೦ವರ್ಷಗಳಾಗಿವೆ. ಈ ದೈವಗಳನ್ನು ತುಂಗಾಭದ್ರ ಅಣೆಕಟ್ಟಿನಲ್ಲಿ ಮುಳುಗಿದ ನಾರಾಯಣದೇವರಕೆರೆಯಿಂದ ತಂದು ಈ ಊರಿನಲ್ಲಿ ಪ್ರತಿಷ್ಠಾಪನೆ ಮಾಡಿದರು.

ಲಕ್ಷ್ಮೀನಾರಾಯಣ ಮತ್ತು ಆಂಜನೇಯ ಸ್ವಾಮಿಯು ಹೇಗೆ ನಾರಾಯಣ ದೇವರ ಕೆರೆಯಲ್ಲಿ ಪ್ರತಿಸ್ಥಾಪನೆಗೊಂಡವು ಎಂಬುದಕ್ಕೆ ಇಲ್ಲಿಯ ಜನಪದರು ಹಿನ್ನೆಲೆಯನ್ನು ಹೇಳುತ್ತಾರೆ.

ಕ್ರಿ.ಶ.೧೩೩೦ ಅಥವಾ ೧೩೩೧ನೇ ವರ್ಷದಲ್ಲಿ ನರಹರಿ ತೀರ್ಥರು ಹಂಪೆಯಲ್ಲಿ ವಾಸವಾಗಿದ್ದ ಕಾಲ. ಒಂದು ದಿನ ರಾತ್ರಿ ಶ್ರೀನರಹರಿ ತೀರ್ಥರಿಗೆ ಒಂದು ಕನಸು ಬಿತ್ತು– ಅದೇನೆಂದರೆ ಗೊಲ್ಲರಹಳ್ಳಿಯ ಜಲಾಶಯದಲ್ಲಿ, ಆಗಸರು ಬಟ್ಟೆ ಒಗೆಯುವ ಕಲ್ಲುಗಳೇ ಶ್ರೀ ಭೂನಾರಾಯಣ ವಿಗ್ರಹಗಳೆಂದೂ ಅವನ್ನು ತೆಗೆಸಿ ಪ್ರತಿಷ್ಠಾಪನೆ ಮಾಡಿಸಬೇಕೆಂದು ಸ್ವಪ್ನವಾಯಿತು. (ಆದರೆ ದಿವಂಗತ ಕೃಷ್ಣಾಚಾರ್ಯರ ಸ್ತೋತ್ರದಲ್ಲಿ ನರಹರಿ ತೀರ್ಥರು ಸಂಚಾರಕ್ಕೆ ಹೊರಾಟಾಗ ಈ ಸರೋವರದ ದಂಡೆಯಲ್ಲಿ ಮೂಲರಾಮ ದೇವರು ಪೂಜೆಗೆಂದು ತಂಗಿದ್ದರು. ಆಗ ಅವರಿಗೆ ಈ ಮೂರ್ತಿಗಳು ದೊರಕಿದವು). ಈ ರೀತಿಯ ಭಗವದಾಜ್ಞೆಯನ್ನು ಪಡೆದ ತಾವೇ ಧನ್ಯರು ಎಂದು ತಿಳಿದು ಶ್ರೀ ನರಹರಿ ತೀರ್ಥರು ಶ್ರೀ ಭೂನಾರಾಯಣ ವಿಗ್ರಹಗಳನ್ನು ಕೆರೆಯಲ್ಲಿಯ ಚುರ್ಚಿಗೇರ ಸಹ ವರ್ತಿಯಿಂದ ಸ್ವಹಸ್ತದಿಂದಲೇ ಎತ್ತಿಕೊಂಡು ಬಂದು ಕೆರೆಯ ದಂಡೆಯ ಮೇಲಿಂದ ಗೊಲ್ಲರ ಹಳ್ಳಿಯ ಆಂಜನೇಯ ಗುಡಿಯಲ್ಲಿಟ್ಟು ಪೂಜಿಸಿದರು. ತಮಗೆ ಈ ವಿಧವಾಗಿ

ದೊರೆತ ದೇವರ ವಿಗ್ರಹಗಳನ್ನು ಎಲ್ಲಿ ಪ್ರತಿಸ್ಥಾಪನೆ ಮಾಡಬೇಕೆಂದು ತಿರುಗಾಡುತ್ತಿದ್ದಾಗ ಸ್ವಲ್ಪ ದೂರದಲ್ಲಿ ಒಂದು ಭಾರಿ 'ಹುತ್ತ' ಕಾಣಿಸಿತು. ಆ ಹುತ್ತದ ಸ್ವಲ್ಪ ದೂರದಲ್ಲಿಯೇ ಒಂದು ಧ್ವಜ ಸ್ತಂಭವು ನೆಲದಲ್ಲಿ ಹೂತುಹೋದದ್ದು ಇವರ ದೃಷ್ಟಿಗೆ ಬಿತ್ತು. ಆಶ್ಚರ್ಯದಿಂದ ಅದನ್ನು ತೆಗೆಸಿ ನೋಡಿದಾಗ, ಅದರ ಅಡಿಯಲ್ಲಿ ಪುರಾತನ ಪ್ರಾಣ ದೇವರ ಮೂರ್ತಿ ಗೋಚರವಾಯಿತು. ಈ ರೀತಿಯಲ್ಲಿ ದೊರೆತ ಪ್ರಾಣದೇವರನ್ನು ಶುದ್ಧಿ ಮಾಡಿ-ತಾವೇ ಸ್ವಯಂ ಅಭಿಷೇಕ ಮಾಡಿ ಪೂಜಿಸಿದರು. ಪೂಜೆಯಾದ ಮೇಲೆ ತಮಗೆ ದೊರೆತ ದೇವರ ವಿಗ್ರಹವನ್ನು ಎಲ್ಲಿ ಪ್ರತಿಷ್ಠಾಪನೆ ಮಾಡಬೇಕೆಂದು ತಮಗೆ ದೊರೆತ ಆಂಜನೇಯ ಸ್ವಾಮಿಯ ಕುರಿತು ಧ್ಯಾನಸಕ್ತರಾದರು. ತಮಗೆ ಮಾರ್ಗದರ್ಶನ ಮಾಡಿದಲ್ಲಿ, ಆಂಜನೇಯ ಸ್ವಾಮಿಗೆ 'ಲಕ್ಷ ಕಡುಬನ್ನ' ನೈವೇದ್ಯ ಮಾಡಿಸುತ್ತೇನೆ ಎಂದು ಕೊಂಡರು.

ಅದೇ ದಿನ ರಾತ್ರಿ ಅವರ ಕನಸಿನಲ್ಲಿ ಆಂಜನೇಯ ಸ್ವಾಮಿಯ ಆಜ್ಞೆ ದೊರೆತು, ತನ್ನ ಬಲಪಾರ್ಶ್ವದಲ್ಲಿಯೇ, ತನ್ನ ಒಡೆಯನಾದ ಶ್ರೀ ಭೂನಾರಾಯಣ ಸ್ವಾಮಿಯ ವಿಗ್ರಹದ ಪ್ರತಿಷ್ಠಾಪನೆ ಆಗಬೇಕೆಂದು ಹೇಳಿದರಂತೆ. ಅದೇ ಪ್ರಕಾರ ಆಂಜನೇಯ ಸ್ವಾಮಿಯ ಪಕ್ಕದಲ್ಲಿ ಶ್ರೀಭೂನಾರಾಯಣ ಗುಡಿಯನ್ನು ನಿರ್ಮಿಸಿದರು.

ಶ್ರೀನರಹರಿ ತೀರ್ಥರು ತಾವು ಬೇಡಿಕೊಂಡಂತೆ ಪ್ರಾಣದೇವರಿಗೆ 'ಲಕ್ಷ ಕಡುಬಿನ' ನೈವೇದ್ಯ ಅರ್ಪಿಸಿ ಹಂಪೆಗೆ ಮರಳಿದರು.

ನಾರಾಯಣ ದೇವರ ಕೆರೆಯ ಹನುಮಂತ ದೇವರ ಗುಡಿಯ ಎದುರಿಗೆ ಇರುವ ಧ್ವ ಸ್ತಂಭದ ಅಡಿಯಲ್ಲಿ ಒಂದು ಶಿಲಾಶಾಸನವಿತ್ತಂತೆ. ಹನುಮಂತ ದೇವರ ಗುಡಿಯ ಒಡೆಯರು ಶಾ.ಶಕೆ ೫೪೫ರಲ್ಲಿಯೇ ಧ್ವಜ ಸ್ತಂಭದ ಜೀರ್ಣೋದ್ಧಾರ ಕಾರ್ಯ ಮಾಡಿಸಿದಂತೆ ತಿಳಿಸುತ್ತದೆ. ಅಂದರೆ ಕ್ರಿ.ಶ.೬೨೮ರಲ್ಲಿ ಈ ದೇವಸ್ಥಾನ ಇದ್ದಂತೆ ತೋರುತ್ತದೆ. ಅಂದರೆ ಕ್ರಿ.ಶ.೬೨೮ರಲ್ಲಿ ಈ ಊರಿನಲ್ಲಿ ದೇವಸ್ಥಾನ ವಿದ್ದು ಯಾವುದೋ ಒಂದು ಪ್ರಬಲವಾದ ದಾಳಿಗೆ ಸಿಕ್ಕಿ ಈದೇವಸ್ಥಾನ ಭೂಮಿಯಲ್ಲಿ ಸೇರಿಹೋದವು ಎಂದು ಹೇಳಬಹುದು.

೫೦ವರ್ಷಗಳಹಿಂದೆ ಈ ಊರು ಅಂದರೆ ೧೯೫೩ ರಲ್ಲಿ ಮುಳುಗಡೆಯಾಯಿತು. ಮುಳುಗಡೆ ಆದ ವರ್ಷದಲ್ಲಿಯೇ - ಗುಡಿಯಲ್ಲಿ ಇದ್ದ ವಿಗ್ರಹಗಳನ್ನು ತೆಗೆದು ಕೊಂಡು ಬಂದು ಮರಿಯಮ್ಮನಹಳ್ಳಿಯಲ್ಲಿ ಹೊಸ ದೇವಸ್ಥಾನ ನಿರ್ಮಿಸಿ ಪ್ರತಿಷ್ಠಾಪನೆ ಮಾಡಿದರು.

**ಪುರಾಣ :**

ಪುರಾಣದಲ್ಲಿ ಆಂಜನೇಯನ ಬಗ್ಗೆ ಹೀಗೆ ಹೇಳುತ್ತಾರೆ. ಆಂಜನೇಯನ ತಾಯಿ ಹೆಸರು 'ಅಂಜನ ದೇವಿ' ತಂದೆ-'ಕೇಸರಿ' ಇವರಿಬ್ಬರು ಗಂಧರ್ವ ಲೋಕಕ್ಕೆ ಸೇರಿದವರು. ಅವರಿಗೆ ಬಹಳದಿನ ಮಕ್ಕಳು ಆಗಲಿಲ್ಲ. ಒಂದು ದಿನ ಅಂಜನಾ ದೇವಿ ವನದಲ್ಲಿ ತಿರುಗಾಡುತ್ತಿರುವಾಗ ವಾಯು ದೇವನು ಈಕೆಯ ಸೌಂದರ್ಯಕ್ಕೆ ಮಾರು ಹೋಗಿ ಇವಳೊಂದಿಗೆ ಕೂಡಿದ್ದರಿಂದ

ಆಂಜನೇಯ ಜನಿಸಿದ. ಇದು ರಾಮಾಯಣದಲ್ಲಿ ಬರುವ ಕಥೆಯಾಗಿದೆ.

ಈ ಹನುಮಂತನ ಬಗ್ಗೆ ವೇದಗಳಲ್ಲಿ ಪ್ರಸ್ತಾಪವಿಲ್ಲ. ಆತನ ಆರಾಧನೆ ಬಹಳಷ್ಟು ಪ್ರಚೀನವಾಗಿರದೆ ಒಂದು ಕಾಡು ಜನಾಂಗದಿಂದ ಬಂದುದಾಗಿರಬೇಕೆಂದು ಹೇಳಲಾಗುತ್ತದೆ.

ಆರ್ಯರು ದ್ರಾವಿಡರನ್ನು ಸೋಲಿಸಿ ದಕ್ಷಿಣಕ್ಕೆ ಅಟ್ಟಿದ ಮೇಲೆ, ದ್ರಾವಿಡರು ತಾವು ವಾಸ ಮಾಡಿದಲ್ಲೆಲ್ಲ. ರಕ್ಷಣೆಗೆಂದು ತಮ್ಮ ಪ್ರಬಲ ದೇವರ ಹನುಮಂತನನ್ನು ಯಾವುದೇ ಕಂಟಕಗಳಿಂದ ಕಾಪಾಡಲು ಗ್ರಾಮದ ಹೊರಬಾಗಿಲಿಗೆ ಗುಡಿಯನ್ನು ಕಾಣಬಹುದು ಹೀಗೆ ಸ್ಥಳೀಯ ಮಹತ್ವ ಪಡೆದ ಹನಮಂತನು ತನ್ನ ಸಮುದಾಯಗಳಿಂದ ಪೂಜೆಗೈಸಿಕೊಳ್ಳುತ್ತ ಕ್ರಮೇಣ ಜನಪ್ರಿಯತೆಯನ್ನು ಪಡೆಯುತ್ತ ನಂಬುಗೆಗಳು ಪ್ರಬಲವಾಗುತ್ತ ಹೋಗಿ ಪುರಾಣಗಳಲ್ಲಿ ಸ್ಥಾನ ಪಡೆದು ದೇಶದಾದ್ಯಂತ ಬಹುದೊಡ್ಡ ದೇವರಾಗಿ ಮಾರ್ಪಟ್ಟನು. ಶ್ರೀ ಭೂನಾರಾಯಣನು-ವಿಷ್ಣುವಿನ ಅವತಾರವಾಗಿದ್ದಾನೆ. ಈ ದೈವಗಳ ಬಗ್ಗೆ ಪುರಾಣಗಳಿಂದ, ಭಾಗವತ, ವಿಷ್ಣು ಪುರಾಣ ಗರುಡ ಪುರಾಣ, ದಶವಾತರಗಳಲ್ಲಿ ಕಾಣ ಬಹುದಾಗಿದೆ. ವಿಷ್ಣು ಆರ್ಯರ ಆರಾಧನೆ ಮಾಡುವ ದೈವವಾಗಿದ್ದಾನೆ.

ನಾರಾಯಣ ಸ್ವಾಮಿಯ ಪೂಜೆಯನ್ನು ಗೋವಿಂದಾಚಾರ್ಯ ಮನೆತನದವರು ಮಡುತ್ತಾ ಬಂದಿದ್ದಾರೆ. ಆದರೆ ಆಂಜನೇಯ ಸ್ವಾಮಿಯ ಪೂಜೆಯನ್ನು ಭೀಮಜ್ಜನ ಮನೆತನದವರು ವರ್ಷದ ಅವದಿಗೆ ಒಬ್ಬಬ್ಬರೂ ಪೂಜಾರರು ಮಾಡುತ್ತಾರೆ.

**೧. ದಿನಂಪ್ರತಿ :**

ದಿನಂ ಪ್ರತಿ ಬೆಳಿಗ್ಗೆ ಏಳು ಗಂಟೆಗೆ ನಾರಾಯಣಸ್ವಾಮಿ ಮತ್ತು ಆಂಜನೇಯ ಸ್ವಾಮಿಯ ಪೂಜೆ ಮಾಡುತ್ತಾರೆ. ಎರಡು ದೈವಗಳ ಪೂಜಾರಿಯು ಗುಡಿಯ ಬಾವಿಯ ನೀರಿನಿಂದ ಸ್ನಾನ ಮಾಡಿ ಮಡಿಯಿಂದ ನೀರನ್ನು ತಂದು ಆ ದೈವಗಳನ್ನು ತೊಳೆದು ಗಂಧ, ಅಕ್ಷತೆ, ಕುಂಕುಮ, ಹೂವು, ಪತ್ರಿಯಿಂದ ಅಲಂಕರಿಸುತ್ತಾರೆ. ಪೂಜೆಯ ನೈವೇದ್ಯಕ್ಕೆ ಕಲ್ಲುಸಕ್ಕರೆ ಪ್ರಸಾದವನ್ನು ಇಡುತ್ತಾರೆ. ಮಂಗಳಾರತಿ ಮಾಡಿ ಕಾಯಿಯನ್ನು ಒಡೆಯುತ್ತಾರೆ.

**೨. ವಾರದ ವಿಶೇಷದಿನ :**

ಅಂದು ಬೆಳಿಗ್ಗೆಯೇ ಎರಡು ದೈವಗಳಿಗೆ ಪೂಜೆ ಮಾಡುತ್ತಾರೆ. ಸಾಂಯಂಕಾಲ ಕೂಡ ಪೂಜೆ ಮಾಡುತ್ತಾರೆ. ಶನಿವಾರ ಎರಡು ದೈವಗಳಿಗೆ ವಿಶೇಷವಾದ ದಿನವಾಗಿದೆ ಅಂದು ಬೇಡಿಕೊಂಡ ಭಕ್ತರ, ಆಂಜನೇಯ ಸ್ವಾಮಿಗೆ ಕುಂಕುಮ ಪೂಜೆ, ಎಲೆಪೂಜೆ, ಪಂಚಾಮೃತಾಭಿಷೇಕ ಮಾಡಿಸುತ್ತಾರೆ. ಎಲ್ಲ ವರ್ಗದವರು ದೇವಸ್ಥಾನಕ್ಕೆ ಬಂದು ಸ್ವಾಮಿಗಳ ದರ್ಶನ ಪಡೆದುಕೊಂಡು ಹೋಗುತ್ತಾರೆ.

**ಯುಗಾದಿ :**

ಶ್ರೀ ಆಂಜನೇಯ ಮತ್ತು ಲಕ್ಷ್ಮೀನಾರಾಯಣ ಸ್ವಾಮಿಯ ದೇವತಾ ಕಾರ್ಯವು ಯುಗಾದಿಯಿಂದ ಪ್ರಾರಂಭವಾಗುತ್ತದೆ.

ಜಾತ್ರೆ: 'ಜಾತ್ರೆ' ಅಂದರೆ ಯಾತ್ರೆಯ ತದ್ಭವ ರೂಪ. ಮನುಷ್ಯ, ಪ್ರಾಣಿಯು ಈ ಸೃಷ್ಠಿಯಲ್ಲಿ ಬದಲಾಗುವ ಸನ್ನಿವೇಶಗಳಾಧ ಹಗಲು-ರಾತ್ರಿ, ಬಿಸಿಲು-ಗಾಳಿಗಳ ಈ ಬದಲಾವಣೆಗಳನ್ನು ನೋಡಿ ಕಣ್ಣಿಗೆ ಕಾಣದ ಅಗೋಚರವಾದ ಈ ಶಕ್ತಿಯನ್ನು ಕಂಡು ಕೆಲವೊಮ್ಮೆ ಭೀತಿಗೊಳಗಾದರೆ. ಮತ್ತೊಮ್ಮೆ ಭಕ್ತಿಯಿಂದ ತಲೆಭಾಗತೊಡಗಿದ. ಈ ಭೀತಿಯ ನಿವಾರಣೆಗಾಗಿ ದೇವರ ಕಲ್ಪನೆ ತಂದುಕೊಂಡು ಧಾರ್ಮಿಕ ಭಾವನೆಯಲ್ಲಿ ಗುಂಪು ಗುಂಪಾಗಿ ಜನರೊಡಗೂಡಿ ದೇವರನ್ನು ಆರಾಧಿಸಲು ಮುಂದಾದನು. ನಂತರ ವರ್ಷಕ್ಕೊಂದಾವರ್ತಿ ವಿಶೇಷ ಉತ್ಸವ ಮಾಡಲು ಅನುವಾದಾಗ 'ಜಾತ್ರೆ'ಎಂಬುದು ಹುಟ್ಟಿಕೊಂಡಿತು.

"ಜಾತ್ರೆಯೆಂಬದು ವರ್ಷಕ್ಕೊ, ನಿಗದಿಯಾದ ಇನ್ನಿತರ ಅವಧಿಗೋ ಗೊತ್ತಾದ ಸ್ಥಳದಲ್ಲಿ ಒಂದು ದಿನವೊ ಇನ್ನು ಹೆಚ್ಚಿನ ದಿನಗಳವರೆಗೂ ಜನಸೇರಿ ನಡೆಸುವ ಉತ್ಸವವಾಗಿದೆ".

ಜಾತ್ರೆಗಳು ನಮ್ಮ ನಾಡಿನಲ್ಲಿ ಜರುಗುವ ಸ್ಥಳದ ಹೆಸರಿನಿಂದ ಅಥವಾ ಅಲ್ಲಿಯ ದೈವದ ಹೆಸರಿನಿಂದ ಜನಪ್ರಿಯವಾಗಿರುವುದುಂಟು. ಜಾತ್ರೆಗಳು ಸಮಸ್ತ ಸಾಮಾಜಿಕ ಪರಂಪರೆಯ ಅಭಿವ್ಯಕ್ತಿಯಾಗಿರುವ ಜನಪದರ ಅನೇಕ ಅಂಶಗಳನ್ನ ಒಳಗೊಂಡಿರುವಂಥವು. ಜಾತ್ರೆಯ ಹೆಸರಿನಲ್ಲಿ ನೆಡೆಯುವ ಸಂಕೀರ್ಣ ಚಟುವಟಿಕೆಗಳೆಲ್ಲ ಸಾಮೂಹಿಕವಾಗಿ ನಡೆಯುವಂಥವು.

ಯಾವುದೋ ಒಂದು ನಿಗಧಿಯಾದ ವೇಳೆಯಲ್ಲಿ ಜನರೆಲ್ಲ ಸೇರಿ ದೇವರನ್ನು ಆರಾಧಿಸುವುದಕ್ಕೆ ಜಾತ್ರೆ ಎಂದು ಕರೆಯುತ್ತಾರೆ. ಈ ಆರಾಧನೆಯ ಹಿನ್ನೆಲೆಯಲ್ಲಿ ಜನ ಒಂದು ಕಡೆ ಸೇರುವಂತಾಗುತ್ತದೆ. ಇದರೊಂದಿಗೆ ಉಳಿದ ವ್ಯವಹಾರಗಳನ್ನು ನಡೆಸಿಕೊಳ್ಳಲು ಅನುಕೂಲವಾಗಿರುತ್ತದೆ. ಕೌಟುಂಬಿಕ ಸಂಬಂಧದ ವಿಷಯಗಳನ್ನು ಕುರಿತು ಮಾತುಕತೆಗಳು ನಡೆಯುವುದಕ್ಕೆ ಇಂಥಾ ವ್ಯವಸ್ಥೆಗಳು ಸಹಾಯಕವಾಗುತ್ತವೆ ಸೌಹಾರ್ದದ ಕೊಂಡಿಗಳಾಗಿರುತ್ತವೆ.

ಪ್ರತಿ ನಿತ್ಯವೂ ಪ್ರತಿಕ್ಷಣವೂ ನಿಸರ್ಗದ ಮಡಿಲಲ್ಲಿ ನಿರಂತರವಾಗಿ ಶ್ರಮವಹಿಸಿ ದುಡಿಯುವ ಜನತೆ, ಆ ಬದುಕಿನಿಂದ ಸ್ವಲ್ಪ ವಿರಾಮ ಪಡೆದು ನೆಮ್ಮದಿಯ ಉಸಿರು ಬಿಡಲು ಹಬ್ಬ, ತೇರು, ಉತ್ಸವ, ಜಾತ್ರೆ ಮೊದಲಾದ ಸಾಮಾಜಿಕ ಸಾಮೂಹಿಕ ಆಚರಣೆಗಳನ್ನು ಕಂಡುಕೊಂಡರು. ಈ ಆಚರಣೆಗಳೆಲ್ಲ ಹುಟ್ಟಿಕೊಂಡಿದ್ದು ಸಂತೋಷದ ಜೀವನವನ್ನು ನಡೆಸಬೇಕು ಎಂಬ ಉದ್ದೇಶದಿಂದ. ಈ ವಿಧಿಗಳೆಲ್ಲ ಜನಪದರ ಒಂದು ಭಾಗವೇ ಆಗಿರುವುದರಿಂದ ಇವುಗಳಲ್ಲಿ ವೈಯಕ್ತಿಕ ಕಾಳಜಿಗಿಂತ ಸಮಷ್ಠಿಯ ಹಿತಾಸಕ್ತಿಯ ಕಡೆಗೆ ಒಲವು ಮೂಡಿತು. ಸಮಾಜದ ಹಿತರಕ್ಷಣೆಯೆ ಇವುಗಳ ಮುಖ್ಯ ಉದ್ದೇಶವಾಯಿತು. ಇಂಥ ಉದ್ದೇಶವನ್ನು ಅಭಿವ್ಯಕ್ತಿಸುವ ಹಲವು ಆಚರಣೆಗಳಲ್ಲಿ ಜಾತ್ರೆಗಳು ತುಂಬಾ ಪ್ರಮುಖ ಪಾತ್ರವಹಿಸುತ್ತವೆ.

ಜಾತ್ರೆಗಳು ಮತದ ದೃಷ್ಟಿಯಿಂದಲ್ಲದೇ ಸಮಾಜದ ದೃಷ್ಟಿಯಿಂದಲೂ ಮುಖ್ಯವಾಗಿವೆ ಎನ್ನುವ ಹಾಗೆ, ಈ ಜಾತ್ರೆಯಲ್ಲಿ ಎಲ್ಲಾ ವರ್ಗದವರು ಒಟ್ಟಾಗಿ ಸೇರಿ ಭಾವನಾತ್ಮಕ ಏಕತೆಯನ್ನು ಹೊಂದಿರುತ್ತಾರೆ. ವರ್ಷವಿಡೀ ಕೆಲಸ ಮಾಡಿದ ಜನಪದರು ತಮ್ಮ ನೆಂಟರಿಷ್ಟರೊಡಗೂಡಿ ಸುಖವಾಗಿ ಕಾಲಕಳೆಯುವ ಉದ್ದೇಶವು ಸಹ ಇರುತ್ತದೆ.

ಮುಖ್ಯವಾಗಿ ಜಾತ್ರೆಗಳು ಎರಡು ಕಾರಣಕ್ಕೆ ನಡೆಯುತ್ತವೆ. ಒಂದು ಊರಿನಲ್ಲಿ ಮಳೆ ಬೆಳೆ ಚೆನ್ನಾಗಿ ಆಗಿದ್ದರಿಂದ ಊರಿನ ಎಲ್ಲ ಜನರಿಗೂ ಸಂತೋಷವಾಗಿ ಎಲ್ಲರೂ ಕೂಡಿ ಬಂದು ಬಳಗದವರ ಜೊತೆ ಸಂತೋಷವನ್ನು ಹಂಚಿಕೊಳ್ಳಬೇಕೆಂದು ಅಥವಾ ಆ ಸಂತೋಷಕ್ಕೆ ತಾವು ನಂಬಿಕೊಂಡ ದೈವದ ಕೃಪೆ ಎಂತಲೋ ಭಾವಿಸಿ ಆ ದೈವಕ್ಕೆ ಜಾತ್ರೆಯ ಆಚರಣೆಯನ್ನು ಮಾಡುವರು.

ಮತ್ತೊಂದು ಕಾರಣವೆಂದರೆ ಮಳೆ ಇಲ್ಲದ ಬೆಳೆ ಬಾರದ ಊರ ಜನರೆಲ್ಲಾ ಭೀಕರ ಕ್ಷಾಮ ಎದುರಿಸುತ್ತಿರುವ ಸಂದರ್ಭದಲ್ಲಿ ಅಥವಾ ಊರಿಗೆ ಕೇಡು ಸಂಭವಿಸುವ ಸಂದರ್ಭದಲ್ಲಿ ತಾವು ನಂಬಿದ ದೇವರಿಗೆ ಜಾತ್ರೆ ಮಾಡುವ ಪದ್ಧತಿ ಬೆಳೆದು ಬಂದಿದೆ.

ಮರಿಯಮ್ಮನಹಳ್ಳಿಯ ಈ ದೈವಗಳ ಜಾತ್ರೆಯು ಮೊದಲನೇ ಕಾರಣಕ್ಕೆ ನಡೆಯುತ್ತದೆ.

**ಜಾತ್ರೆಯ ಪೂರ್ವತಯಾರಿ :**

ಲಕ್ಷ್ಮೀನಾರಾಯಣ ಮತ್ತು ಆಂಜನೇಯ ಸ್ವಾಮಿಯ ಜಾತ್ರೆ ನಡೆಯುವುದು ರಾಮ ನವಮಿಯಂದು. ಜಾತ್ರೆಯ ಪೂರ್ವ ತಯಾರಿಯನ್ನು ದೇವಸ್ಥಾನದ ಕಮಿಟಿಯವರು ಮಾಡುತ್ತಾರೆ. ಜಾತ್ರೆಯು ಒಂದು ತಿಂಗಳು ಇರುವ ಮುಂಚೆಯೇ ಕಮಿಟಿಯ ಸದಸ್ಯರು ಮತ್ತು ಧರ್ಮಕರ್ತರು ಸಭೆ ಸೇರಿ ಕತೆ ನಡೆಸುತ್ತಾರೆ. ಜಾತ್ರೆಯಲ್ಲಿ ನಡೆಯುವಂತಹ ಉತ್ಸವಗಳು ಹೇಗೆ ನಡೆಯಬೇಕೆಂದು ಚರ್ಚಿಸುತ್ತಾರೆ. ನಂತರ ಜಾತ್ರೆಯ ಎಲ್ಲಾ ದೇವತಾ ಕಾರ್ಯಕ್ರಮಗಳನ್ನು ನಸೆಸಿಕೊಡಲು ಕೊಪ್ಪಳ ತಾಲ್ಲೂಕಿನ ಕಿನ್ನಾಳದ 'ಆಗಮದವರು'ನ್ನು ಆಮಂತ್ರಿಸುತ್ತಾರೆ.

ಜಾತ್ರೆಯ ದೇವತಾ ಕಾರ್ಯಕ್ರಮ ವಿವರಣೆಯ ಕರ ಪತ್ರವನ್ನು ಮುದ್ರಿಸಿ ಊರಿನಲ್ಲಿ ಎಲ್ಲರಿಗೂ ಮತ್ತು ಸುತ್ತ ಮುತ್ತಲಿನ ಹಳ್ಳಿಗಳಿಗೆ ಹಂಚುತ್ತಾರೆ. ಉತ್ಸವಗಳಿಗೆ ಬೇಕಾದಂತಹ ಎಲ್ಲ ವಸ್ತುಗಳನ್ನು ಸಂಗ್ರಹಿಸಲು ತೊಡಗುತ್ತಾರೆ. ದೇವಸ್ಥಾನಗಳಿಗೆ ಸುಣ್ಣ-ಬಣ್ಣ ಬಳಸುತ್ತಾರೆ. ದೇವಸ್ಥಾನವನ್ನು ಅಲಂಕಾರಿಕವಾಗಿ ಶೃಂಗರಿಸುತ್ತಾರೆ.

ಊರಿನ ಎಲ್ಲರು ತಮ್ಮ ತಮ್ಮ ಮನೆಗಳಿಗೆ ಸುಣ್ಣ ಬಣ್ಣಗಳನ್ನು ಬಳಿಯುವರು. ಊರಿನ ಎಲ್ಲ ಮನೆಯವರು ತಮ್ಮ ನೆಂಟರಿಷ್ಟರನ್ನು ಬಂಧು ಬಳಗದವರನ್ನು ಸ್ನೇಹಿತರನ್ನು ಜಾತ್ರೆಗೆ ಆಹ್ವಾನಿಸುವರು.

ಲಕ್ಷ್ಮೀನಾರಾಯಣ ಮತ್ತು ಆಂಜನೇಯ ಸ್ವಾಮಿಯ ಜಾತ್ರೆಯ ಸಂದರ್ಭದಲ್ಲಿ ನಡೆಯುವಂತಹ ಆಚರಣೆಗಳು ರಾಮಾಯಣದ ಪ್ರಮುಖ ಸಂದರ್ಭದ ಸಂಕೇತಗಳಾಗಿವೆ.

ಅವುಗಳನ್ನು ಈ ರೀತಿ ಪಟ್ಟಿ ಮಾಡಬಹುದು.

೧. ರಾಮ ಸೀತೆಯರ ನಿಶ್ಚಿತಾರ್ಥ

೨. ರಾಮ ಸೀತೆಯರ ಮದುವೆ ಮಾಡಿಸುವುದು.

೩. ರಾಮ ಸೀತೆಯರ ಮದುವೆಯ ಮೆರವಣಿಗೆ (ರಥೋತ್ಸವ)

೪. ಆಂಜನೇಯ ಸಂಜೀವಿನಿ ಗಿಡ ತರುವುದು.

೫. ರಾಮ ಬೇಟೆಯಿಂದ ತಡವಾಗಿ ಬಂದಾಗ ರಾಮ ಸೀತೆಯರ ಮದ್ಯೆ ನಡೆಯುವ ಮಾತುಕತೆ (ಕಡುಗಿನ ಕಾಳಗ)

ಹೀಗೆ ಜನಪದರು ಈ ದೈವಗಳ ಜಾತ್ರೆಯಲ್ಲಿ ಆಚರಿಸುವ ಉತ್ಸವಗಳನ್ನು ರಾಮಾಯಣದಲ್ಲಿ ನಡೆಯುವಂತಹ ಪ್ರಸಂಗಗಳನ್ನು ಇಂದಿಗೂ ಆಚರಿಸಿಕೊಂಡು ಬಂದಿದ್ದಾರೆ ಎಂದು ಹೇಳಬಹುದು.

ಲಕ್ಷ್ಮೀನಾರಾಯಣ ಮತ್ತು ಆಂಜನೇಯ ಸ್ವಾಮಿಯ ಜಾತ್ರೆಯ ಉತ್ಸವವು ಚೈತ್ರ ಮಾಸದಲ್ಲಿ ನಡೆಯುತ್ತದೆ ಯುಗಾದಿಯ ಪಾಡ್ಯದಿಂದ ಹಿಡಿದು ಏಕಾದಶಿವರೆಗೆ ದೇವತಾ ಕಾರ್ಯಗಳು ನಡೆಯುತ್ತದೆ.

ಒಂದೊಂದು ದಿನ ಒಂದೊಂದು ದೇವತಾ ಕಾರ್ಯ ನಡೆಯುತ್ತದೆ.

ಚೈತ್ರ ಶುದ್ಧ ಪಾಡ್ಯದಂದು - ಕಲಶೋತ್ಸವ

ಚೈತ್ರ, ಶುದ್ಧ ಷಷ್ಟಿಯಂದು - ಹನುಮಂತೋತ್ಸವ (ನಿಶ್ಚಿತಾರ್ಥ)

ಚೈತ್ರ, ಶುದ್ಧ ಸಪ್ತಮಿಯಂದು - ಗರುಡೋತ್ಸವ (ದೇವರಲಗ್ನ)

ಚೈತ್ರ, ಶುದ್ಧ ಅಷ್ಟಮಿಯಂದು - ದಂಡ ಬಲಿ ಆನೆ ಉತ್ಸವ

ಶ್ರೀ ಲಕ್ಷ್ಮಿನಾರಾಯಣ ಮತ್ತು ಆಂಜನೇಯ ಸ್ವಾಮಿಗೆ ಅಸಂಖ್ಯಾತ ಭಕ್ತರು ಇದ್ದಾರೆ ಸುತ್ತಮುತ್ತಲಿನ ೩೩ ಹಳ್ಳಿಗಳಲ್ಲಿ ಈ ದೈವಗಳಿಗೆ ಭಕ್ತರು ಇದ್ದಾರೆ ಏಕೆಂದರೆ ನಾರಾಯಣ ದೇವರಕೆರೆಯು ತುಂಗಾಭದ್ರ ಜಲಾಶಯದಲ್ಲಿ ಮುಳಗಿದಾಗ ಮುಕ್ಕಾಲು ಭಾಗ ಜನರು ಮರಿಯಮ್ಮನಹಳ್ಳಿಗೆ ವಲಸೆ ಬಂದರು. ಉಳಿದ ಜನರು ಹೊಸಪೇಟೆ, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಹಡಗಲಿ, ಬಳ್ಳಾರಿ, ಬೆಂಗಳೂರು ಕಡೆಗೆ ವಲಸೆ ಹೋದರು. ಅವರುಗಳೆಲ್ಲಾ ಈ ದೈವಗಳ ಜಾತ್ರೆಯ ಸಂದರ್ಭದಲ್ಲಿ ಈ ಊರಿಗೆ ಬರುತ್ತಾರೆ.

ಆಂಜನೇಯ ದೈವವು ಮುಖ್ಯವಾಗಿ ವಾಲ್ಮೀಕಿ (ನಾಯಕರು) ಸಮುದಾಯದ ಮನೆ ದೇವರಾಗಿದ್ದಾನೆ ಮತ್ತು ಲಕ್ಷ್ಮೀನಾರಾಯಣನ ಬ್ರಾಹ್ಮಣರು ಶೆಟ್ಟರು ಮನೆದೇವರನ್ನಾಗಿ ಮಾಡಿಕೊಂಡಿದ್ದಾರೆ.

ಇಲ್ಲಿ ಹೆಚ್ಚಾಗಿ ಜನರು ತಮ್ಮ ಮಕ್ಕಳಿಗೆ - ಹನುಮಂತ, ಹನುಮಂತಪ್ಪ, ಅಂಜನಿ, ಆಂಜನೇಯ, ಮಾರುತಿ, ಹನುಮ ಮತ್ತು ಲಕ್ಷ್ಮಿ, ಲಕ್ಷ್ಮೀನಾರಾಯಣ, ವೆಂಕಮ್ಮ, ವೆಂಕಟೇಶ,

ರಾಮಣ್ಣ, ರಾಮಕ್ಕ ಎಂಬ ಹೆಸರುಗಳನ್ನು ಇಡುತ್ತಾರೆ. ಇಲ್ಲಿನ ಸುತ್ತಮುತ್ತಲಿನ ಜನಪದರಿಗೆ ಈ ದೈವಗಳೇ ಪ್ರಮುಖ ಆರಾಧ್ಯ ದೈವ ಆಗಿದ್ದಾರೆ.

ಈ ದೈವಗಳ ಜಾತ್ರೆಗೆ ಸುತ್ತಮುತ್ತಲಿನ ಊರುಗಳಿಂದ ಜನಪದರು ಕಾಲ್ನಡಿಗೆಯಿಂದ ಬಂಡಿಯನ್ನು ಕಟ್ಟಿಕೊಂಡು, ಟ್ರಾಕ್ಟರ್‌ಗಳಲ್ಲಿ, ಬಸ್ಸುಗಳಲ್ಲಿ ಬರುತ್ತಾರೆ.

ಪ್ರತಿದಿನವೂ ಮುಂಜಾನೆ ಮತ್ತು ಸಂಜೆ ದೇವಸ್ಥಾನದಿಂದ ಪಾದಗಟ್ಟೆ ದೇವಸ್ಥಾನದವರೆಗೆ ವಾದ್ಯಗಳ ಸಮೇತ ದೇವರ ಉತ್ಸವವನ್ನು ಕರೆದುಕೊಂಡು ಹೋಗಿ ಬರುತ್ತಾರೆ. ದೇವರ ಉತ್ಸವ ಈ ರೀತಿ ತೆಗೆದುಕೊಂಡು ಹೋಗುವಾಗ ಬಜಾರಿನಲ್ಲಿ ಊರಿನ ಜನಪದರು ದೇವರ ಪಲ್ಲಕ್ಕಿಯ ಕೆಳಗಡೆ ನೀರನ್ನು ಹಾಕಿ ಮಂಗಳಾರತಿಯನ್ನು ಮಾಡಿಸುತ್ತಾರೆ. ಬೆಳಗಿನ ಉತ್ಸವಗಳನ್ನು ವಿವಿಧ ವಾಹನಗಳ ಮೇಲೆ ಮತ್ತು ಸಾಯಂಕಾಲದ ಉತ್ಸವವನ್ನು ಗೋಪುರ ವಾಹನದಲ್ಲಿ ಕರೆದುಕೊಂಡು ಹೋಗುತ್ತಾರೆ.

ಬಿದಿಗೆಯ ದಿನದಂದು ಎರಡು ದೈವಗಳಿಗೆ ವಿಶೇಷ ಪೂಜೆ ಇರುತ್ತದೆ. ದೇವರ ಉತ್ಸವ ಮೂರ್ತಿಯನ್ನು ನವಿಲಿನ ಮೇಲೆ ಕೂರಿಸಿಕೊಂಡು ಮೆರವಣಿಗೆಯ ಮೂಲಕ ಪಾದಗಳನ್ನು ದೇವಸ್ಥಾನದವರೆಗೆ ಬೆಳಗಿನ ಜಾವ ಮತ್ತು ಸಾಯಂಕಾಲ ತೆಗೆದುಕೊಂಡು ಹೋಗಿ ಬರುತ್ತಾರೆ. ಆ ದಿನ ನವಿಲು ವಾಹನದ ಉತ್ಸವವಾಗಿರುತ್ತದೆ. ತದಿಗೆಯ ದಿನ ದೇವಸ್ಥಾನದಲ್ಲಿ ಅನ್ನ ಬಲಿ ಕೊಡುವುದು ಮತ್ತು ಉತ್ಸವ ಕಾರ್ಯಗಳು ಇರುತ್ತವೆ. ಇದಾದ ಮೇಲೆ ದೇವರ ಉತ್ಸವ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಪಾದಗಟ್ಟೆ ದೇವಸ್ಥಾನದವರೆಗೆ ಮೆರವಣಿಯಲ್ಲಿ ಹೊರಡುತ್ತಾರೆ. ಅಲ್ಲಿಗೆ ಹೋಗಿ ಬಂದ ಮೇಲೆ ದೇವಸ್ಥಾನದಲ್ಲಿ ಉತ್ಸವ ಮೂರ್ತಿಗೆ ಪೂಜೆ ಮಂಗಳಾರತಿ ಮಾಡಿ ಅಂದಿನ ದೇವತಾಕಾರ್ಯವನ್ನು ಮುಗಿಸುತ್ತಾರೆ.

ಜಾತ್ರೆಯ ದಿನದಂದು ಸಿಂಹೋತ್ಸವ ಜರುಗುತ್ತದೆ. ಅಂದಿನ ದಿನ ಪ್ರತಿ ದಿನ ನಡೆದಂತೆ ದೇವರ ಪಲ್ಲಕ್ಕಿ ಉತ್ಸವ ಜರುಗುತ್ತದೆ.

ಪಂಚಮಿಯ ದಿನ ನಾಗರೋತ್ಸವ ಮಾಡಲಾಗುತ್ತದೆ. ಷಷ್ಠಿಯ ದಿನದಂದು ಹನುಮಂತೋತ್ಸವ ಜರುಗುತ್ತದೆ. ಪ್ರತಿದಿನದಂತೆ ಷಷ್ಠಿಯ ದಿನವು ದೇವರ ಉತ್ಸವ ಮೂರ್ತಿಯನ್ನು ಪಾದಗಟ್ಟೆ ದೇವಸ್ಥಾನದವರೆಗೆ ತೆಗೆದುಕೊಂಡು ಹೋಗಿ ಬರುತ್ತಾರೆ. ಆದಿನ ರಾತ್ರಿ ರಾಮಸೀತೆಯರ ನಿಶ್ಚಿತಾರ್ಥ ಮಾಡುತ್ತಾರೆ. ಜನಪದರು ತಾವು ಮಾಡುವ ವಿವಾಹದ ನಿಶ್ಚಿತಾರ್ಥದ ರೀತಿಯಲ್ಲಿಯೇ ರಾಮಸೀತೆಯರ ನಿಶ್ಚಿತಾರ್ಥವನ್ನು ಮಾಡುತ್ತಾರೆ. ರಾಮನ ಕಡೆ ಕೆಲವರು ಸೀತೆಯ ಕಡೆ ಕೆಲವರು ಹೀಗೆ ಎರಡು ರೀತಿ ಗುಂಪುಗಳಾಗಿ ಇರುತ್ತಾರೆ. ಹೆಣ್ಣಿನ ಕಡೆಯವರು ಗಂಡಿನ ಕಡೆಯವರು ತಾಂಬೂಲವನ್ನು ಬದಲಾಯಿಸಿಕೊಳ್ಳುತ್ತಾರೆ. ನಂತರ ವಿವಾಹವನ್ನು ನಿಶ್ಚಯ ಮಾಡುತ್ತಾರೆ. ಈ ದೇವತಾ ಕಾರ್ಯಕ್ಕೆ ಊರಿನ ಎಲ್ಲ ವರ್ಗದವರು ಅಲ್ಲಿ ನೆರೆದಿರುತ್ತಾರೆ.

ವಿವಾಹ ನಿಶ್ಚಯವಾದ ಮೇಲೆ ಅಲ್ಲಿಯ ಜನಪದರಿಗೆಲ್ಲಾ 'ಚರುಪು' ಅಂದರೆ ಚಿತ್ರಾನ್ನವನ್ನು ಹಂಚುತ್ತಾರೆ. ಆ ದಿನ ಬೆಳಗಿನ ಜಾವದ ಉತ್ಸವ ಸಮಯದಲ್ಲಿ ಊರಿನ ವೈಶ್ಯ (ಶೆಟ್ಟರು) ಸಮುದಾಯದವರು ಉತ್ಸವದ ಎರಡು ಬದಿಯಲ್ಲಿ ಸಾಲಾಗಿ ನಿಂತು, ಕರ್ಪೂರದ ಹಿಲಾಲುಗಳನ್ನು ಹಿಡಿದಿರುತ್ತಾರೆ. ಈ ಹಿಲಾಲಿನ ಬೆಳಕಿನಲ್ಲಿಯೇ ಉತ್ಸವ ಹೊರಡುತ್ತದೆ.

ಬೆಳಗಿನ ಜಾವದ ತಂಪಾದ ವಾತಾವರಣದ ಮುಸುಗತ್ತಲಿನಲ್ಲಿ ಈ ಹಿಲಾಲುನಲ್ಲಿನ ಕರ್ಪೂರ ಕೊಬ್ಬರಿಯ ದೀಪ ಉರಿಯುತ್ತಿರುವ ದೃಶ್ಯ ಮನಸ್ಸಿಗೆ ಉಲ್ಲಾಸವನ್ನು ಕಣ್ಣಿಗೆ ಕಾಂತಿಯನ್ನು ನೀಡುತ್ತದೆ.

ಸಪ್ತಮಿಯ ದಿನ ಗರುಡೋತ್ಸವ ಇರುತ್ತದೆ. ಈ ಗರುಡೋತ್ಸವ ಆದ ನಂತರ ಸ್ವಾಮಿಯ ವಿವಾಹ ಕಾರ್ಯ ಇರುತ್ತದೆ. ಈ ವಿವಾಹ ಕಾರ್ಯ ರಾತ್ರಿ ವೇಳೆಯಲ್ಲಿ ನಡೆಯುತ್ತದೆ. ಈ ಕಾರ್ಯವನ್ನು ನೋಡಲು ಸಾಕಷ್ಟು ಸಂಖ್ಯೆಯಲ್ಲಿ ಗಂಡಸರು – ಹೆಂಗಸರು ಹಿರಿಯರು–ಕಿರಿಯರು ಮತ್ತು ಎಲ್ಲ ವರ್ಗದ ಜನರು ನೆರೆದಿರುತ್ತಾರೆ.

ಆ ರಾತ್ರಿ ರಾಮ ಮತ್ತು ಸೀತೆ ವಿವಾಹ ಕಾರ್ಯ ನೆರೆವೇರಿಸುತ್ತಾರೆ. ರಾಮ ಮತ್ತು ಸೀತೆಯರ ಉತ್ಸವ ಮೂರ್ತಿಗಳನ್ನು ದೇವಸ್ಥಾನದ ಮುಂದೆ ಇರುವ ಕಟ್ಟೆಯ ಮೇಲೆ ಇಟ್ಟು ವಿವಾಹ ಕಾರ್ಯವನ್ನು ನೆರೆವೇರಿಸುತ್ತಾರೆ.

ಜನಪದರು ತಾವು ಮಾಡುವ ವಿವಾಹದಂತೆ ಈ ದೇವರುಗಳ ವಿವಾಹವನ್ನು ಮಾಡುತ್ತಾರೆ. ಗಂಡಿನ ಕಡೆಗೆ ಕೆಲವರು–ಹೆಣ್ಣಿನ ಕಡೆಗೆ ಕೆಲವರು ಮತ್ತು ಆ ಕಾರ್ಯವನ್ನು ನೋಡುವವರು ಹೀಗೆ ವಿಧವಾಗಿ ಜನರು ದೇವತಾ ಕಾರ್ಯವನ್ನು ಮಾಡುತ್ತಾರೆ.

ಈ ದೇವರ ಲಗ್ನವಾದ ಮೇಲೆ ದೇವಸ್ಥಾನದ ಗೋಪುರದ ಕಲಶದ ಪೂಜೆ ಮಡುತ್ತಾರೆ. ಅಂದೇ ಜೋಡು ತೇರುಗಳಿಗೆ ಕೂಡ ಕಲಶಗಳನ್ನು ಏರಿಸಿ ಪೂಜೆ ಮಾಡುತ್ತಾರೆ.

ಮರುದಿನ ಅಷ್ಟಮಿ. ಆ ದಿನ ದಂಡ ಬಲಿ. ಬಿಳಿ ಆನೆ ಉತ್ಸವ ಮಾಡುತ್ತಾರೆ. ಬಿಳಿ ಆನೆಯ ಮೇಲೆ ದೇವರ ಉತ್ಸವ ಹೊರಡಿಸುತ್ತಾರೆ.

ಅಂದು ಎರಡು ದೈವಗಳಿಗೆ 'ಮೂಕ ಬಲಿ'ಯನ್ನು ನೀಡಲಾಗುತ್ತದೆ. ಮೂಕ ಬಲಿ ಅಂದರೆ ಮೂಕವಾಗಿ ಬಲಿ ನೀಡುವುದು. ಯಾವುದೇ ಮಂತ್ರಗಳನ್ನು ಓದದೆಯೇ ಬಲಿಯನ್ನು ನೀಡಲಾಗುತ್ತದೆ. ಮೂಕ ಬಲಿ ಉತ್ಸವಕ್ಕಾಗಿ ಬೇರೆಯೇ ಆಂಜನೇಯನ ಉತ್ಸವ ಮೂರ್ತಿ ಇದೆ. ಅದನ್ನು 'ಮೂಕಾಂಜನೇಯ ಮೂರ್ತಿ' ಎಂದು ಕರೆಯುತ್ತಾರೆ.

ನವಮಿ ದಿನದಂದು ರಥೋತ್ಸವ ಇರುತ್ತವೆ.

## ರಥೋತ್ಸವ :

ತೇರು: ತೇರಿಗೆ –ಬಂಡಿ, ಕುರ್ಜು ವಾನ್ಯೆರುವು ಎಂಬ ಹೆಸರುಗಳಿವೆ. ತೇರು ಎನ್ನುವುದು ದ್ರಾವಿಡ ಶಬ್ದ, ತೇರಿನ ವಿವರಗಳಲ್ಲಿ ಚಕ್ರ (ಗಾಲಿ), ಅಲಂಕಾರವ ಶಿಖರ, ಕಲಶಗಳಿದ್ದು, ಗೋಪುರಾಕಾರದ ಶೈಲಿಯ ರಥ.

ರಥಕ್ಕೆ ಕಾರ್ಜು ಎಂಬ ಪದವು ಇದೆ. ರಾಜರು, ವಿಗ್ರಹ, ವಧುವರರು, ಕೂರುವ ಮಂಟಪ, ಅಟ್ಟಳೆ, ರಾಶಿ, ಗುಡ್ಡ, ಬಟ್ಟಲು, ಎಂಬರ್ಥಗಳಿವೆ. ಇದು ಸಹ ದ್ರಾವಿಡ ಪದ ಆಗಿವೆ.

ರಥವೆಂದರೆ ಸಾಮಾನ್ಯವಾಗಿ ನಾವು ಏರಿ ಹೋಗುವ ವಾಹನ. ಆದರೆ 'ತೇರು' ಪದದ ಮೂಲಅರ್ಥದಲ್ಲಿ ಆಟವಾಡುವುದು, ಸಂತೋಷ ಪಡುವುದು ಎಂಬುದಾಗಿದೆ. ಜಾತ್ರೆಯಲ್ಲಿ ಎಳೆಯಲಾಗುವ ತೇರು, ವಲಸೆಗಾರರ ಪೆಟ್ಟಿಗೆ ಕ್ರಿಯೆ ಒಯ್ಯುವ ಕ್ರಿಯೆಯನ್ನು ಧ್ವನಿಸುತ್ತದೆ. ಮೊದಲು ಮೂಲ ದೇವತೆಯನ್ನು ಕೊಂಡೊಯ್ಯಲಾಗುತ್ತಿತ್ತು. ಸ್ಥಾವರಗೊಂಡ ನಂತರ ಉತ್ಸವ ಮೂರ್ತಿಯನ್ನು ತೇರಿನಲ್ಲಿ ಇಟ್ಟು ಎಳೆಯುವ ಪದ್ಧತಿ ಬೆಳೆಯಿತು. ಈ ಹಂತದಲ್ಲಿ ತೇರು ವೈಭವೋತ್ಸವಾಗಿ ಪರಿಷ್ಕಾರಗೊಂಡಿತು.

ಹಳ್ಳಿಗರು ಆರಾಧ್ಯ ದೇವತೆಯನ್ನು ಉತ್ಸವ ಮೂರ್ತಿಯ ರೂಪದಲ್ಲಿ ಹಳ್ಳಿಯಲ್ಲಿ ಸಂಚರಿಸುವುದುಂಟು. ಅದರ ಪ್ರಕಾರ ಚಿಕ್ಕವರು, ವಯೋವೃದ್ಧರು ಅನಾರೋಗ್ಯವಂತರಿಗೆ ದೇವರ ದರ್ಶನಕ್ಕಾಗಿ ದೇವಾಲಯಕ್ಕೆ ಹೋಗುವುದು ಆಗದ್ದರಿಂದ ವರ್ಷಕ್ಕೊಮ್ಮೆಯಾದರೂ ದೇವರ ದರ್ಶನ ಪಡೆಯುವುದಕ್ಕಾಗಿ ಹಳ್ಳಿಯ ಒಳಗೆ ದೇವರು ಸುತ್ತಾಡಿದರೆ ಹಳ್ಳಿಗೆ ಒಳ್ಳೆಯದಾಗುವುದು ಎಂಬ ಪ್ರಾಚೀನ ಕಲ್ಪನೆಯಿಂದ ರಥೋತ್ಸವದ ಕಲ್ಪನೆ ಉಂಟಾಗಿರಬೇಕು.

ತೇರು ನಾಲ್ಕು ಗಾಲಿ ಜೋಡಿಸಿದ ದೇವಾಲಯದಂತೆ ಇರುವುದು, ದೇವಾಲಯದ ವಿವಿಧ ಭಾಗಗಳನ್ನು ಅದರಲ್ಲಿ ಗುರುತಿಸಬಹುದು, ದೇವಾಲಯದ ಗೋಪುರದಂತೆ ಎತ್ತರಿಸಿ ಅದರಲ್ಲಿ ಪತಾಕೆ, ಪಟಗಗಳನ್ನು ಅಲಂಕರಿಸುವರು, ಒಳಗೆ ಕಂಬಗಳನ್ನು ರಚಿಸುವರು, ಮೇಲೆ ಕಂಚು–ಹಿತ್ತಾಳೆಯ ಕಳಸವನ್ನು ತುದಿಯಲ್ಲಿ ಶೃಂಗರಿಸಿರುವರು. ಗಾಲಿಗಳನ್ನು ಕಟ್ಟಿಗೆ ಅಥವಾ ಕಲ್ಲುಗಳಿಂದ ರಚಿಸಿರುತ್ತಾರೆ. ತೇರುಗಳನ್ನು ಕಂಚು, ಹಿತ್ತಾಳೆ, ಬೆಳ್ಳಿ, ಬಂಗಾರದಿಂದಲೂ ರಚಿಸುವರು.

ಮರಿಯಮ್ಮನಹಳ್ಳಿಯ ಲಕ್ಷ್ಮೀನಾರಾಯಣ ಮತ್ತು ಆಂಜನೇಯಸ್ವಾಮಿಯ ರಥೋತ್ಸವಗಳು ಶ್ರೀರಾಮ ಮತ್ತು ಸೀತೆಯರ ಮದುವೆ ಮೆರವಣಿಗೆಯ ರೂಪದಲ್ಲಿ ನಡೆಯುತ್ತವೆ.

ಈ ಎರಡು ದೈವಗಳ ರಥಗಳು ಸುಮಾರು ೪೦೦ ವರ್ಷಗಳಷ್ಟು ಹಿಂದಿನವು. ಈ ರಥಗಳನ್ನು ಮಾಡಿಸಿದವರು ಹರಪನಹಳ್ಳಿ ಪಾಳೇಗಾರರಲ್ಲಿ ಪ್ರಸಿದ್ಧನಾದ ಸೋಮಶೇಖರ ನಾಯಕನ ಮಡದಿ ಸೋಮಮ್ಮಾಜಿ. ಈಕೆಯ ಗಂಡ ತೀರಿಕೊಂಡ ನಂತರ ಪುತ್ರ ಸಂತಾನವಿಲ್ಲದೆ ಈಕೆ ದತ್ತು ಪುತ್ರನನ್ನು ತೆಗೆದುಕೊಂಡು ತಾನೆ ರಾಜ್ಯದ ಆಡಳಿತ ನಡೆಸಿದಳು. ತನ್ನ ಆಡಳಿತದಲ್ಲಿ

ತಾನು ಮಾಡಿದ ಅನೇಕ ಪಾಪ ಹತ್ಯೆಗಳ ಪರಿಹಾರಕ್ಕಾಗಿ "ಹಂಪೆಯ ವಿರುಪಾಕ್ಷಸ್ವಾಮಿಗೆ ಮತ್ತು ನಾರಾಯಣದೇವರ ಕೆರೆಯ ಶ್ರೀ ಭೂನಾರಾಯಣ ಮತ್ತು ಆಂಜನೇಯ ಸ್ವಾಮಿಗೆ ಜೋಡು ರಥಗಳನ್ನು ಮಾಡಿಸಿ ಅರ್ಪಿಸಿದಳು. ಅಂದಿನಿಂದ ಇಂದಿನವರೆಗೆ ರಥದ ಉತ್ಸವ ನೆಡೆದು ಕೊಂಡುಬಂದಿದೆ. ೧೯೫೩ರಲ್ಲಿ ತುಂಗಾಭದ್ರೆ ನದಿಗೆ ಸರಕಾರ ಅಣೆಕಟ್ಟು ಕಟ್ಟಿದ ಮೇಲೆ ನಾರಾಯಣ ದೇವರ ಕೆರೆ ಮತ್ತು ಸುತ್ತ ಮುತ್ತಲಿನ ೯೩ ಹಳ್ಳಿಗಳು ಈ ಅಣೆಕಟ್ಟಿನಲ್ಲಿ ಮುಳುಗಡೆಯಾದವು.

ನಾರಾಯಣ ದೇವರಕೆರೆಯ ಜನರೆಲ್ಲಾ ಮರಿಯಮ್ಮನಹಳ್ಳಿಗೆ ವಲಸೆ ಬಂದರು ಜೊತೆಗೆ ಎರಡು ದೈವಗಳ ವಿಗ್ರಹಗಳನ್ನು ತಂದು ಮರಿಯಮ್ಮನಹಳ್ಳಿಯಲ್ಲಿ ಪ್ರತಿಷ್ಠಾಪನೆ ಮಾಡಿದರು ನಾರ್ಾಯಣ ದೇವರ ಕೆರೆಯಿಂದ ಆ ದೈವಗಳ ರಥಗಳನ್ನೂ ತೆಗೆದುಕೊಂಡು ಬಂದರು. ಅಲ್ಲಿ ನಡೆಸುತ್ತಿದ್ದ ಜಾತ್ರೆಯ ಉತ್ಸವವನ್ನು ಇಲ್ಲಿ ಕೂಡ ಆಚರಿಸಿಕೊಂಡು ಬಂದಿದ್ದಾರೆ. ಈ ರಥಗಳ ಗಾಲಿ (ಚಕ್ರ)ಗಳನ್ನು ಮಾತ್ರ ಬದಲಾಯಿಸುತ್ತ ಬಂದಿದ್ದಾರೆ.

ನವಮಿಯ ದಿನದಂದು ಊರಿನ ಮುಖ್ಯ ಬೀದಿಯಲ್ಲಿ ನಿಲ್ಲಿಸಲಾದ ಎರಡು ರಥಗಳ ನಡುವೆ ಇರುವ ಸ್ಥಳವನ್ನು ಸ್ವಚ್ಛ ಮಾಡುತ್ತಾರೆ. ರಥೋತ್ಸವಕ್ಕೆ ವಿಘ್ನ ಬಾರದಂತೆ 'ರಥಾಂಗ ಹೋಮ' ಮಾಡುತ್ತಾರೆ. ಬ್ರಹ್ಮೋತ್ಸವ ಮತ್ತು ರಥಾರೋಹಣ ಕಾರ್ಯವನ್ನು ಬ್ರಾಹ್ಮಣರ ಸಮ್ಮುಖದಲ್ಲಿ ನೆರವೇರಿಸುತ್ತಾರೆ. ಅಂದು ಎರಡು ದೈವಗಳಿಗೆ ವಿಶೇಷವಾದ ಅಲಂಕಾರದ ಪೂಜೆ ಮಾಡಿರುತ್ತಾರೆ. ಆಭರಣದಿಂದ ಅಲಂಕರಿಸಿ ಪೂಜೆ ಮಾಡುತ್ತಾರೆ.

ಈ ದೈವಗಳ ಅಸಂಖ್ಯಾತ ಭಕ್ತರುಗಳು ದೇವಸ್ಥಾನಕ್ಕೆ ಬಂದು ಪೂಜೆ ಮಂಗಳಾರತಿ ಮಾಡಿಸಿ ಹೋಗುತ್ತಾರೆ. ಮಧ್ಯಾಹ್ನ ರಾಮ, ಸೀತೆ, ಲಕ್ಷ್ಮಣ ಮತ್ತು ಆಂಜನೇಯ ಸ್ವಾಮಿಗಳ ಚಿತ್ರವಿರುವ ಪಟವನ್ನು (ದೇವರ ಧ್ವಜಾ) ಹವಾಲ್ದಾರ್ ಶ್ರೀನಿವಾಸರಾವ್ ಅವರ ಮನೆಯಿಂದ ವಾದ್ಯಗಳ ಸಮೇತ ತರುತ್ತಾರೆ. ಈ ದೈವಗಳ ಪಟವನ್ನು ಇವರು ಸುಮಾರು ೩೫-ವರ್ಷಗಳಿಂದ ಬರೆಯುತ್ತ ಬಂದಿದ್ದಾರೆ.

ರಥೋತ್ಸವದ ಸಂದರ್ಭದಲ್ಲಿ ಈ ಪಟ (ದೇವರಧ್ವಜ)ವನ್ನು ಹರಾಜು ಹಾಕುತ್ತಾರೆ. ಹರಾಜಿನಲ್ಲಿ ಬಂದ ಹಣವನ್ನು ದೈವಗಳ ಸೇವೆಗೆ ವಿನಿಯೋಗಿಸುತ್ತಾರೆ.

ಸಾಯಂಕಾಲ ಈ ದೈವಗಳ ರಥೋತ್ಸವ ನಡೆಯುತ್ತದೆ. ರಾಮ-ಸೀತೆ, ಲಕ್ಷ್ಮಣ ಮತ್ತು ಆಂಜನೇಯ ಸ್ವಾಮಿಯ ಉತ್ಸವ ಮೂರ್ತಿಗಳನ್ನು ಪಲ್ಲಕ್ಕಿಯಲ್ಲಿ ವಾದ್ಯಗಳ ಸಮೇತ ಮೆರವಣಿಗೆಯಲ್ಲಿ ರಥಗಳು ಇರುವ ಸ್ಥಳಕ್ಕೆ ತೆಗೆದುಕೊಂಡು ಹೋಗುತ್ತಾರೆ.

ಈ ಎರಡು ದೈವಗಳ ಉತ್ಸವ ಮೂರ್ತಿಗಳಲ್ಲಿ ಮೊದಲನೇ ರಥದಲ್ಲಿ ರಾಮ, ಸೀತೆ, ಲಕ್ಷ್ಮಣರ ಉತ್ಸವ ಮೂರ್ತಿಯನ್ನು ಮತ್ತು ಎರಡನೇ ರಥದಲ್ಲಿ ಆಂಜನೇಯ ಉತ್ಸವ ಮೂರ್ತಿಯನ್ನು ಕೂಡಿಸುತ್ತಾರೆ. ರಾಮ, ಸೀತೆ, ಲಕ್ಷ್ಮಣ ಮತ್ತು ಆಂಜನೇಯ ಸ್ವಾಮಿಯ ಚಿತ್ರವಿರುವ ಪಟ(ದೇವರ ಧ್ವಜ)ವನ್ನು ಹರಾಜು ಹಾಕುತ್ತಾರೆ. ನಂತರ ಈ ದೈವಗಳ ಅರ್ಚಕರು ಉತ್ಸವ

ಮೂರ್ತಿಗಳಿಗೆ ಮಂಗಳಾರತಿ ಮಾಡುತ್ತಾರೆ. ಮೊದಲಿಗೆ – ಲಕ್ಷ್ಮಿನಾರಾಯಣ ಸ್ವಾಮಿಯ ರಥವನ್ನು ಮಿಣಿ(ಹಗ್ಗ)ಗಳನ್ನಿಡಿದು ರಥವನ್ನು ಎಳೆಯುತ್ತಾರೆ. ಪೂರ್ವಕ್ಕೆ ಇರುವ ಪಾದಗಟ್ಟೆ ದೇವಸ್ಥಾನದವರೆಗ ರಥವನ್ನು ಎಳೆಯುತ್ತಾರೆ. ನಂತರ ಆಂಜನೇಯ ಸ್ವಾಮಿಯ ರಥವನ್ನು ರಾಮನ ರಥ ಇರುವ ಸ್ಥಳದವರೆಗೆ ಎಳೆಯುತ್ತಾರೆ. ಹೀಗೆ ಜನಪದರು ರಥವನ್ನು ಎಳೆಯುವಾಗ- ನೆರೆದಿರುವಂತ ಸಾವಿರಾರು ಜನರು – ಹೂ-ಹಣ್ಣುಗಳನ್ನು ರಥಗಳಿಗೆ ಎಸೆಯುತ್ತಿರುತ್ತಾರೆ. ಈ ತರಹ ಹೂಹಣ್ಣು ಎಸೆಯುವುದು- ಮದುವೆಯಾಗಿ ವಧುವರರನ್ನು ಮೆರವಣಿಗೆಯಲ್ಲಿ ಅಕ್ಷತೆಯನ್ನು ಹಾಕುವುದರ ಮೂಲಕ ಕರೆತರುವುದರ ಸಂಕೇತವಾಗಿದೆ. ಹೂ-ಬಾಳೇಹಣ್ಣು ಜೊತೆ ಉತತ್ತಿ, ರಥದ ಗಾಲಿಗೆ ಕಾಯಿಯನ್ನು ಒಡೆಯುವರು ರಥವನ್ನು ಎಳೆಯುವಾಗ ರಥವು ಸರಿಯಾಗಿ ಹೋಗುವ ಹಾಗೆ ಹಿಂದಿನಿಂದ-ನಾಯಕರು. ಹರಿಜನರು ಸನ್ನೆಯನ್ನು ಹಾಕುತ್ತಾರೆ.

ಪಾದಗಟ್ಟೆ ದೇವಸ್ಥಾನದ ಹತ್ತಿರ ರಥಗಳು ನಿಂತಾಗ ಅಲ್ಲಿ ಅ ದೇವರಿಗೆ ಮಂಗಳಾರತಿ ಮಾಡಿ ನಂತರ ರಥಗಳನ್ನು ಮೂಲ ಸ್ಥಳಕ್ಕೆ ಅಂದರೆ ಪಶ್ಚಿಮಾಭಿಮುಖಕ್ಕೆ ಆಂಜನೇಯ ಸ್ವಾಮಿ ರಥವನ್ನು ಎಳೆಯುತ್ತಾರೆ. ಆ ಮೇಲೆ ಲಕ್ಷ್ಮೀನಾರಾಯಣ ಸ್ವಾಮಿಯ ರಥವನ್ನು ಅವರ ಮೂಲ ಸ್ಥಳದ ಹತ್ತಿರ ಎಳೆಯುತ್ತಾರೆ. ನಂತರ ಈ ದೈವಗಳ ಉತ್ಸವ ಮೂರ್ತಿಗಳನ್ನು ಗರ್ಭ ಗುಡಿಗೆ ವಾದ್ಯಗಳ ಸಮೇತ ತೆಗೆದುಕೊಂಡು ಬರುತ್ತಾರೆ.

ರಥೋತ್ಸವ ನಡೆಯುವಾಗ ಸಾವಿರಾರು ಜನಪದರು ನೆರೆದಿರುತ್ತಾರೆ. ಮನೆಯ ಮೇಲೆ, ಜಗುಲಿ ಮೇಲೆ, ಮರಗಳ ಮೇಲೆ ಹತ್ತಿ ಕುಳಿತು ಸ್ವಾಮಿಯ ರಥೋತ್ಸವನ್ನು ನೋಡುತ್ತಿರುತ್ತಾರೆ. ರಥ ಎಳೆಯುವ ಚಿತ್ರವು ಭಕ್ತಿಯ ಮಹಾಪುರವೇ ಆಗಿರುತ್ತದೆ. ಈ ದೃಶ್ಯವನ್ನು ನೋಡಲು ಎರಡು ಕಣ್ಣು ಸಾಲಾದಾಗಿರುತ್ತದೆ.

**ಬ್ಯಾಟಿಗಿಡ ಉತ್ಸವ :**

ಬ್ಯಾಟಿಗಿಡ ಉತ್ಸವ ರಥೋತ್ಸವ ಆಗಿ ಮೂರುದಿನ ಆಚರಿಸುತ್ತಾರೆ. ಈ ಉತ್ಸವ ಮೊದಲಿನಿಂದಲೂ ನಡೆದು ಬಂದಿದೆ. ಪುರಾಣದಲ್ಲಿ ಆಂಜನೇಯನು 'ಸಂಜೀವಿನಿ ಗಿಡ' ತಂದುದರ ಸಂಕೇತವಾಗಿದೆ. ಈ ಉತ್ಸವ ಎಂದು ಆರಂಭವಾಯಿತು ಎಂಬುದಕ್ಕೆ ನಮಗೆ ಆಧಾರ ಸಿಗುವುದಿಲ್ಲ ಬ್ಯಾಟಿಗಿಡಕ್ಕೆ 'ಮೂರು ಮುಖದ ಕಾರಿ ಮುಳ್ಳಿನ ಗಿಡ' ಎಂದು ಕರೆಯುತ್ತಾರೆ.

ಬ್ಯಾಟಿಗಿಡವನ್ನು ಅವರು ಪೂರ್ವ ದಿಕ್ಕಿನಿಂದ ತರುತ್ತಾರೆ. ಅವರು ಬ್ಯಾಟಿಗಿಡವನ್ನು ತರುವ ಹಿಂದಿನ ದಿನ ಗಿಡವನ್ನು ಪೂಜೆ ಮಾಡಿ ಅದರ ಸುತ್ತಲೂ ಆಗೆದು ಮೂಲ ಬೇರನ್ನು ಮಾತ್ರ ಬಿಟ್ಟು ಅದಕ್ಕೆ ನೀರು ಹಾಕಿ ಬಂದಿರುತ್ತಾರೆ. ಈ ಗಿಡವನ್ನು ಬ್ಯಾಟೇರು ಮನೆತನದವರು ಮಾರುತಿ ಉತ್ಸವ ಮೂರ್ತಿಯೊಂದಿಗೆ ವಾದ್ಯ ಸಮೇತ ಪಲ್ಲಕ್ಕಿಯಲ್ಲಿ ಬ್ಯಾಟಿಗಿಡ ಇರುವ ಸ್ಥಳಕ್ಕೆ ಹೋಗಿ ಗಿಡವನ್ನು ತೆಗೆದುಕೊಂಡು ಬರುತ್ತಾರೆ. ನಂತರ ಅವರು ಮೆರವಣಿಗೆ ಮೂಲಕ ಅವರು ದೇವಸ್ಥಾನಕ್ಕೆ

ಬಂದು ಮೂರು ಸಲ ಪ್ರದಕ್ಷಿಣೆ ಹಾಕುತ್ತಾರೆ. ದೈವಗಳಿಗೆ ಪೂಜೆ ಸಲ್ಲಿಸಿ ಆ ಬ್ಯಾಟಿಗಿಡವನ್ನು ದೇವಸ್ಥಾನದ ಹಿಂದೆ ಇಡುತ್ತಾರೆ.

**ಕಡುಬಿನ ಕಾಳಗ :**

ದಶಮಯ ದಿನದ ರಾತ್ರಿ ಕಡುಬಿನ ಕಾಳಗ ಆಡುತ್ತಾರೆ. 'ಕಡುಬಿನ ಕಾಳಗವನ್ನು', 'ಒಲವಿನ ಕಾಳಗ' ಎಂದು ಕೂಡ ಕರೆಯುತ್ತಾರೆ. ಬೇಟೆಗೆಂದು ಹೋಗಿ ಬಂದ ಶ್ರೀರಾಮಚಂದ್ರನಿಗೂ ಹಾಗೂ ಸೀತಮಾತೆಯ ನಡುವೆ ನಡೆಯುವ ಚಮತ್ಕಾರದ ವಾದ ವಿವಾದವೇ ಈ 'ಕಡುಬಿನ(ಒಲವಿನ) ಕಾಳಗದ' ತಿರುಳಾಗಿದೆ.

ರಾಮನು ಬೇಟೆಗೆ ಹೋಗುವಾಗ ಸೀತೆಗೆ ಯಾರು ಬಂದರೂ ಬಾಗಿಲನ್ನು ತೆಗೆಯಬೇಡ ಎಂದು ಹೇಳಿ ಹೋಗಿರುತ್ತಾನೆ. ಇಲ್ಲಿ ಜನ ಸಾಮಾನ್ಯರೆ ಉತ್ಸವನದಲ್ಲಿ ಭಾಗವಹಿಸುತ್ತಾರೆ. ರಾಮನ ಪರವಾಗಿ ಪುರುಷರು, ಸೀತೆಯ ಪರವಾಗಿ ಮಹಿಳೆಯರು ಮಾತನಾಡುತ್ತಾರೆ.

ಶ್ರೀ ರಾಮನು ಬೇಟೆಯಿಂದ ಬಂದಾಗ ಬಹಳ ಹೊತ್ತು ಆಗಿರುತ್ತದೆ. ದೇವಸ್ಥಾನದ ಬಾಗಿಲು ಹಾಕಿದಾಗ ಬಾಗಿಲು ತೆಗೆ ಎಂದು ರಾಮನ ಕಡೆಯವರು ಹೇಳುತ್ತಾರೆ. ಆದರೆ ಸೀತೆಯ ಕಡೆಯವರು ಶ್ರೀರಾಮಚಂದ್ರ ಬಂದರು ಬಾಗಿಲು ತೆಗೆಯ ಬೇಡ ಎಂದು ಹೇಳಿದ್ದಾಳೆ ಈಗಾಗಲೇ ಬಹಳ ಹೊತ್ತು ಆಗಿದೆ ಬಾಗಿಲು ತೆಗೆಯುದಿಲ್ಲ ಎಂದು ಹೇಳುತ್ತಾರೆ.

ಒಂದು ಕಡೆ ರಾಮನ ಪಲಕ್ಕಿಯನ್ನು ಹೊತ್ತ ಗಂಡಿನವರು ಇನ್ನೊಂದು ಕಡೆ ಬಾಗಿಲು ಹಾಕಿಕೊಂಡು ಕಟ್ಟೆಯ ಮೇಲೆ ಕುಳಿತ ಹೆಣ್ಣಿನವರು. ಗಂಡಿನವರು ನಾವು ಬಂದಿದ್ದೇವೆ ಬಾಗಿಲು ತೆಗೆಯಿರಿ ಎಂದು ಹೇಳಿದಾಗ ಹೆಣ್ಣಿನ ಕಡೆಯವರು ಯಾರು ಎಂದು ಹೆಸರು ಹೇಳಿ ಎನ್ನುತಾರೆ. ಆಗ ಗಂಡಿನವರು ಈ ರೀತಿ ಹೇಳುತ್ತಾರೆ.

ವಸಂತ ಬಂದಾನ: ರಾಮನ ಕಡೆಯವರು "ವಸಂತ ಮಾಧವ, ಬಂದಿಹೆನು ಬಾಗಿಲು ತೆಗೆಯೇ" ಎಂದು ಹೇಳುತ್ತಾರೆ. ಆಗ ಹೆಣ್ಣಿನ ಕಡೆಯವರು. "ಒಹೋ ವಸಂತ ಮಾದವನೆಂದರೆ ಅಡವಿ ಚಂದ್ರನಾದ ನಿನಗೆ ಅರಮನೆಯಲ್ಲಿ ಪ್ರವೇಶವಿಲ್ಲ ಮುಂದೆ ನಡೆಯೋ ಮಾಧವ" ಎನ್ನುತ್ತಾರೆ.

ಚಕ್ರಧಾರಿ ಬಂದಿಹೇನು: ರಾಮನ ಕಡೆಯವರು 'ಚಕ್ರಧಾರಿ ಬಂದಿಹೇನು ಬಾಗಿಲು ತೆಗೆ' ಎನ್ನುತ್ತಾರೆ. ಸೀತೆಯ ಕಡೆಯವರು ವ್ಯಂಗ್ಯವಾಗಿ 'ಸರಿ ಚಕ್ರಪಾಣಿ ಎಂದರೆ ಕುಂಬಾರನಾದೆ. ನೀನು ಹಾದಿ ತಪ್ಪಿ ಅರಮನೆಗೇಕೆ ಬಂದೆ, ನಿನಗೆ ಅರಮನೆ ಎಂಬ ಕಲ್ಪನೆ ಜ್ಞಾನವೂ ಇಲ್ಲದೆ ಹೋಯಿತೆ ಎಂದು ಚಟಾಕಿ ಹಾರಿಸುತ್ತಾರೆ.

ಜನಾರ್ದನ ಬಂದಾನ ಎಂದು ರಾಮನ ಕಡೆಯವರು ಹೇಳಿದಾಗ ಸೀತೆ ಕಡೆಯವರು ಜನಾರ್ಧನ ಅಂದರೆ ಯಮ, ಇಲ್ಲಿ ಯಾರಿಗೂ ಕಷ್ಟವಿಲ್ಲ. ಎಲ್ಲರೂ ಚೆನ್ನಾಗಿದ್ದೇವೆ. ಯಮನಿಗೆ ಕೆಲಸವಿಲ್ಲ. ಸ್ಮಶಾನಕ್ಕೆ ಹೋಗು ಎನ್ನುತ್ತಾರೆ.

ಗೋಪಾಲ ಬಂದಾನ ಎಂದು ಹೇಳಿದಾಗ ಸೀತೆ ಕಡೆಯವರು 'ದನ ಕಾಯುವನಿಗೆ ಇಲ್ಲಿ ಕೆಲಸವಿಲ್ಲ. ದನದಾಹಿಗೆ ಅರಮನೆ ಹಂಬಲವೇನು ಎಂದು ಹೇಳುತ್ತಾರೆ.

ಸಾಕ್ಷಾತ್ ಶ್ರೀರಾಮ ಚಂದ್ರ ಬಂದಿದ್ದಾನೆ ಬಾಗಿಲು ತೆಗೆಯಿರಿ: ಎಂದಾಗ ಸೀತೆ ಕಡೆಯವರು ಆತನ ಕೈಯಲ್ಲಿ ಉಂಗುರ ಇದೆಯೇ? ಎಂದು ಕೇಳಿದಾಗ ಇದೆ ಎನ್ನುತ್ತಾರೆ. ಈ ಮಾತನ್ನು ಮೊದಲೇ ಹೇಳಬೇಕಾಗಿತ್ತು. ನಾವು ಆಗಲೇ ಬಾಗಿಲನ್ನು ತೆಗೆಯುತ್ತಿದ್ದವು. ಇಷ್ಟು ಗೊಳಾಡಿಸುತ್ತಿರಲಿಲ್ಲ ಎಂದು ಹೇಳಿ ಶ್ರೀರಾಮನಿಗೆ ಇನ್ನು ಮುಂದೆ ತಡವಾಗಿ ಬರದಂತೆ ಎಚ್ಚರಿಕೆ ನೀಡಿ ದೇವಸ್ಥಾನದ ಬಾಗಿಲು ತೆಗೆಯುತ್ತಾರೆ.

ಹೀಗೆ ರಸವತ್ತಾದ ಸಂಭಾಷಣೆಯೊಂದಿಗೆ ಕಡುಬಿನ ಕಾಳಗ ನೆಡೆಯುತ್ತದೆ. ಇಲ್ಲಿ ಎಲ್ಲ ವರ್ಗದವರು ಭಾಗವಹಿಸುತ್ತಾರೆ.

**ವಸಂತೋತ್ಸವ – ಓಕಳಿ :**

ಏಕಾದಶಿ ದಿನದಂದು ಓಕಳಿ ಆಡುತ್ತಾರೆ. ದೈವಗಳ ಉತ್ಸವ ಮೂರ್ತಿಗಳೊಂದಿಗೆ ಪಲಕ್ಕಿಯಲ್ಲಿ ವಾದ್ಯಗಳ ಸಮೇತ ಪಾದಗಟ್ಟಿ ದೇವಸ್ಥಾನಕ್ಕೆ ಹೋಗುವಾಗ ದಾರಿಯಲ್ಲಿ ಸಿಗುವ ಜನರಿಗೆ ಮತ್ತು ಊರಿನ ಹಿರಿಯರಿಗೆ ಮುಖಂಡರಿಗೆ ಬಣ್ಣ ಹಾಕುತ್ತಾರೆ.

ಜನಪದರಲ್ಲಿ ಮದುವೆಯಾಗಿ ಮೂರನೇ ದಿನದಂದು ಓಕಳಿ ಆಡುವ ಪದ್ಧತಿ ಇದೆ. ಇಂದಿನ ದಿನಗಳಲ್ಲಿ ಮದುವೆಯಾದ ಸಂದರ್ಭದಲ್ಲಿ ಬಣ್ಣ ಆಡುವುದು ಮರೆಯಾಗುತ್ತದೆ. ಜನಪದರು ಈ ದೈವಗಳ ನೆಪದಲ್ಲಿ ಈ ಓಕಳಿಯನ್ನು ಆಡಿಕೊಂಡು ಬಂದಿದ್ದಾರೆ.

ಮರುದಿನ ಅಂದರೆ ದ್ವಾವಶಿಯ ದಿನದಂದು – ಕಂಕಣ ಮತ್ತು ಕಲಶ ವಿಸರ್ಜನೆ ಮಾಡುತ್ತಾರೆ.

ಯುಗಾದಿಯ ಪಾಡ್ಯದಿಂದ ದ್ವಾದಶಿಯವರೆಗೆ ನಡೆಯುವ ಲಕ್ಷ್ಮೀನಾರಾಯಣ ಮತ್ತು ಆಂಜನೇಯ ಸ್ವಾಮಿಯ ಜಾತ್ರೆಯ ಉತ್ಸವ ಕಂಕಣ ಮತ್ತು ಕಲಶ ವಿಸರ್ಜನೆಯೊಂದಿಗೆ ಮುಕ್ತಾಯಗೊಳ್ಳುತ್ತದೆ.

**ಲಕ್ಷ್ಮಿನಾರಾಯಣ ಮತ್ತು ಆಂಜನೇಯ ಸ್ವಾಮಿಯ ಆಭರಣಗಳು :**

ಈ ಎರಡು ದೈವಗಳಿಗೆ ಬಂಗಾರ-ಬೆಳ್ಳಿ ರತ್ನ ಮುಂತಾದ ಆಭರಣಗಳು ಇವೆ. ಈ ದೈವಗಳ ವಿಗ್ರಹಗಳಿಗೆ ಬೆಳ್ಳಿಯ ಆಭರಣಗಳು ಇವೆ. ಕಿರೀಟಗಳು ಕೈ ಆಭರಣಗಳು, ಸೊಂಟದ ಆಭರಣಗಳು ಇವೆ.

ಟಿಪ್ಪು ಸುಲ್ತಾನನು ನೀಡಿದ ಮೂರು ರತ್ನ ಖಚಿತ ಆಭರಣಗಳು ಇಂದಿಗೂ ಕಂಡು ಬರುತ್ತವೆ. ಈ ಕಿರೀಟಗಳನ್ನು ಜಾತ್ರೆಯ ಸಂದರ್ಭದಲ್ಲಿ ದೇವರುಗಳಿಗೆ ಅಲಂಕರಿಸುತ್ತಾರೆ.

ಟಿಪ್ಪು ಸುಲ್ತಾನನು ನೀಡಿದ ಆಭರಣಗಳಿಗೆ ಒಂದು ಇತಿಹಾಸವೇ ಇದೆ ಅದೇನೆಂದರೆ,

'ಟಿಪ್ಪು ಆಡಲಿತ ನಡೆಸುತ್ತಿದ್ದ ಕಾಲ – ತನ್ನ ತಂದೆಯ ಕಾಲದಲ್ಲಿ ಕೈ ಬಿಟ್ಟು ಹೋಗಿದ್ದ ಹಲವು ಕೋಟೆಗಳನ್ನು ಮರಳಿ ಪಡೆಯಬೇಕೆಂಬ ಛಲದಿಂದ ಕೊಪ್ಪಳ ದುರ್ಗಕ್ಕೆ ಮುತ್ತಿಗೆ ಹಾಕಿದನು. ಹರಪನಹಳ್ಳಿಯ ನಾಯಕನಾದ ಸೋಮಶೇಖರನು ಟಿಪ್ಪುವಿಗೆ ವಿದೇಯನಾಗಿದ್ದನು. ಅವನಿಗೆ ಕಪ್ಪ ಕಾಣಿಕೆಯನ್ನು ಸಲ್ಲಿಸುತ್ತಿದ್ದನು. ಕೊಪ್ಪಳದ ಮುತ್ತಿಗೆಗೆ ಹೊರಟ ಸುಲ್ತಾನನು ರಾತ್ರಿ ವೇಳೆಯಲ್ಲಿ ನಾರಾಯಣ ದೇವರ ಕೆರೆಯನ್ನು ತಲುಪಿದನು. ಆ ಸಮಯದಲ್ಲಿ ಊರಿನ ಜನರು ತಮ್ಮ ಗ್ರಾಮದ ದೇವರಾದ ಶ್ರೀ ಭೂ ನಾರಾಯಣನ ಸ್ವಾಮಿಗೆ ಚಕ್ರೋತ್ಸವವನ್ನು ನಡೆಸುತ್ತಿದ್ದರು, ಸುಲ್ತಾನನನ್ನು ಕಂಡು ಜನರು ಪಲಾಯನಗೈದರು. ಆದರೆ ಜೋಯಿಸಲು ಮಾತ್ರ ಧೈರ್ಯದಿಂದ ಉತ್ಸವ ಮೂರ್ತಿಗಳೊಡನೆ ನಿಂತಾಗ ಟಿಪ್ಪು ಸುಲ್ತಾನನೇ ಖುದ್ದಾಗಿ ಚಕ್ರೋತ್ಸವವನ್ನು ಪ್ರಾರಂಭಿಸಿ ತನ್ನ ಭಕ್ತಿ ಹಾಗೂ ಮೆಚ್ಚಿಗೆಯನ್ನು ವ್ಯಕ್ತಪಡಿಸುವನು.

ಊರ ಜೋಯಿಸರು ಅವನಿಗೆ ಜಯವಾಗಲೆಂದು ಹಾರೈಸಿದರು. ತಾನು ದಿಗ್ವಿಜಯಕೆ ಹೊರಟಿರುವುದಾಗಿಯೂ, ತನ್ನ ಕಾರ್ಯ ಕೈಗೂಡಿದಲ್ಲಿ ದೇವರಿಗೆ ಕಾಣಿಕೆ ಸಲ್ಲಿಸುವುದಾಗಿ ಹೇಳಿ ಹೊರಟನು.

ಸುಲ್ತಾನನು ಸತತವಾಗಿ ಏಳು ದಿನ ದಾಳಿ ಮಾಡಿದರು ಅವನ ವಶವಾಗಲಿಲ್ಲ. ಸೋಮಶೇಖರ ನಾಯಕನ ಸಹಾಯದಿಂದ ಕೊಪ್ಪಳ ದುರ್ಗವನ್ನು ಗೆದ್ದನು. ಮರಳಿ ಹೋಗುವಾಗ ನಾರಾಯಣದೇವರ ಕೆರೆಯ ದೇವರಿಗೆ ಕಾಣಿಕೆ ರೂಪದಲ್ಲಿ ರತ್ನಕಿರೀಟಗಳನ್ನು ನೀಡಿದನು. ಆ ಕಿರೀಟಗಳನ್ನು ಇಂದಿಗೂ ಕೂಡ ಕಾಣಬಹುದಾಗಿದೆ.

ಉತ್ಸವ ಮೂರ್ತಿಗಳು ಬಂಗಾರದ್ದಾಗಿವೆ.

### ಜಾತ್ರೆಯಲ್ಲಿ ಕಂಡು ಬರುವ ವೈಶಿಷ್ಟ್ಯಗಳು :

ಜಾತ್ರೆಯು ಜನಪದರ ಸಂತೋಷದ ಹಬ್ಬವಾಗಿದೆ. ಜನಪದರು ತಮ್ಮ ಬಂಧು ಬಳಗದವರನ್ನು, ನೆಂಟರಿಷ್ಟರನ್ನು, ಕರೆದಿರುತ್ತಾರೆ. ಅವರ ಜೊತೆ ತಮ್ಮ ಸುಖ-ದುಃಖಗಳನ್ನು ಹಂಚಿಕೊಳ್ಳುತ್ತಾರೆ. ಮನೆಗೆ ಬಂದಂತಹ ನೆಂಟರಿಷ್ಟರಿಗೆ ಜಾತ್ರೆ ಮಾಡಿಸುತ್ತಾರೆ. ಜಾತ್ರೆಯಲ್ಲಿ ನಮಗೆ ವಿವಿಧ ನಮೂನೆಯ ಅಂಗಡಿ ಮುಂಗಟ್ಟುಗಳನ್ನು ನೋಡಬಹುದು.

ಒಂದು ಕಡೆ ಮಹಿಳೆಯರ ಒಳೆ ಅಂಗಡಿಯ ಸಾಲು ಇನ್ನೊಂದು ಕಡೆ ಮಕ್ಕಳ ಆಟಿಕೆಯ ಅಂಗಡಿ ಮೊತ್ತೊಂದೆಡೆ ಮನೆ ಬಳಕೆ ವಸ್ತುವಾದ -ಪಾತ್ರೆ ಅಂಗಡಿ, ಮನೆಯ ಅಲಂಕಾರದ ಅಂಗಡಿ, ಸಿಹಿ ಮಾರುವ ಅಂಗಡಿಗಳು ಹೋಟೆಲುಗಳು, ಬಟ್ಟೆ ಅಂಗಡಿಗಳು, ಚಪ್ಪಲಿ ಅಂಗಡಿಗಳು, ಐಸ್ ಕ್ರೀಂನ ಅಂಗಡಿಗಳು ಇತ್ಯಾದಿಗಳನ್ನು ಜಾತ್ರೆಯನ್ನು ಕಾಣಬಹುದು.

ಜನರಿಗೆ ಮನರಂಜನೆ ನೀಡುವಂತಹ-ದೊಡ್ಡ ತಿರುಗುವ ತೊಟ್ಟಿಲು. ರೈಲು ಬಂಡಿಗಳು, ಜೋಕಾಲಿ, ವಿಮಾನಗಳು ಜಾತ್ರೆಯಲ್ಲಿ ನೋಡಲು ಸಿಗುತ್ತವೆ.

ಜನರು ಜೂಜಾಡುವ ಅಂಗಡಿಗಳು ಸಿಗುತ್ತವೆ. ಇಲ್ಲಿನ ಹೋಟೆಲುಗಳಲ್ಲಿ ಮಂಡಾಳು ವಗ್ಗರಣೆ ಮತ್ತು ಅಲಸಂದಿ ವಡೆಯು ಬಹಳ ಪ್ರಸಿದ್ಧಿಯಾಗಿದೆ. ಇದನ್ನು ತಿನ್ನಲು ಜನರು ಮುಗಿಬೀಳುತ್ತಿರುತ್ತಾರೆ.

ಜನರ ಮನಸ್ಸಿಗೆ ಮುದನೀಡುವಂತಹ ಮ್ಯಾಜಿಕ್ ಮಾಡುವ ಮೂಲಕ ಮನ ಸೋಲಿಸುವ ಅಂಗಡಿಗಳು ಸಿಗುತ್ತವೆ.

ಜನರಿಗೆ ತಂಪು ಪಾನೀಯವನ್ನು ಒದಗಿಸುವ ಅಂಗಡಿಗಳು ಕಾಣಸಿಗುತ್ತವೆ.

ಜಾತ್ರೆಯಲ್ಲಿ ಹುಡುಗರು ಹುಡಿಗಿಯರನ್ನು ಚುಡಾಯಿಸಿ ಮಜಾ ತೆಗೆದುಕೊಳ್ಳುತ್ತಿರುತ್ತಾರೆ. ಹುಡುಗರು ಏನೇ ಚುಡಾಯಿಸಿದರು ಹುಡಿಗಿಯರು ಗಮನಕ್ಕೆ ತೆಗೆದುಕೊಳ್ಳುವುದಿಲ್ಲ.

ಕೆಲವರು ತಮ್ಮ ಮಗನಿಗೊ ಅಥವ ಮಗಳಿಗೊ ವರ ಅಥವಾ ವಧುವನ್ನು ಹುಡುಕುತ್ತಿರುತ್ತಾರೆ. ತಮಗೆ ಇಷ್ಟವಾದಲ್ಲಿ ಆ ಸಂದರ್ಭಗಳಲ್ಲಿ ಮದುವೆಯ ಮಾತು ಕತೆಯನ್ನು ಸಹ ಮಾಡುವಂತವರನ್ನು ಕಾಣಬಹುದಾಗಿದೆ.

ಜಾತ್ರೆಯ ಸಂದರ್ಭಗಳಲ್ಲಿ ಸರಕಾರವು ಜನರಿಗೆ ರೋಗಗಳ ತಿಳುವಳಿಕೆಯನ್ನು ನೀಡುತ್ತದೆ. ಸಂತಾನ ನಿಯಂತ್ರಣ, ಏಡ್ಸ್, ಕ್ಯಾನ್ಸರ್, ಕಾಲರ, ಪ್ಲೇಗ್, ಮುಂತಾದ ವಿಷಯಗಳ ಬಗ್ಗೆ ಜನರಿಗೆ ತಿಳುವಳಿಕೆ ನೀಡಲು ಈ ಜಾತ್ರೆಯ ಸಂದರ್ಭಗಳನ್ನು ಬಳಸಿಕೊಳ್ಳುತ್ತಾರೆ. ಈ ರೋಗಗಳ ಬಗ್ಗೆ ಜನರಲ್ಲಿ ಜಾಗೃತಿಗೊಳಿಸಲು ಶ್ರಮಿಸುತ್ತಾರೆ.

ಜಾತ್ರೆಗಳು ಬಾವೈಕ್ಯತೆಯ ಕೇಂದ್ರ ಎಂದು ಹೇಳಬಹುದು. ಯಾವುದೇ ಕಾರಣಕ್ಕಾಗಿ ಊರಲ್ಲಿನ ಹಿರಿಯರು ಆಗಿರಬಹುದು ಅಥವಾ ಸ್ನೇಹಿತರು ಆಗಿರಬಹುದು. ಅಥವಾ ಸಂಬಂಧಿಕರು ಆಗಿರಬಹುದು, ಇವರುಗಳನ್ನೆಲ್ಲಾ ಈ ಜಾತ್ರೆ ಉತ್ಸವಗಳು ಒಂದಾಗುವಂತೆ ಮಾಡುತ್ತವೆ. ಏಕೆಂದರೆ ಜಾತ್ರೆ ಉತ್ಸವಗಳು ಎಲ್ಲರೂ ಕೂಡಿ ಮಾಡುವಂತಹ ಆಚರಣೆ ಆಗಿರುತ್ತದೆ. ಎಲ್ಲರೂ ಮಾತನಾಡಲೇಬೇಕಾಗುತ್ತವೆ. ಇಲ್ಲಿ ಒಬ್ಬರಿಗೊಬ್ಬರು ತಮ್ಮ ತಮ್ಮ ಮನಸ್ತಾಪಗಳನ್ನು ಬದಿಗಿಟ್ಟು ಮಾತನಾಡುತ್ತಾರೆ.

ಮನೆಯ ಮಗಳನ್ನು ಮದುವೆ ಮಾಡಿ ಕೊಟ್ಟ ಮೇಲೆ ತವರು ಮನೆಗೆ ಬರುವುದು ಕಡಿಮೆ ಇರುತ್ತದೆ. ಜಾತ್ರೆಯ ಸಂದರ್ಭದಲ್ಲಿ ತಮ್ಮ ಮಗಳನ್ನು ತವರು ಮನೆಗೆ ಕರೆದುಕೊಂಡು ಬರುತ್ತಾರೆ. ಮಗಳಿಗೆ ಬೇಕಾದಂತಹ ಎಲ್ಲಾ ರೀತಿಯ ವಸ್ತುಗಳನ್ನು ಕೂಡಿಸುತ್ತಾರೆ. ಮಗಳನ್ನು ಕಳುಹಿಸುವಾಗ ಉಡಿಯಕ್ಕಿ ತುಂಬಿ ಕಳುಹಿಸುತ್ತಾರೆ.

ಹೀಗೆ ಜಾತ್ರೆಯು ಶುಭವನ್ನು ಉಂಟು ಮಾಡುವಂತಹ ಆಚರಣೆಯಾಗಿದೆ. ಈ ಜಾತ್ರೆಗಳು ಯಾರು ಮೇಲೂ ಅಲ್ಲ–ಯಾರು ಕೀಳಲ್ಲ– ಎಲ್ಲರೂ ಒಂದೇ ಎಂದು ಜಗತ್ತಿಗೆ ಸಾರಿ ಸಾರಿ ಹೇಳುತ್ತವೆ.

**ನಂಬಿಕೆಗಳು :**

ನಂಬಿಕೆಗಳು ಜನತಾ ಭಾವದ ಅಭಿವ್ಯಕ್ತಿ, ಜನತೆಯ ಪರಂಪರಾನುಗತ ಜ್ಞಾನಸುಧೆ, ಸುಸಂಸ್ಕೃತ ಹೃದಯದ ಪರಿಪಕ್ವ ಅನುಭವ ಸಾರವೆನ್ನಬಹುದು.

ಹೆಚ್ಚಾಗಿ ಹನುಮಂತನನ್ನು ಬಹಳ ನಿಷ್ಠೆಯಿಂದ ನಂಬುತ್ತಾರೆ. ಮತ್ತು ನಿತ್ಯವೂ ಪೂಜಿಸುತ್ತಾರೆ. ಈ ದೇವರನ್ನು ನಂಬಿದರೆ ನಮ್ಮ ಕಷ್ಟಗಳನ್ನು ಪರಿಹಾರ ಮಾಡುತ್ತಾನೆ ಎಂದು ಜನಪದರು ನಂಬುತ್ತಾರೆ.

ಈ ಹನುಮಂತನ ಬಗ್ಗೆ ಹಲವಾರು ನಂಬಿಕೆಗಳಿವೆ. ಹನುಮಂತನು ಊಳುವವರ ದೇವರಾಗಿದ್ದು ಅವರ ಫಲ ಕಾಪಾಡುವ ದೈವನಾಗಿದ್ದಾನೆ. ಈಗಲೂ ರೈತರು ರಾಶಿಮಾಡುವ ಸಂದರ್ಭದಲ್ಲಿ ಕಣದಲ್ಲಿ ಕರಿಬಂಟನ ಗುರುತು ಹಾಕುತ್ತಾರೆ. ಈ ಕರಿಬಂಟ ಹನುಮಂತನ ಪ್ರತೀಕವೆಂದು ಹೇಳುತ್ತಾರೆ.

ಮುದ್ದು ಮಗುವಿಗೆ ದೃಷ್ಠಿ ತಟ್ಟದಿರಲೆಂದು ತಾಯಿ ತನ್ನ ಮಗುವನ್ನು ಹನುಮಂತನ ದೇವಸ್ಥಾನಕ್ಕೆ ಒಯ್ದು ಆತನ ಮೇಲೆ ಎಣ್ಣೆ ಸುರುವಿ ಮೈ ಮೇಲಿನ ಕಪ್ಪು ಜಿಗುಟಿನ ಮಸಿಯನ್ನು ಪ್ರಸಾದವೆಂದು ತನ್ನ ಮಗುವಿನ ಹಣೆ ಕೆನ್ನೆಗೂ ಹಚ್ಚುತ್ತಾಳೆ. ಇದರಿಂದ ತನ್ನ ಮಗುವಿಗೆ ಯಾವುದೇ ಕೇಡು ಆಗಬಾರದು ಎಂಬುದು ತಾಯಂದಿರ ನಂಬಿಕೆಯಾಗಿದೆ.

ದೆವ್ವ ಬಡಿದು ಕೊಂಡವರು ಅವುಗಳನ್ನು ಹೋಗಲಾಡಿಸುವುದಕ್ಕಾಗಿ ಹನುಮಂತನ ಚಿತ್ರವಿರುವ ಬಿಲ್ಲೆ, ತಾಯಿತಗಳನ್ನು ಕರಿಯದಾರದಲ್ಲಿ ಪೋಣಿಸಿ ಕಟ್ಟಿಕೊಳ್ಳುತ್ತಾರೆ.

ಹನುಮಂತನು ಶನಿಯನ್ನು ಗೆದ್ದವನಾದುದರಿಂದ ನಮಗೆ ಅನಿಷ್ಠಗಳು ಕಾಡ ಹತ್ತಿದರೆ. ಪೂಜೆ, ಅಭಿಷೇಕ ಮಾಡಿಸಿದರೆ ಕಾಡಾಟಗಳು ದೂರವಾಗುತ್ತವೆ ಎಂದು ನಂಬುತ್ತಾರೆ ಶನಿವಾರಕ್ಕೊಮ್ಮೆ ಹನುಮಂತದೇವರಿಗೆ ನಡೆದುಕೊಂಡರೆ ಅನಿಷ್ಠಗಳು ತಪ್ಪುತ್ತವೆ.

ಹನುಮಂತನ ಅಂಗಾರವನ್ನು ಬಟ್ಟೆಯಲ್ಲಿ ಹಾಕಿ ಸೊಂಟಕ್ಕೆ ಕಟ್ಟಿಕೊಂಡರೆ ದೆವ್ವ ಸಮೀಪ ಬರುವುದಿಲ್ಲ.

ಹೆಣ್ಣು ಮಕ್ಕಳು ಹನುಮಪ್ಪನ ಪೂಜೆ ಮಾಡಿದರೆ ಬೇಗ ಮದುವೆ ಆಗುತ್ತದೆ. ಮನದಲ್ಲಿ ಅಂದುಕೊಂಡಂತಹ ಇಷ್ಟಾರ್ಥಗಳು ನೇರವೇರಿತ್ತವೆ ಎಂಬುದು ಜನಪದರ ನಂಬಿಕೆಯಾಗಿವೆ.

**ಹರಕೆಗಳು :**

ತಮ್ಮನ್ನು ಕಾಪಾಡುವ ದೇವತೆಗಾಗಿ ಜನರು ಯಾವ ತ್ಯಾಗ ಮಾಡಲು ಸಿದ್ಧ, ಯಾವ ಕಷ್ಟ ಅನುಭವಿಸಲು ಹಿಂಜರಿಯುವುದಿಲ್ಲ. ಅದಕ್ಕಾಗಿ ನಾನಾ ರೀತಿಯ ಹರಕೆ ಕಟ್ಟಿಕೊಂಡು ನಿಯತ್ತಿನಿಂದ ಹರಕೆ ತೀರಿಸುತ್ತಾರೆ. ಹರಕೆ ತೀರಿಸದಿದ್ದರೆ ಏನೆಲ್ಲ ಕಷ್ಟ ಪ್ರಾಪ್ತವಾಗುತ್ತದೆ ಎಂಬ ಭಯ ಜನರನ್ನು ಅವರಿಸಿದೆ. ತಮ್ಮ ದೈವಗಳ ಮೇಲೆ ಜನಪದರು ಇಟ್ಟಿರುವ ಅನೇಕ ಬಗೆಯ

ಹರಕೆಯನ್ನು ತೀರಿಸುತ್ತಾರೆ.

ಆಂಜನೇಯ ಮತ್ತು ಲಕ್ಷ್ಮೀನಾರಾಯಣ ಶ್ರೀದೇವಿ ಭೂದೇವಿ ದೈವಗಳಿಗೆ ಹರಕೆಗಳನ್ನು ಒಪ್ಪಿಸುವ ಪಟ್ಟಿಯನ್ನು ನಾವು ಈ ರೀತಿ ನೋಡ ಬಹುದು.

ಕಾಯಿ ಒಡೆಸುವುದು

ಹೂವಿನ ಅಲಂಕಾರ ಮಾಡಿಸುವುದು

ದೈವಗಳಿಗೆ ಬೆಳ್ಳಿ ಮತ್ತು ಬಂಗಾರದ ಸಾಮಾನು ಮಾಡಿಸುವುದು

ಅಭಿಷೇಕ ಮಾಡಿಸುವುದು

ದೀಡ ನಮಸ್ಕಾರ ಹಾಕುವುದು

ಉಪವಾಸ ಮಾಡುವುದು

ಆಂಜನೇಯನಿಗೆ ಕುಂಕುಮ ಪೂಜೆ ಮಾಡಿಸುವುದು

ಆಂಜನೇಯನಿಗೆ ಎಲೆ ಪೂಜೆ ಮಾಡಿಸುವುದು

ಪಂಚಾಮೃತ ಅಭಿಷೇಕ ಮಾಡಿಸುವುದು

ದೀಪ ಹಚ್ಚುವುದು

ದೇವಾಲಯಕ್ಕೆ ಬೇಕಾದ ವಿವಿಧ ಸೌಕರ್ಯವನ್ನು ಪೂರೈಸುವುದು ಬರಿ ಕಾಲಿನ ನಡುಗೆಯಲ್ಲಿ ಬರುವುದು.

ಉತ್ಸವ ಸಮಯದಲ್ಲಿ ಪಲ್ಲಕ್ಕಿಯನ್ನು ಹೊರುವುದು.

ಪಟ್ಟಿ ರೂಪದಲ್ಲಿ ಹಣ ಸಂಗ್ರಹಿಸಿ ಕೊಡುವುದು.

ದೈವಗಳಿಗೆ ಅನೇಕ ರೀತಿಯ ಆಭರಣ ಮಾಡಿಸುವುದು.

ಹೀಗೆ ಜನಪದರು ತಮ್ಮ ದೈವಗಳಿಗೆ ನಾನಾ ರೀತಿಯಲ್ಲಿ ಹರಕೆಯನ್ನು ತೀರಿಸುತ್ತಾರೆ. ದೈಹಿಕವಾಗಿ, ಮಾನಸಿಕವಾಗಿ, ಆರ್ಥಿಕವಾಗಿ ಎಷ್ಟು ಕಷ್ಟ ಬಂದರೂ ಸಹಿಸಿ ತಮ್ಮ ಹರಕೆ ತೀರಿಸುತ್ತಾರೆ.

!! ಶ್ರೀಮನ್ನಾರಾಯಣಾಯ ನಮೋ!!

ದೇವರ ದುಃಖ ಭಾಗ್ಯ

ಬಡತನವು ಬಂದೀತೆ ಭಾಗ್ಯಲಕ್ಷ್ಮೀರಮಣ

ಗುಡಿಸಲಿಟ್ಟು ಗುಡಿಸಲಿಗೆ ಬಂದು ನೆಲೆಸಿದೆಯಾ !!ಪಲ್ಲವಿ!!

ಜಲಧಿಯನು ಜಿಗಿದು ಲಂಕೆಗೆ ಬೆಂಕಿಯನಿಷ್ಟವ್ವ

ಬಲವಂತ ಹನುಮಂತ ಬದಿಯೊಳಗೆ ಇರಲು

ಒಳನುಗ್ಗಿ ಬಂದ ವಾಹಿನಿಯ ನಡ್ಡೆ ಸದಲೆ
ನಿಲಯವನೆ ಬಿಟ್ಟು ಅನಿಲ ಸಂತನೆ ಬಂದಿ
ನಿನ್ನ ಸೂಕರವದನ ರಥನದಿಂದ್ಭುವಿಸಿ
ಸನ್ನತ ಶ್ರೀ ತುಂಗೆ ಭದ್ರೆಯಾಗಿ
ನಿನ್ನ ಕೃಪೆಯಲಿ ಜನಕೆ (ಜಗಕೆ) ಜೀವನದ ಸುಖವಿತ್ತು
ನಿನ್ನನ್ನೆ ಹೊರದೂಡಿ ನಿಂತಳೊಡಗೂಡಿ
ಕಡುಬು, ಹೋಳಿಗೆ, ಹುಗ್ಗಿ, ಆಂಬೋಡೆ, ತಂಬಿಟ್ಟು
ಎಡೆ ಮಾಡಿ ನಿನ್ನೆಡಿಯ ನಂಬಿಕೊಂಡಿರಲು
ನಡುನೀರಿನೊಳು ನಮ್ಮ ಕೈ ಬಿಟ್ಟು ಬರಬಹುದೆ?
ಕಡಲಶಾಹಿಗೂ ನದಿಯ ನೀರ ಹೆದರಿಕೆಯ?
ಮಗಳೆಂಬ ಮಮತೆಯಲ್ಲಿ ಮಂದಿರವೆನ್ನಿತ್ತೆಯಾ?
ನೀರಿನಲಿ ಮರೆಯಾಯ್ತು ನಮ್ಮ ನಾರಾಯಣಕೆರೆಯು
ಬೇರೆ ಜನರಿಗೆ ಜಲಾಷಯದ ಸುಖವಾಯ್ತು
ಈ ರೀತಿಯ ನಿನ್ನಚ್ಚೆ, ಇರುತಿರಲು ಶ್ರೀ ಲಕುಮಿ
ನಾರಾಯಣನೆ ನಮಗೆ ಬೇರೆ ಗತಿಯುಂಟೆ?
ಕಾಡು ಬೀಡಾಗುವುದು ಬೀಡು ಕಾಡಾಗುವುದು
ಈಡುಂಟೆ ನಿನ್ನ ಸಂಕಲ್ಪಕ್ಕೆ ಹರಿಯೇ?
ಕಾಡಿದರು ಸರಿಯೆ ಕಾಪಾಡಿದರು ಸರಿಯೇ
ನೀಡಮಗೆ ನಿನ್ನ ಸನ್ನಿಧಿಯ ಸೌಭಾಗ್ಯ

ದಿ.ಮೈದೂರು ತಿರುಮಾಲಾಚಾರ್ಯ

ಶ್ರೀವಂದಾನಂದ ತೀರ್ಥಾಯ
ಶಿಷ್ಯನ್ನೃಹರಿತಾಪಸ್ಯೈ:
ಸ್ಥಾಪಿತಂ ಭಕ್ತ ಮಂದಾರಂ
ಲಕ್ಷ್ಮೀನಾರಾಯಣಂ ಭಜೇ !!೭!!
ನಾರಾಯಣ ತಟಾಕಾಖ್ಯಾ

ಪಟ್ಟಣಾಧಿಷ್ಠಿತಂ ಪ್ರಭುಂ
ಲಕ್ಷ್ಮೀ ನಾರಾಯಣಂ ವಂದೇ
ಕಾಮಿತಾರ್ಥ ಪ್ರದಂ ಹರಿಂ ||೮||
ಚಿಕ್ಕೇರೂರು ಪನಾಮೇತ
ಗೋವಿಂದ ಕವಿ ನಿರ್ಮಿತಂ
ಲಕ್ಷ್ಮಿನಾರಾಯಣ ಸ್ತೋತ್ರಂ
ಪಠತಾಂ ಸಂಪವಾಂ ಪದಂ ||೯||

ಚಿಕ್ಕೇರೂರು ಗೋವಿಂದಾಚಾರ್ಯ

ಶ್ರೀ ಲಕ್ಷ್ಮಿನಾರಾಯಣ ಮತ್ತು ಆಂಜನೇಯ ಸ್ವಾಮಿಯ ಮೇಲೆ ಅನೇಕರು ಹಾಡುಗಳನ್ನು ರಚನೆ ಮಾಡಿದ್ದಾರೆ. ಅವರುಗಳಲ್ಲಿ ಹರಪನಹಳ್ಳಿ ಭೀಮವ್ವ ಒಬ್ಬಳು. ಹರಪನಹಳ್ಳಿ ಭೀಮವ್ವ ಅನೇಕ ದಾಸರ ಕೀರ್ತನೆಯನ್ನು ರಚಿಸಿದ್ದಾಳೆ. ಅದರಲ್ಲಿ ಈ ನಾರಾಯಣ ದೇವರ ಕೆರೆಯ ಪ್ರಾಣ ದೇವರ ಮೇಲೆ ಹಾಡನ್ನು ಹಾಡಿದ್ದಾಳೆ.

ನರಸಖ ನಾರಾಯಣಕೆರೆಪುರ ವಾಸ
ಕರದಿ ಪಿಡಿದು ಎನ್ನ ಕರಿ ಕಮಲೇಶ
ಗರುಡಾರೂಢನು ಗಜವರದ ವೈಕುಂಠ
ಕೊಡುವ ಪಾಲಿಸಿ ಪಾಂಡವರ ಮನೆ ಭಂಟ
ಪಕ್ಷಿವಾಹನ ರಾಕ್ಷಸಾರಿ ರಾವಣನ
ಶಿಕ್ಷಿಸಿ ವಿಭೀಷಣ ರಕ್ಷಿಸಿದ ರಾಮ
ವಿನುತೆಸುತನ ಏರಿ ಘನತರುತ್ಸವದಿ
ಸವರದಿ ಸುತರವಂದ್ಯ ಸುಜನಕ್ಕಾನಂದ
ಹಕ್ಕಿಯ ಪಕ್ಕದಲ್ಲಕಲ್ಲಿ ಕೋಟತೇಜ
ಜಾನಕ್ಕಿ ಸಹಿತ ಯೋಧ್ಯನಾಳುವ ರಾಮ
ನಗಧರ ಖಗನ್ಹೆಗಲೇರಿ ಉಲ್ಲಾಸ
ನಗುವ ಬೀಮೇಶ ಕೃಷ್ಣ ಬರುವ ಜಗದೀಶ
ನರಹರಿಕೆರೆಪುರದ ಹನುಂತಯನ ಕರುವ
ಪಿಡಿಯೋ ವರ ಹನಮಂತ
ತ್ರೇತಾಯುಗದಲೀ ಖ್ಯಾತಿಯ ಪೊಂದಿದ್ಯೋ

ರಘುನಾಥನಲ್ಲಿಗೆ ಬಂದ್ಯೊ ಹನುಮಂತ
ಪ್ರೀತಿಯಿಂದಲಿ ಪುರುಹೂತ ಸಂತನ
ಗೆದ್ದು ಸೀತೆಗುಂಗುರ ಎತ್ಯೊ ಹನುಮಂತ
ಸೋಮಕುಲದಿಪುಟ್ಟಿ ಭೀಮನೆಂದನಿಸಿನೀ
ಸೀಮೆಖಳರ ಕೊಂದೂ ಹನುಮಂತ
ಮಾನನಿ ದ್ರೌಪದಿ ಮಾನವ ಕಾಯಲು
ದಿವ್ಯ ಮಾನಿನಿಯಾದ್ಯೋ ನೀ ಹನುಮಂತ
ಕಲಿಯುಗದಲಿ ಪುಟ್ಟೆ ಸುಲಲಿತ ಶಾಸ್ತ್ರವ
ತಿಳುಹಿದ್ಯೊ ದ್ವಿಜರಿಗೆ ಹನುಮಂತ
ಜಲನಿದಿಯೊಳಗಿದ್ದ ಚೆಲುವ ಕೃಷ್ಣನ ತಂ
ದುನಿಲಿಸಿದ್ಯೊ ಉಡುಪಿಲಿ ಹನುಮಂತ
ವೇದ ವ್ಯಾಸರ ಪಾದಕಮಲವನ್ನು ಮುದ

ದಲಿಭಜಿಸದ್ಯೊ ಹನುಮಂತ ನರಹರಿ ತೀರ್ಥರು ಕೆರೆಯೆ ನಾರಾಯಣ ಕೆರೆಯ ತೀರಕೆ ಬಂದ್ಯೊ ಹನುಮಂತ ಶಿರವರ ಭೀಮೇಶ ಕೃಷ್ಣನ ಚರಣವ ನಿರುತದಿ ಭಜಿಸುವ ಹನುಮಂತ

!!ಲಕ್ಷ್ಮಿ ನಾರಾಯಣ ಸೋತ್ರಂ!!

ಶ್ರೀ ಮದ್ವಕರ ಸಂಜಾತ
ಶ್ರೀ ಮನ್ನ್ರ ಹರಿಭಿಕ್ಷುಭಿ:
ಸಂಸ್ಥಾಪಿತ ಪೂಜಿತಂಚ
ಲಕ್ಷ್ಮಿ ನಾರಾಯಣ ಭಜೇ !!೧!!
ಶ್ರೀ ಲಕ್ಷ್ಮಿಬ್ರಹ್ಮ ರುದ್ರೇಂದ್ರ
ಪೂಜಿತಾಂಘ್ರಿ ಸರೋರುಹಂ
ನಾರಾಯಣ ತಟಾತಸ್ಥಂ
ಲಕ್ಷ್ಮಿನಾರಾಯಣ ಭಜೇ !!೨!!
ಜ್ಞಾನ ಭಕ್ತಿ ಸುಪುತ್ರಾಯು
ರ್ಯಶಃ ಶ್ರೀ ಪ್ರಮುಖೇಷ್ಟದಂ
ಶ್ರೀ ಭೂಸಮೇತಂ ಗೋವಿಂದಂ
ಲಕ್ಷ್ಮಿನಾರಾಯಾಣ ಭಜೇ !!೩!!

ವೇದ ವೇದಾಂತ ಸಂವೇದ್ಯಂ
ಬ್ರಹ್ಮರುದ್ರೇಂದ್ರ ಸೇವಿತ
ಭಕ್ತ ಕಲ್ಪದ್ರುಮಂ ಶ್ರೀಶಂ
ಲಕ್ಷ್ಮಿನಾರಾಯಣಂ ಭಜೇ !!೪!!
ಚಿಂತಮಣಿಂ ಕಾಮದೇನು
ಕಲ್ಪವೃಕ್ಷಂ ಸ ಸರ್ಜಯಃ
ತಂ ನಾರಾಯಣ ತಟಾತಾಸ್ಥಂ
ಲಕ್ಷ್ಮಿನಾರಾಯಣಂ ಭಜೇ !!೫!!
ಲಕ್ಷ್ಮೀಲಾಲಿತ ಪಾದಾಬ್ಜಂ
ಲಕ್ಷ್ಮೀಲಾಂಭಿಚ ವಕ್ಷಸಂ
ಲಕ್ಷ್ಮೀ ಕಾಮುತ ಮುಗ್ರೇಡ್ಯಂ
ಲಕ್ಷ್ಮೀ ನಾರಾಯಣಂ ಭಜೇ

**ರಾಂಪುರದ ದುರುಗಮ್ಮ :**

ರಾಂಪುರದ ದುರುಗಮ್ಮ ಮರಿಯಮ್ಮನಹಳ್ಳಿಯ ಗ್ರಾಮ ದೇವತೆ ಇಲ್ಲಿಯ ಮೂಲ ನಿವಾಸಿಗಳ ದೇವತೆಯಾಗಿದ್ದಾಳೆ. ಪ್ರತಿದಿನ ಪೂಜೆ ನಡೆಯುತ್ತದೆ. ಭಾರತ ಹುಣ್ಣಿಮೆ ಸಂದರ್ಭದಲ್ಲಿ ಜಾತ್ರೆ ನಡೆಯುತ್ತದೆ.

ರಾಂಪುರದ ದುರುಗಮ್ಮನಿಗೆ ಮತ್ತೊಂದು ಹೆಸರು ಇದೆ. ಅದು ಮರಿಯಮ್ಮ. ಮಾರಿಯನ್ನು ಹೋಗಲಾಡಿಸಿದ್ದಕ್ಕಾಗಿ ಈಕೆಗೆ ಮಾರಿಯಮ್ಮ ಎಂದು ಕರೆಯುತ್ತಾರೆ. ಈ ದೇವತೆಯಿಂದಾಗಿಯೇ ಈ ಊರಿಗೆ ಮರಿಯಮ್ಮನಹಳ್ಳಿ ಎಂದು ಹೆಸರು ಬಂದಿತು.

ರಾಂಪುರದ ದುರುಗಮ್ಮ ಎಂಬ ಹೆಸರು ಬರಲು ಕಾರಣ ಈ ದೇವತೆ ಇಲ್ಲಿ ನೆಲೆ ನಿಲ್ಲಲು ಮೊದಲು ತುಂಗಭದ್ರಾ ನದಿದಡದ ಆಚೆಯವಳು. ಅಲ್ಲಿ ಇದ್ದಂತಹ ರಾಂಪುರದ ಗ್ರಾಮದೇವತೆ. ಈ ಊರಿಗೆ ಬಂದು ನೆಲೆಸಲು ಇಲ್ಲಿನ ಮೂಲ ನಿವಾಸಿಗಳು ದುರುಗಮ್ಮನ ಬಗ್ಗೆ ಒಂದು ಕತೆಯನ್ನು ಹೇಳುತ್ತಾರೆ.

ಸುಮಾರು ೫೦೦ ವರ್ಷಗಳ ಹಿಂದೆ ಈ ಊರು ಒಂದು ಕುಗ್ರಾಮ ಆಗಿತ್ತು. ಈಗ ದೇವಸ್ಥಾನ ಇರುವ ಜಾಗ ಒಬ್ಬ ಬಣಕಾರನಿಗೆ ಸೇರಿತ್ತು. ಅಲ್ಲಿ ಒಂದು ಬೇವಿನ ಮರ ಇತ್ತು. ಡಾಣಪುರದಿಂದ ಒಬ್ಬ ಹುಡುಗ ದಿನ ಬಂದು ಈ ಬೇವಿನ ಮರಕ್ಕೆ ಪೂಜೆ ಮಾಡಿ ಹೋಗುತ್ತಿದ್ದನು. ಆ ಬಣಕಾರ ಈ ಮರಕ್ಕೆ ಪೂಜೆ ಮಾಡಿದುದನನ್ನು ನೋಡಿ ಸಹಿಸುತ್ತಿರಲಿಲ್ಲ. ಅದನ್ನೆಲ್ಲಾ ಕೆಡಿಸಿ

ಕಾಲಿನಿಂದ ಒದೆಯುತ್ತಿದ್ದ. ಹೀಗೆ ಒದೆಯುತ್ತಿದ್ದರಿಂದ ಅವರ ಮನೆಯಲ್ಲಿ ಸಾವು ಸಂಭವಿಸುತಿತ್ತು. ಇದರಿಂದಾಗಿ ಅವರ ಶ್ರೀಮಂತಿಕೆ ಕಳೆಯುತ್ತ ಹೋಯಿತು. ಆಗ ಸಮೀಪದ ಡಾಣಾಪುರದ ಜೋಯಿಸರ ಹತ್ತಿರ ಹೋಗಿ ತಮ್ಮ ಮನೆಯಲ್ಲಿ ಸಂಭವಿಸುತ್ತಿದ್ದ ಸಾವಿನ ಬಗ್ಗೆ ತಮ್ಮ ಶ್ರೀಮಂತಿಕೆಯ ಬಗ್ಗೆ ತಿಳಿಸಿದಾಗ ಆಗ ಅವರು ನಿಮ್ಮ ಜಾಗದಲ್ಲಿ ದೇವಿಯ ಒಲುಮೆ ಇದೆ. ಆದ್ದರಿಂದ ಅಲ್ಲಿ ಒಂದು ಕಣದ ಅಗಲದಷ್ಟು ಜಾಗವನ್ನು ಬಿಟ್ಟುಕೊಡಿ ಎಂದು ಹೇಳಿದರು. ಅವರು ಒಪ್ಪಿ ಯಾರು ದಿನ ಬಂದು ಪೂಜೆ ಮಾಡುತ್ತಾರೋ ಅವರು ನಮಗೆ ಕಾಣಲಿ ಎಂದು ಕೇಳಿಕೊಂಡಾಗ ಆ ಹುಡುಗ ಬೇವಿನ ಮರಕ್ಕೆ ಪೂಜೆ ಮಾಡುವುದು ಕಾಣಿಸಿತು. ಆಗ ಆ ಹುಡುಗನನ್ನು ಕೇಳಿ ನೀನು ಯಾರು ಎಲ್ಲಿಯವನು ಎಂದು ಕೇಳಿದಾಗ ಆ ಹುಡುಗ ಸ್ವಾಮಿ ನನ್ನ ಹೆಸರು ದೇವಪ್ಪ, ಸಮೀಪದ ಡಾಣಾಪುರದಲ್ಲಿ ಒಬ್ಬರ ಮನೆಯ ಜೀತದಾಳು ನಾನು ದಿನ ಬಂದು ಈ ಬೇವಿನ ಮರಕ್ಕೆ ಪೂಜೆ ಮಾಡುತ್ತೇನೆ ಎಂದನು. ಆಗ ಬಣಕಾರನು ಆ ದೇವಿಯಾರು ಏನು? ಎಂದು ಕೇಳಿದಾಗ ಸ್ವಾಮಿ ಈ ಸಲ ದೇವಿ ಬಂದಾಗ ಕೇಳುತ್ತೇನೆ ಎಂದು ಹೇಳಿದನು. ಆ ದೇವಪ್ಪನು ದೇವಿ ಮೇಲೆ ಬಂದಾಗ ಕೇಳಿದಾಗ ಆಗ ದೇವಿಯು ನಾನು ರಾಂಪುರದ ದುರುಗಮ್ಮ. ನನ್ನೂರು ರಾಂಪುರ. ಅಲ್ಲಿ ಆ ಊರು ಹೊಳೆಯಲ್ಲಿ ಮುಳುಗಡೆಯಾಗಿದೆ. ನನಗೆ ಇರಲು ಸ್ಥಳವಿಲ್ಲ. ಈಗ ನೀನು ಪೂಜೆ ಮಾಡುತ್ತಿಯಲ್ಲಾ ಆ ಸ್ಥಳದಲ್ಲಿ ನಾನು ಬಂದು ನೆಲೆ ನಿಲ್ಲುತ್ತೇನೆ. ನನಗೆ ಒಂದು ಕಣದಷ್ಟು ಸ್ಥಳ ಕೊಟ್ಟರೆ ಸಾಕು ಅಲ್ಲಿಯೇ ನೆಲೆ ನಿಲ್ಲುತ್ತೇನೆ ಎಂದು ಹೇಳಿದಳು.

ಆಗ ದೇವಪ್ಪ ಅಲ್ಲಿಯೇ ಒಂದು ಗುಡಿಯನ್ನು ಕಟ್ಟಿ ಆ ದೇವಿಯನ್ನು ನೆಲೆ ನಿಲ್ಲುವಂತೆ ಮಾಡಿದರು. ಈ ಜನಪದ ಕತೆಯನ್ನು ಬಿಟ್ಟರೆ ಯಾವುದೇ ಐತಿಹಾಸಿಕ ದಾಖಲೆಗಳು ಇಲ್ಲ ಇಲ್ಲಿಯವರು ಹೇಳುವಂತೆ ಮೊದಲೆಲ್ಲಾ ಸಂಡೂರಿನ ಮಹಾರಾಜರುಗಳು ಬಂದು ಪಲ್ಲಕ್ಕಿ ಸೇವೆ ಮಾಡುತ್ತಿದ್ದರಂತೆ ಈಗ ಯಾರು ಬರುತ್ತಿಲ್ಲ.

ದುರುಗಮ್ಮ ದೇವಿ ನೆಲೆ ನಿಲುವಂತೆ ಮಾಡಿ ದೇವಪ್ಪ ತನ್ನ ೩೦ನೇ ವಯಸ್ಸಿನಲ್ಲಿ ಜೀವಂತ ಸಮಾದಿಯಾದನು. ದೇವಿಯ ದೇವಸ್ಥಾನದ ಮುಂದೆ ಇರುವ ಸ್ಥಳದಲ್ಲಿ ದೇವಪ್ಪನ ವಂಶಸ್ಥರು ಇಂದು ರಾಂಪುರದ ದುರುಗದೇವಿಯ ಪೂಜೆ ಮಾಡುವರು. ಈಗ ಇರುವವರು ೯ನೇ ತಲೆಮಾರಿನವರು.

ರಾಂಪುರದ ದುರುಗಮ್ಮ ಜಾತ್ರೆಯು ಭಾರತಹುಣ್ಣಿಮೆ ಆಗಿ ಐದನೇ ದಿನಕ್ಕೆ ನಡೆಯುತ್ತದೆ. ಜಾತ್ರೆಯ ಮೊದಲನೆಯ ದಿನ ದುರುಗಮ್ಮ ಮುತ್ತೈದೆಯಾಗಿರುತ್ತಾಳೆ. ಅಂದು ಊರಿನ ಬ್ರಾಹ್ಮಣರು, ವೀರಶೈವರು, ಜೈನರು, ಮೇಲ್ ವರ್ಗದವರೆಲ್ಲಾ ಬಂದು ಉಡಕ್ಕಿ ತುಂಬಿ ಹಣ್ಣು ಕಾಯಿ ಮಾಡಿಸಿಕೊಂಡು ಹೋಗುತ್ತಾರೆ. ಅಂದು ಬೆಳಿಗ್ಗೆಯೇ ದೇವಿಯ ಪಲ್ಲಕ್ಕಿಯೊಂದಿಗೆ ಗಂಗಮ್ಮನ ಪೂಜೆ ಮಾಡಿಸಿಕೊಂಡು ಬರುತ್ತಾರೆ. ಅಂದು ರಾತ್ರಿಯೇ ದೇವಿಯ ಉತ್ಸವದೊಂದಿಗೆ ಸಮೀಪದ

ವಡ್ನಾಳ್‌ಗೆ ಹೋಗಿ ಗಂಗೆಪೂಜೆ ಮಾಡಿಸಿಕೊಂಡು ಬೆಳಗಿನ ಜಾವ ದೇವಸ್ಥಾನಕ್ಕೆ ಬರುತ್ತಾರೆ. ಮರುದಿನ ಕೆಳವರ್ಗದವರಾದ ನಾಯಕರು, ಹರಿಜನರು, ಲಂಬಾಣಿಗಳು ಬಂದು ತಮ್ಮ ಹರಕೆ ತೀರಿಸಿ, ತಾವು ತಂದಂತಹ ಕುರಿಗಳನ್ನು ಪೂಜೆ ಮಾಡಿಸಿಕೊಂಡು ಹೋಗುತ್ತಾರೆ. ಅಂದು ಒಂದೇ ದಿನದಂದು ಸಮೀಪದ ತಾಂಡಾದಲ್ಲಿ ೫೦೦ಕುರಿಗಳನ್ನು ದೇವಿ ಹೆಸರಲ್ಲಿ ಬಲಿ ಕೊಡಲಾಗುತ್ತದೆ. ಸಂಜೆ ನಾಲ್ಕು ಗಂಟೆಗೆ ದೇವಿಯ ಪಟ್ಟದ ಕೋಣವನ್ನು ಬಲಿಕೊಡುತ್ತಾರೆ. ಗ್ರಾಮ ದೇವತೆ ದುರುಗಮ್ಮ ಜಾತ್ರೆ ಕಾರ್ಯದಲ್ಲಿ ಇಲ್ಲಿನ ನಾಣಿಕೇರಿ ಹರಿಜನರು ಭಾಗವಹಿಸುವುದಿಲ್ಲ. ಇವರು ದೇವಿಗೆ ಕಾಯಿ ಒಡೆಸುವುದು ಪೂಜೆ ಮಾಡಿಸುವುದು ಇಷ್ಟೇ ಮಾಡುತ್ತಾರೆ. ಯಾವುದೇ ಪೂಜೆಯಲ್ಲಿ ಭಾಗವಹಿಸುವುದಿಲ್ಲ.

ಮರಿಯಮ್ಮನ ಹಳ್ಳಿಯ ಮೂಲ ಹರಿಜನರು ಮಾತ್ರ ಭಾಗವಹಿಸುತ್ತಾರೆ. ಏಕೆ ಭಾಗವಹಿಸುವುದಿಲ್ಲ ಅಂದರೆ ದುರುಗಮ್ಮನ ಜಾತ್ರೆ ಸಂದರ್ಭದಲ್ಲಿ ಬೆಳಗಿನ ಜಾವದಲ್ಲಿ ಗಂಗೆ ಪೂಜೆ ಮುಗಿಸಿಕೊಂಡು ಬಂದು ಪಟ್ಟದ ಕೋಣವನ್ನು ಬಲಿಕೊಡುತ್ತಾರೆ. ಬಲಿಕೊಟ್ಟ ನಂತರ ಅದನ್ನು ದೇವಿಗೆ ಎಡೆ ಇಡುತ್ತಾರೆ. ಈ ನಾಣಿಕೇರಿ ಹರಿಜನರು ದೇವಿಗೆ ಎಡೆ ಇಟ್ಟಂತಹ ಕೋಣವನ್ನು ಎಂಜಲು ಮಾಡಿದರು ಇದರಿಂದ ಅವರನ್ನು ಜಾತ್ರೆಯಿಂದ ದೂರ ಇಟ್ಟರು ಅಂದಿನಿಂದ ಇಂದಿನವರೆಗೂ ನಾಣಿಕೇರಿಯ ಹರಿಜನರು ಜಾತ್ರೆಯಲ್ಲಿ ಭಾಗವಹಿಸುವುದಿಲ್ಲ.

**ಗುಡ್ಡದ ತಿಮ್ಮಪ್ಪನ ಜಾತ್ರೆ :**

ನಾರಾಯಣ ದೇವರ ಕೆರೆ ಹತ್ತಿರ ಗುಡ್ಡದ ತಿಮ್ಮಪ್ಪ ಎಂಬ ದೇವಸ್ಥಾನವಿದ್ದು ಈ ಊರು ಮುಳುಗುವುದಕ್ಕಿಂತ ಮುಂಚೆ ಪ್ರತಿ ವರ್ಷ ಜಾತ್ರೆಯು ವಿಜೃಂಭಣೆಯಿಂದ ನಡೆಯುತ್ತಿತ್ತು. ಈ ಊರು ತುಂಗಾಭದ್ರ ಆಣೆಕಟ್ಟಿನಲ್ಲಿ ಮುಳುಗಡೆಯಾದ ನಂತರ ಈ ಊರಿನ ಜನ ಮರಿಯಮ್ಮನಹಳ್ಳಿಗೆ ವಲಸೆ ಬಂದ ನಂತರ ಕೆಲವರ್ಷಗಳ ಕಾಲ ಜಾತ್ರೆಯೇ ನಡೆಯಲಿಲ್ಲ. ಕಾರಣ ದೂರ ಆಗುತ್ತದೆ ಎಂದು. ನಂತರ ಊರಿನ ಹಿರಿಯರೆಲ್ಲಾ ಸೇರಿ ತಾವೇ ಪಟ್ಟಿ ಹಾಕಿಕೊಂಡು ಮತ್ತೆ ಜಾತ್ರೆಯನ್ನು ಅಲ್ಲಿಯೇ ಪ್ರಾರಂಭ ಮಾಡಿದರು. ಈ ಜಾತ್ರೆಯು ಶ್ರಾವಣ ಮಾಸದಲ್ಲಿ ನಡೆಯುತ್ತಿತ್ತು. ಜಾತ್ರೆಯ ದಿನ ಊರಿನ ಜನರೆಲ್ಲಾ ಸೇರಿ ನದಿಗೆ ಭಾಗಿನ ಸಲ್ಲಿಸಿ ನಂತರ ಗುಡ್ಡದ ತಿಮ್ಮಪ್ಪನ ರಥೋತ್ಸವ ಕಾರ್ಯಕ್ರಮ ಜರುಗುತಿತ್ತು. ಕೆಲ ವರ್ಷದ ನಂತರ ಊರಿನ ಹಿರಿಯರೆಲ್ಲಾ ಸೇರಿ, ಮರಿಯಮ್ಮನಹಳ್ಳಿಯಿಂದ ಗುಡ್ಡದ ತಿಮ್ಮಪ್ಪನ ದೇವಸ್ಥಾನಕ್ಕೆ ಹೋಗಲು ದೂರ ಆಗುತ್ತದೆ ಎಂದು ಮರಿಯಮ್ಮನ ಹಳ್ಳಿ ಹತ್ತಿರವಿರುವ ದೇವಲಾಪುರ ಗ್ರಾಮದ ಬಳಿ ಇರುವ ಗುಡ್ಡದ ಮೇಲೆ ಸ್ಥಳಾಂತರಿಸಿ ಸ್ಥಾಪನೆ ಮಾಡಿದರು.

ನಾಣಿಕೇರಿಯ ಊರಿನ ಪೂರ್ವ ದಿಕ್ಕಿನಲ್ಲಿ ಗುಡ್ಡವಿತ್ತು. ಅದನ್ನು 'ತಂಬಿಟ್ಟಿನ ಗುಡ್ಡ' ಎಂದು ಕರೆಯುತ್ತಿದ್ದರು. ಈ ಗುಡ್ಡ ಚಿಕ್ಕದಾಗಿತ್ತು ಆಕೃತಿಯಲ್ಲಿ ನಾಗರ ಪಂಚಮಿಯಲ್ಲಿ ತಯಾರಿಸಿದ ತಂಬಿಟ್ಟಿನ ಉಂಡೆಯಂತೆಯೇ ಇದ್ದುದರಿಂದ ಅದನ್ನು ಹಾಗೇ ಕರೆಯಲಾಗುತ್ತಿತ್ತು. ಶ್ರಾವಣ ಮಾಸದ

ನವಮಿ, ದಶಮಿ ದಿನಗಳಂದು ಗುಡ್ಡದ ಜಾತ್ರೆಯನ್ನು ಆಚರಿಸಲಾಗುತಿತ್ತು. ಊರ ಜಾತ್ರೆಯಾದುದರಿಂದ ವಿಶೇಷ ಸ್ಥಾನ ಮಾನ ಈ ಗುಡ್ಡದ ಜಾತ್ರೆಗೆ ಮೀಸಲಾಗಿತ್ತು.

ಬಡವ ಶ್ರೀಮಂತರೆಂಬ ಬೇದಭಾವ ಇಲ್ಲದೆ ಎರಡುದಿನ ಊರಿನ ಜನರೆಲ್ಲಾ ಈ ಗುಡ್ಡದ ಜಾತ್ರೆಯಲ್ಲಿ ಭಾಗವಹಿಸುತ್ತಿದ್ದರು. ಊರ ಹೊರವಲಯದಲ್ಲಿ ಈ ಜಾತ್ರೆ ನಡೆಯುತ್ತಿದ್ದರಿಂದ ಊರ ಜಾತ್ರೆಗಿಂತ ಇಲ್ಲಿ ಹೆಚ್ಚಿನ ಮೋಜಿಗೆ ಅವಕಾಶವಿತ್ತು. ಅತಿ ಸಂಭ್ರಮ ಹಾಗೂ ಸಡಗರದಿಂದ ಈ ಜಾತ್ರೆಯಲ್ಲಿ ಪಾಲ್ಗೊಳ್ಳುತ್ತಿದ್ದರು.

ಆ ದಿನದಂದು ಊರಲ್ಲಿ ಪ್ರತಿಯೊಬ್ಬರು ಎತ್ತು ಬಂಡಿಗಳಲ್ಲಿ ಗುಡ್ಡಕ್ಕೆ ಹೊರಡುತ್ತಿದ್ದರು. ಬೆಳಗಿನ ಊಟವನ್ನು ಮುಗಿಸಿಕೊಂಡು ಏನಾದರು ವಿಶೇಷ ಫಲಹಾರವನ್ನು ಜೊತೆಗೆ ತೆಗೆದುಕೊಂಡು ಮನೆಯಿಂದ ಹೊರ ಬಿದ್ದರೆ, ಗುಡ್ಡದ ಮೇಲೆ ಸ್ನೇಹಿತರೊಡನೆ ತಿರುಗಾಡುವುದೇ ಅಂದಿನ ಕಾರ್ಯಕ್ರಮವಾಗಿತ್ತು. ಗುಡ್ಡದ ಮೇಲಿನ ದೇವರಾದ ತಿಮ್ಮಪ್ಪನಿಗೆ ಹಣ್ಣು ಕಾಯಿನ್ನರ್ಪಿಸಿ, ಗುಡ್ಡದ ಕೆಳಗೆ ಇರುವ ರಥೋತ್ಸವದಲ್ಲಿ ಭಾಗಿಯಾಗುತ್ತಿದ್ದರು.

ರಥೋತ್ಸವ ಆದ ಮೇಲೆ ಎತ್ತಿನ ಬಂಡಿನ ಓಟದ ಸ್ಪರ್ಧೆ ನಡೆಯುತಿತ್ತು.

**ನಗರೇಶ್ವರ ಗುಡಿ :**

ಉತ್ತರಾಭಿಮುಖವಾಗಿ ಈ ದೇವಸ್ಥಾನ ಇದೆ. ವೈಶ್ಯ ಸಮಾಜದ ದೇವತೆಯಾದ ಕನ್ನಿಕಾ ಪರಮೇಶ್ವರಿ ಗುಡಿಯನ್ನು ನಗರೇಶ್ವರ ಗುಡಿ ಎನ್ನುತ್ತಾರೆ.

ನಗರೇಶ್ವರ, ಕನ್ನಿಕಾ ಪರಮೇಶ್ವರಿ, ಗಣಪತಿ ಮತ್ತು ನವಗ್ರಹಗಳಿವೆ. ದೇವಸ್ಥಾನ ವಿಶಾಲವಾಗಿದೆ.

ಇಲ್ಲಿ ಸ್ಥಾಪಿತವಾಗಿರುವ ದೇವರ ಮೂರ್ತಿಗಳು ನಾಣಿಕೇರಿಯಿಂದ ಸ್ಥಳಾಂತರಗೊಂಡಿರುವಾಗಿವೆ. ನಾಣಿಕೇರಿ ಮುಳುಗಡೆಯಾದ ನಂತರ ಅಲ್ಲಿಂದ ಈ ದೇವರುಗಳನ್ನು ಈಗಿನ ಮರಿಯಮ್ಮನಹಳ್ಳಿಯಲ್ಲಿ ಒಂದು ಗುಡಿಸಲು ಹಾಕಿ ಅಲ್ಲಿಯೇ ಪೂಜೆ ನಡೆಸುತ್ತಿದ್ದರು. ಈಗ ಇರುವ ದೇವಸ್ಥಾನದ ಜಾಗದಲ್ಲಿ ದೇವಸ್ಥಾನ ಕಟ್ಟಿಸಿ ಮರು ಪ್ರತಿಷ್ಠಾಪನೆ ಮಾಡಿದ್ದಾರೆ.

ಪ್ರತಿದಿನ ಪೂಜೆ, ಅಭಿಷೇಕ ಇರುತ್ತದೆ. ನಾಗರೇಶ್ವರನಿಗೆ ವಿಶೇಷವಾದ ಪೂಜೆ ಇರುತ್ತದೆ. ಕ್ಷೀರಾಭಿಷೇಕ ಅಲಂಕಾರ, ಬೆಳ್ಳಿಕವಚದ ಅಲಂಕಾರ ಇರುತ್ತದೆ. ನವರಾತ್ರಿಯಲ್ಲಿ ಪ್ರತಿದಿನ ವಿಶೇಷ ಅಲಂಕಾರ ಇರುತ್ತದೆ. ಧನುರ್ಮಾಸದಲ್ಲಿ ಪ್ರತಿದಿನ ಪೂಜೆ, ಭಜನೆ, ಕುಂಕುಮಾರ್ಚನೆ, ಉಡಕ್ಕಿ ತುಂಬುವ ಕಾರ್ಯಕ್ರಮ ಇರುತ್ತದೆ. ಶಿವರಾತ್ರಿ ದಿನ ಬೆಳಿಗ್ಗೆಯಿಂದ ರಾತ್ರಿಯವರೆಗೆ ನಾಗರೇಶ್ವರನಿಗೆ ವಿಶೇಷ ಪೂಜೆ ಇರುತ್ತದೆ. ಪಂಚಾಮೃತಾಭಿಷೇಕ, ಮಹಾ ಮಂಗಳಾರತಿ ನೈವೇದ್ಯ ನಡೆಯುತ್ತದೆ.

ವಾಸವಿ ಜಯಂತಿ ಸಂದರ್ಭದಲ್ಲಿ ಈ ದೇವಸ್ಥಾನದಲ್ಲಿ ವಿಶೇಷ ಪೂಜೆ, ಸಾಂಸ್ಕೃತಿಕ ಕಾರ್ಯಕ್ರಮ ಇರುತ್ತದೆ. ಅಂದು ಕನ್ನಿಕಾ ಪರಮೇಶ್ವರಿಯ ಉತ್ಸವ ಮೂರ್ತಿಯನ್ನು ಮೆರವಣಿಗೆ

ಮಾಡುತ್ತಾರೆ. ಮೆರವಣಿಗೆಯಾದ ನಂತರ ತೊಟ್ಟಿಲ ಸೇವೆ, ಚಾಮರಸೇವೆ ಮಾಡುತ್ತಾರೆ.

ಕನ್ನಿಕಾ ಪರಮೇಶ್ವರಿ ದೇವಿಗೆ ಹಾಕಿದ ಹಾರವನ್ನು ಹರಾಜು ಹಾಕುತ್ತಾರೆ ಬಂದ ಹಣದಿಂದ ದೇವಸ್ಥಾನದ ಅಭಿವೃದ್ಧಿ ಕಾರ್ಯಗಳಿಗೆ ಬಳಸುತ್ತಾರೆ. ರಾತ್ರಿ ಸಾಂಸ್ಕೃತಿಕ ಕಾರ್ಯಕ್ರಮ ಸಮಾಜದ ಹಿರಿಯರಿಗೆ ಸನ್ಮಾನ ಕಾರ್ಯಕ್ರಮವನ್ನು ಹಮ್ಮಿಕೊಂಡಿರುತ್ತಾರೆ. ವಾಸವಿ ಮಹಿಳಾ ಸಮಾಜ, ವಾಸವಿ ಯುವಜನ ಸಂಘ, ಆರ್ಯ ವೈಶ್ಯ ಸಮಾಜದ ವತಿಯಿಂದ ವಾಸವಿ ಜಯಂತಿಯನ್ನು ಆಚರಿಸುತ್ತಾರೆ.

ದೇವಸ್ಥಾನದ ವಿಶಾಲವಾದ ಜಾಗದಲ್ಲಿ ಮದುವೆ ಕಾರ್ಯಗಳು ನಡೆಯುತ್ತವೆ.

**ನೀಲಕಂಠೇಶ್ವರ ಗುಡಿ :**

ಬಸ್‌ನಿಲ್ದಾಣದ ಹತ್ತಿರ ಇರುವ ನೀಲಕಂಠೇಶ್ವರ ಗುಡಿ ನಾಣಿಕೇರಿಯಿಂದ ಸ್ಥಳಾಂತರಗೊಂಡು ಪ್ರತಿಷ್ಠಾಪನೆಗೊಂಡಿದ್ದಾಗಿದೆ. ಈ ದೇವಾಲಯವು ಉತ್ತರಾಭಿಮುಖವಾಗಿದೆ. ದೊಡ್ಡದಾದ ಶಿವಲಿಂಗ ಮೂರ್ತಿ ಇದೆ. ಎದುರಿಗೆ ಬಸವಣ್ಣ ಮೂರ್ತಿ ಇದೆ. ಪ್ರತಿದಿನ ಪೂಜೆ ನಡೆಯುತ್ತದೆ. ವಿಶೇಷ ಹಬ್ಬಗಳಲ್ಲಿ ಕ್ಷೀರಾಭಿಷೇಕ, ಬಿಲ್ವಪತ್ರಿ ಅಭಿಷೇಕ, ಪಂಚಾಮೃತಾಭಿಷೇಕ ಮಾಡುತ್ತಾರೆ. ಶಿವರಾತ್ರಿ ದಿನದಂದು ಬೆಳಿಗ್ಗೆಯಿಂದಲೇ ವಿಶೇಷ ಪೂಜೆ ನಡೆಯುತ್ತಿರುತ್ತದೆ. ಇತ್ತೀಚೆಗೆ ದೇವಸ್ಥಾನಕ್ಕೆ ಗೋಪುರ ಮತ್ತು ಕಳಶವನ್ನು ಕಟ್ಟಿಸಿದ್ದಾರೆ.

**ಜೈನ ದೇವಸ್ಥಾನ :**

ಊರಿನ ಮುಖ್ಯ ರಸ್ತೆಯಲ್ಲಿ ಶ್ರೀ ವಾಸು ಪೂಜ್ಯ ಜೈನ ಶ್ವೇತಾಂಬರ ಮಂದಿರ ಇದೆ. ದೇವಸ್ಥಾನದ ದ್ವಾರವು ದಕ್ಷಿಣಾಭಿಮುಖವಾಗಿದೆ. ದೇವಾಲಯದ ಒಳಗಡೆ ದೇವರ ವಿಗ್ರಹವು ಪಶ್ಚಿಮಾಭಿಮುಖವಾಗಿದೆ. ಈ ದೇವಾಲಯ ಸ್ಥಾಪನೆಯಾಗಿ ೧೫ ವರ್ಷಗಳಾಗಿವೆ. ಈಗ ದೇವಾಲಯ ಇರುವ ಪಕ್ಕದಲ್ಲಿಯೇ ಹೊಸದಾದ ದೇವಸ್ಥಾನವನ್ನು ಜೈನ ಸಮಾಜದವರು ಕಟ್ಟಿಸುತ್ತಿದ್ದಾರೆ. ಈ ದೇವಾಲಯದ ಅರ್ಚಕರು, ಬ್ರಾಹ್ಮಣರು. ಪ್ರತಿ ದಿನವು ಪೂಜೆ ಮಂಗಳಾರತಿ ಇರುತ್ತದೆ. ವಿಶೇಷ ದಿನಗಳಲ್ಲಿ ಅಭಿಷೇಖ, ಕ್ಷೀರಾಭಿಷೇಕ, ಗಂಧದ ಅಲಂಕಾರ ಇರುತ್ತದೆ.

ಬಾದ್ರಪದ ಮಾಸದಲ್ಲಿ ಜೈನರು ಒಂದು ವಾರ ಉಪವಾಸ ಮಾಡುತ್ತಾರೆ. ಬರೀ ನೀರು ಸೇವನೆ ಮಾಡಿ ಚಾತುರಮಾಸ ವೃತ ಕೈಗೊಳ್ಳುತ್ತಾರೆ. ಈ ಮಾಸದಲ್ಲಿ ದೇವರಿಗೆ ಉಲ್ಲಾನಿನ ಅಲಂಕಾರ, ಹೂವಿನಾಲಂಕಾರ, ನಿಂಬೆ ಹಣ್ಣಿನಾಲಂಕಾರ, ಮಾಡುತ್ತಾರೆ. ವಿಶೇಷ ಸಂದರ್ಭದಲ್ಲಿ ತಮ್ಮ ಜೈನ ಪುರೋಹಿತರನ್ನು ಕರೆಸುತ್ತಾರೆ.

ಮಹಾವೀರ ಜಯಂತಿಯಲ್ಲಿ ದೇವರಿಗೆ ಕನಕಾಭಿಷೇಕ, ನಾಣ್ಯಾಭಿಷೇಕ, ಗಂಧದ ಅಭ್ಯಂಜನ ಮಾಡುತ್ತಾರೆ. ಪೂಜೆ ಮಾಡುವವರು ಹಿಂದೂ ಬ್ರಾಹ್ಮಣರಾದ ಚಿದಂಬರ ದೀಕ್ಷಿತರು. ಜಯಂತಿಯಂದು ಬೆಳಿಗ್ಗೆ ೧೦ಗಂಟೆಗೆ ಊರಿನ ಪ್ರಮುಖ ರಸ್ತೆಯಲ್ಲಿ ಮಹಾವೀರ ಭಾವಚಿತ್ರದೊಂದಿಗೆ ಸಮಾಜದವರು ಮೆರವಣಿಗೆ ಹೋಗುತ್ತಾರೆ.

**ವಿರೂಪಾಕ್ಷೇಶ್ವರ ಗುಡಿ :**

ಊರಿನ ರಾಘವೇಂದ್ರ ಮಠದ ಎದುರಿಗೆ ಶ್ರೀವಿರೂಪಾಕ್ಷೇಶ್ವರ ಗುಡಿ ಇದೆ. ಇಲ್ಲಿರುವ ಮೂರ್ತಿಯು ನಾಣಿಕೇರಿಯಿಂದ ಸ್ಥಳಾಂತರಗೊಂಡಿರುವ ದೇವಸ್ಥಾನವಾಗಿದೆ.

ಈ ದೇವಾಲಯವು ದಕ್ಷಿಣಾಭಿಮುಖವಾಗಿ ಇದೆ. ಒಳಗಡೆ ಶಿವಲಿಂಗವು ದಕ್ಷಿಣಾಭಿಮುಖವಾಗಿದ. ಪ್ರತಿದಿನವು ಪೂಜೆ ನಡೆಯುತ್ತದೆ. ಶಿವರಾತ್ರಿದಿನ ವಿಶೇಷವಾದ ಪೂಜೆ ಇರುತ್ತದೆ.

**ಪಾದಗಟ್ಟೆ ಆಂಜನೇಯ :**

ಊರಿನ ಸಂತೆ ಮಾರ್ಕೇಟಿನ ಹತ್ತಿರ ಇರುವ ಪಾದಗಟ್ಟೆ ಆಂಜನೇಯ ದೇವಾಲಯವು ಪಶ್ಚಿಮಾಭಿಮುಖವಾಗಿ ಇದೆ. ಒಳಗಡೆ ಆಂಜನೇಯ ವಿಗ್ರಹವು ಕೂಡ ಪಶ್ಚಿಮಾಭಿಮುಖವಾಗಿದೆ. ಈ ದೇವರು ಕೂಡ ನಾಣಿಕೇರಿಯಿಂದ ಸ್ಥಳಾಂತರಗೊಂಡಿದ್ದಾಗಿದೆ. ಇಲ್ಲಿ ದಿನನಿತ್ಯ ಪೂಜೆ ನಡೆಯುತ್ತದೆ.

ಊರಿನ ಪ್ರಮುಖ ದೇವರಾದ ಲಕ್ಷ್ಮೀನಾರಾಯಣಸ್ವಾಮಿ ಮತ್ತು ಆಂಜನೇಯ ಸ್ವಾಮಿಗೂ ಸಂಬಂಧವಿದೆ.ಈ ದೇವಾಲಯದ ಏನೇ ಕಾರ್ಯಕ್ರಮ ನಡೆಯಲಿ ಈ ಪಾದಗಟ್ಟೆ ಆಂಜನೇಯ ಸ್ವಾಮಿಗೆ ಹೋಗಿ ಅಲ್ಲಿ ಪೂಜೆ ಸಲ್ಲಿಸಿ ಬರುತ್ತದೆ. ನವರಾತ್ರಿ, ಸಂದರ್ಭದಲ್ಲಿ, ಲಕ್ಷ್ಮೀನಾರಾಯಣ ಆಂಜನೇಯ ಉತ್ಸವ ಮೂರ್ತಿಗಳನ್ನು ತೆಗೆದುಕೊಂಡು ಹೋಗಿ ಈ ದೇವರಿಗೆ ಪೂಜೆ ಸಲ್ಲಿಸಿ ಬರುತ್ತಾರೆ. ಈ ದೇವರುಗಳ ಜಾತ್ರೆ ಸಂದರ್ಭದಲ್ಲಿ ಜೋಡಿ ರಥೋತ್ಸವಗಳು ಪಾದಗಟ್ಟೆ ಆಂಜನೇಯಸ್ವಾಮಿ ದೇವಾಲಯದ ತನಕ ಬಂದು ಪೂಜೆ ಮಾಡಿಸಿಕೊಂಡು ಹೋಗುತ್ತಾರೆ.

**ರಾಘವೇಂದ್ರ ರಾಯರ ಮಠ :**

ಬ್ರಾಹ್ಮಣರ ಓಣಿಯಲ್ಲಿ ಇರುವ ರಾಘವೇಂದ್ರರ ಗುಡಿ ಸ್ಥಾಪನೆಯಾದದ್ದು ೨೫ವರ್ಷಗಳ ಕೆಳಗೆ. ಈ ದೇವಸ್ಥಾನ ಇರುವಲ್ಲಿ ಮೊದಲು ಮದ್ವರಾಯರ ಗುಡಿ ಇತ್ತು. ಈ ಮದ್ವರಾಯ ವಿಗ್ರಹವನ್ನು ನಾಣಿಕೇರಿಯಿಂದ ತಂದು ಪ್ರತಿಷ್ಠಾಪಿಸಿದರು.

ಊರಿನ ಹಿರಿಯರು, ಬ್ರಾಹ್ಮಣರು ಎಲ್ಲರೂ ಸೇರಿ ಇಲ್ಲಿ ರಾಘವೇಂದ್ರ ದೇವರ ಬೃಂದಾವನವನ್ನು ಪ್ರತಿಷ್ಠಾಪನೆ ಮಾಡಿದರು.

ಈ ದೇವಾಲಯವು ಉತ್ತರಾಭಿಮುಖವಾಗಿದೆ. ಒಳಗಡೆ ಇರುವ ಬೃಂದಾವನವು ಕೂಡ ಉತ್ತರಾಮುಖವಾಗಿದೆ. ಪ್ರತಿದಿನ ಪೂಜೆ ನಡೆಯುತ್ತದೆ. ಗುರುವಾರದಿನದಂದು ವಿಶೇಷ ಪೂಜೆ, ಅಭಿಷೇಕ ಇರುತ್ತದೆ. ರಾಯರ ಆರಾಧನೆ ಸಂದರ್ಭದಲ್ಲಿ ಅಲಂಕಾರವನ್ನು ಬೆಳ್ಳಿಕವಚದಿಂದ ಮಾಡಿರುತ್ತಾರೆ.ಮೂರು ದಿನಗಳ ಕಾಲ ವಿಶೇಷ ಪೂಜೆ ಇರುತ್ತದೆ. ಮಠಕ್ಕೆ ಸೇರಿದ ಮದುವೆ ಮಂಟಪ ಇದೆ. ಸರ್ವಧರ್ಮದವರಿಗೂ ಮದುವೆ ಮಾಡಿಕೊಳ್ಳುವ ಅವಕಾಶವಿದೆ.

**ಆಂಜನೇಯ ಸ್ವಾಮಿದೇವಾಲಯ :**

ಮೂರನೇ ವಾರ್ಡ್‌ನ ಕೊನೆಯಲ್ಲಿ ಇರುವ ಆಂಜನೇಯಸ್ವಾಮಿಯ ಸಣ್ಣ ದೇವಸ್ಥಾನವಿದೆ. ದೊಡ್ಡ ಶಿಲೆಯಲ್ಲಿ ಕೆತ್ತಲಾಗಿದೆ. ಇಲ್ಲಿ ಯಾವ ಪೂಜಾರಿಯು ಇಲ್ಲ ಹೆಚ್ಚಾಗಿ ನಾಯಕ ಸಮುದಾಯದವರು ಬಂಧು ಪೂಜೆ ಮಾಡಿಸಿಕೊಂಡು ಹೋಗುತ್ತಾರೆ. ದೇವಸ್ಥಾನವು ಹತ್ತು ವರ್ಷಗಳ ಕೆಳಗೆ ಸ್ಥಾಪನೆಯಾಗಿದೆ.

**ಶನೇಶ್ವರನ ದೇವಸ್ಥಾನ :**

ಊರಿನ ಹೊರ ವಲಯದ N.H–೧೩ರ ಹೆದ್ದಾರಿ ಪಕ್ಕದಲ್ಲಿ ಇದೆ. ನಾಲ್ಕು ವರ್ಷಗಳ ಕೆಳಗೆ ನಿರ್ಮಾಣಗೊಂಡಿದೆ. ಪ್ರತಿದಿನ ಪೂಜೆ ನಡೆಯುತ್ತದೆ. ಶನಿವಾರ ವಿಶೇಷವಾದ ದಿನವಾಗಿದೆ ಅಂದು ಎಲೆ ಅಲಂಕಾರ, ಹೂವಿನ ಅಲಂಕಾರ ನಡೆಯುತ್ತದೆ. ಶನೇಶ್ವರನ ಜಯಂತಿಯಂದು ವಿಶೇಷವಾಗಿ ಆಚರಿಸುತ್ತಾರೆ. ಅಂದು ಊರಿನ ಲಕ್ಷ್ಮೀನಾರಾಯಣ ಆಂಜನೇಯ ದೇವಸ್ಥಾನದ ಬಾವಿಯಿಂದ ಗಂಗೆಯನ್ನು ತರುತ್ತಾರೆ. ಕಲಶ ಹೊತ್ತವರು, ವೀರಭದ್ರನ ಒಡಪು ಹೇಳುತ್ತಾ ಮೆರವಣಿಗೆ ಮೂಲಕ ದೇವರಾಯ ಹೋಗುತ್ತಾನೆ. ಹೋಮ ಮಾಡಿಸುತ್ತಾರೆ. ಸಾರ್ವಜನಿಕರಿಗೆ ಅನ್ನ ಸಮರ್ಪಣೆ ಮಾಡುತ್ತಾರೆ.

**ಕಾಳಿಕ ದೇವಿಗುಡಿ :**

ರಂಗ ಮಂದಿರದ ಪಕ್ಕದಲ್ಲಿ ಕಾಳಿಕ ದೇವಿ ದೇವಾಲಯವಿದೆ. ವಿಶ್ವ ಕರ್ಮದವರು ಹೆಚ್ಚಾಗಿ ನಡೆದುಕೊಳ್ಳುತ್ತಾರೆ. ಪ್ರತಿದಿನ ಪೂಜೆ ನಡೆಯುತ್ತದೆ. ನವರಾತ್ರಿಯಲ್ಲಿ ಪ್ರತಿದಿನ ಪುರಾಣ ಪ್ರವಚನ ಇರುತ್ತದೆ.

**ಬನ್ನಿ ಕಾಳಮ್ಮನ ಗುಡಿ :**

ಪೋಲಿಸ್ ಸ್ಟೇಷನ್ ಎದುರಿಗೆ ಈ ಗುಡಿ ಇದೆ. ಪೂರ್ವಕ್ಕೆ ಮುಖ ಮಾಡಿನಿಂತಿದೆ. ಪ್ರತಿ ದಿನ ಪೂಜೆ ಇರುತ್ತದೆ. ನವರಾತ್ರಿ ಸಂದರ್ಭದಲ್ಲಿ ಭಕ್ತರು ನಡೆದುಕೊಳ್ಳುವುದು ಜಾಸ್ತಿ, ದೇವಾಲಯದಲ್ಲಿ ಬನ್ನಿಗಿಡ ಮಾತ್ರ ಇದೆ. ಜನರು ಇದಕ್ಕೆ ಶ್ರದ್ಧಾಭಕ್ತಿಯಿಂದ ನಡೆದುಕೊಳ್ಳುತ್ತಾರೆ.

**ಮಾರಿಕಾಂಬಗುಡಿ :**

ಹೊಸ ಊರಿನಲ್ಲಿ ಇರುವ ಮಾರಿಕಾಂಬ ಗುಡಿ ಪೂರ್ವಾಭಿಮುಖವಾಗಿದೆ. ದೇವಿ ವಿಗ್ರಹಕೂಡ ಪೂರ್ವಕ್ಕೆ ಇದೆ. ಹೊಸೂರಿನಲ್ಲಿ ನೆಲೆಸಿರುವ ಬಸಪುರ, ಗೌರಿಪುರ, ತಾರಿಹಳ್ಳಿ, ನಾಣಿಕೇರಿ ಹಂಪನಕಟ್ಟೆಗ್ರಾಮಗಳ ಜನರು ನೆಡೆದುಕೊಳ್ಳುತ್ತಾರೆ. ಪ್ರತಿದಿನ ಪೂಜೆ ಮಾಡುತ್ತಾರೆ. ಹಬ್ಬಗಳಲ್ಲಿ ವಿಶೇಷ ಪೂಜೆ ಇರುತ್ತದೆ. ಪ್ರತಿವರ್ಷವೂ ಕಾರ್ತಿಕೋತ್ಸವ ಮಾಡುತ್ತಾರೆ.

## ಮಸೀದಿ :

ಮರಿಯಮ್ಮನಹಳ್ಳಿ ಮುಸ್ಲಿಂ ಬಾಂಧವರು ಪ್ರಾರ್ಥನೆ ಮಾಡುವ ಸಲುವಾಗಿ ಮಸೀದಿಯನ್ನು ಕಟ್ಟಿಸಲಾಗಿದೆ. ಈ ಮಸೀದಿಯು ಕೂಡ ಸ್ಥಳಾಂತರಗೊಂಡಂತಹ ಮಸೀದಿಯಾಗಿದೆ. ಮುಳುಗಡೆಯಾದ ನಾಣಿಕೇರಿಯಲ್ಲಿ ಇದ್ದಂತಹ ಮಸೀದಿಯನ್ನೆ ಈ ಊರಿಗೆ ಸ್ಥಳಾಂತರಿಸಿ ಕಟ್ಟಿಸಿದ್ದಾರೆ. ಇಲ್ಲಿನ ಹಿರಿಯ ಮುಸ್ಲಿಂರು ಹೇಳುವಂತೆ ನಾಣಿಕೇರಿಯಲ್ಲಿ ಮೊದಲು ನಮಾಜು ಮಾಡಲಿಕ್ಕೆ ಮಸೀದಿಯೇ ಇರಲಿಲ್ಲ. ಕ್ರಿಶ. ೧೯೦೭-೦೮ರಲ್ಲಿ ಕೋರ್ಟ್‌ನಲ್ಲಿ ಜವಾನ ಕೆಲಸವನ್ನು ಮಾಡುತ್ತಿದ್ದ ಅಬ್ದುಲ್‌ಖಾದರ್ ಸಾಹೇಬ್ ಎಂಬುವರು ಆಸಕ್ತಿ ವಹಿಸಿ ಮಸೀದಿಯನ್ನು ಸ್ಥಾಪಿಸುವ ಕಾರ್ಯವನ್ನು ಕೈಗೆತ್ತಿಕೊಂಡರು. ಅಲ್ಲದೇ ಇವರ ಜೊತೆ ಜವಳಿ ದಾದಾ ಸಾಹೇಬ್ ಖಾಜಿ ಸಯದ್ ಇಮಾಂ ಸಾಹೇಬ್, ಸುಲ್ತಾನ್ ಸಾಹೇಬ್ ಹಾಗೂ ಹಮೀದ್ ಸಾಹೇಬ್ ಇವರುಗಳು ನಾಣಿಕೇರಿಯಲ್ಲಿ ಮತ್ತು ಬೇರೆ ಸುತ್ತ ಮುತ್ತಲಿನ ಹಳ್ಳಿಗಳಿಗೆ ತೆರಳಿ ಚಂದಾ ವಸೂಲಿ ಮಾಡಿ ಬಂದ ಹಣದಿಂದ ಜಮ್ಮಾ ಮಸೀದಿಯನ್ನು ಕೆರೆಯ ದಂಡೆ ಮೇಲೆ ಕಟ್ಟಿಸಿದರು.

ನಾಣಿಕೇರಿ ಮುಳುಗಡೆಯಾಗುವ ಸಂದರ್ಭದಲ್ಲಿ ಇದೇ ಮಸೀದಿಯನ್ನು ಮರಿಯಮ್ಮನಹಳ್ಳಿಯಲ್ಲಿ ಕಟ್ಟಿಸಿದರು. ಈ ಮಸೀದಿಯಲ್ಲಿ ಪ್ರತಿದಿನವು ಐದು ಸಾರಿ ಪ್ರಾರ್ಥನೆ ಸಲ್ಲಿಸುತ್ತಾರೆ. ರಂಜಾನ್ ಹಬ್ಬದ ಸಂದರ್ಭದಲ್ಲಿ ಒಂದು ತಿಂಗಳು ಉಪವಾಸ ವ್ರತವನ್ನು ಕೈಗೊಂಡು ಪ್ರಾರ್ಥನೆ ಸಲ್ಲಿಸುತ್ತಾರೆ. ಮೊಹರಂ ಹಬ್ಬದ ಸಂದರ್ಭ ಪೀರಲು ದೇವರನ್ನು ಕೂಡಿಸಲು ನಾಲ್ಕು ಮಸೀದಿಗಳಿವೆ. ದುರುಗಮ್ಮನ ಜಾತ್ರೆ ಸಂದರ್ಭಗಳಲ್ಲಿ ಮೊದಲು ಈಕೆಗೆ ಪೂಜೆ ಸಲ್ಲಿಸಿದ ನಂತರ ಜಾತ್ರೆ ಕಾರ್ಯಕ್ರಮಗಳು ಆರಂಭವಾಗುತ್ತಿದ್ದವು.

## ಬರಮ್ಮಪ್ಪನ ದೇವರಗುಡಿ :

ಮೂಲ ಮರಿಯಮ್ಮನಹಳ್ಳಿಯಲ್ಲಿ ಇರುವಂತಹ ದೇವರಾಗಿದೆ. ಪೂರ್ವಾಭಿಮುಖವಾಗಿದೆ. ಕಟ್ಟೆಯ ಮೇಲೆ ಭರಮಪ್ಪನ ಗುಡಿ ಇದೆ.

## ಆಂಜನೇಯ ದೇವಸ್ಥಾನ

ಹುಗ್ಗೆಮ್ಮ ದೇವಸ್ಥಾನದ ಹತ್ತಿರ ಆಂಜನೇಯ ಸ್ವಾಮಿ ಗುಡಿ ಇದೆ. ನಾಣಿಕೇರಿಯಿಂದ ಜನರು ಬರುವ ಮೊದಲೇ ಇಲ್ಲಿ ಈ ದೇವಸ್ಥಾನ ಇತ್ತು. ದಕ್ಷಿಣಾಭಿಮುಖವಾಗಿ ನಿಂತಿರುವ ಆಂಜನೇಯನ ಗುಡಿಯಾಗಿದೆ. ಎದುರಿಗೆ ಗರುಡಗಂಬ ಇದೆ. ಗರ್ಭಗುಡಿ ಮುಂದೆ ವಿಶಾಲವಾದ ಜಾಗವಿದೆ. ಪ್ರತಿದಿನ ಪೂಜೆ ನಡೆಯುತ್ತದೆ. ಜಾತ್ರೆ ನಡೆಯುವುದಿಲ್ಲ. ಕಾರ್ತಿಕ ಮಾಸದಲ್ಲಿ ಕಾರ್ತಿಕೋತ್ಸವ ನಡೆಯುತ್ತದೆ. ಶನಿವಾರ ವಿಶೇಷ ಪೂಜೆ ಮಾಡುತ್ತಾರೆ.

**ತಾಯಮ್ಮನ ಗುಡಿ :**

ಈ ಗುಡಿಯು ಹಳೇ ಊರಿನಲ್ಲಿ ಇದೆ. ಪೂರ್ವಕ್ಕೆ ಮುಖ ಮಾಡಿ ಇದೆ. ಸಣ್ಣ ಕಟ್ಟೆಯ ಮೇಲೆ ಸ್ಥಾಪಿತವಾಗಿದೆ. ಈ ಗುಡಿಗೆ ಬೇವಿನ ಮರ ಆಶ್ರಯ ಇದೆ. ಪ್ರತಿದಿನ ಇಲ್ಲಿನ ಜನರು ಪೂಜೆ ಮಾಡುತ್ತಾರೆ.

(ಆಂಜನೇಯ) ದುರುಗಮ್ಮ ಗುಡಿ ಜಾತ್ರೆಯಲ್ಲಿ ಸೇವೆ ಮಾಡುತ್ತಾರೆ. ಕಂಕಣ ಕಟ್ಟುವುದು. ೫ದಿನದ ಗಂಗೆಗೆ ಹೋಗಿ ಪೂಜೆ ಮಾಡಿ, ಕಲಶ ತೆಗೆದುಕೊಂಡು ಹೋಗಿ ಬರುತ್ತಾರೆ. ಕೋಣ ಕಡಿಯುತ್ತಾರೆ. ಬೆಳಿಗ್ಗೆ ಐದು ಗಂಟೆಗೆ ಹೋಳಿಗೆ ಎಡೆ ಮಾಡುತ್ತಾರೆ, ರೈತರು ಎಲ್ಲಾ ಬ್ಯಾಟಿ ಮಾಡುತ್ತಾರೆ.

**ಹುಗ್ಗೇಮ್ಮ :**

ಗ್ರಾಮ ದೇವತೆಯಾದ ದುರುಗಮ್ಮನ ಗುಡಿಯ ಹತ್ತಿರ ಹುಗ್ಗೇಮ್ಮನ ಗುಡಿ ಇದೆ. ಪೂರ್ವಾಭಿಮುಖವಾಗಿ ಇದೆ. ತಳವಾರ ಮನೆತನದವರು ಪ್ರತಿದಿನ ಪೂಜೆ ಮಾಡುತ್ತಾರೆ. ಈ ಹುಗ್ಗೇಮ್ಮನಿಗೆ ಮೊದಲೆಲ್ಲಾ ಜಾತ್ರೆ ನಡೆಯುತಿತ್ತು. ಈಗ ನಡೆಯುತ್ತಿಲ್ಲ.

ಗ್ರಾಮದೇವತೆಯಾದ ದುರುಗಮ್ಮನ ಅಕ್ಕ ಈ ಹುಗ್ಗೇಮ್ಮ. ಇಲ್ಲಿಯ ಹಿರಿಯರು ಹೇಳುವಂತೆ ಅನೇಕ ವರ್ಷಗಳ ಹಿಂದೆ ನರ ಬಲಿ ಕೊಡಲಾಗುತಿತ್ತಂತೆ, ಆಗಿನ ಪೋಲಿಸ್ ಅಧಿಕಾರಿಗಳು ನರಬಲಿ ನಡೆದಿದೆ ಎಂದು ಬಂದು ಇಲ್ಲಿ ವಿಚಾರಿಸಲು ಯಾರು ಇಲ್ಲ ಎಂದಿದ್ದಾರೆ. ಆಗ ಹುಗ್ಗೇಮ್ಮ ಗುಡಿಯ ಮುಂದೆ ಇರುವ ಜಲ್ಲಿಯ ಸರಿಸಿದಾಗ ಅಲ್ಲಿ ಬರೀ ಕುರಿಯ ಕೊಂಬು ಇತ್ತಂತೆ. ಹಾಗಾಗಿ ಈ ಹುಗ್ಗೇಮ್ಮನಲ್ಲಿ ಇಲ್ಲಿನ ನಿವಾಸಿಗಳು ನಡೆದುಕೊಳ್ಳುತ್ತಾರೆ.

**ಗುಳೇದ ಲಕ್ಕಮ್ಮ :**

ಹಳೇ ಮರಿಯಮ್ಮನಹಳ್ಳಿಯಲ್ಲಿ ಇರುವಲ್ಲಿ ಗುಳೇದ ಲಕ್ಕಮ್ಮ ಎಂಬ ದೇವಸ್ಥಾನ ಇದೆ. ಪೂರ್ವ ದಿಕ್ಕಿಗೆ ಮುಖ ಮಾಡಿ ನಿಂತಿದೆ. ಮೂಲ ಊರಿನವರು ಈಕೆಗೆ ನಡೆದುಕೊಳ್ಳುತ್ತಾರೆ. ಇಲ್ಲಿನ ನಾಯಕರು ಹರಿಜನರು ನಡೆದುಕೊಳ್ಳುತ್ತಾರೆ. ಇಲ್ಲಿಯವರು ದಿನ ಪೂಜೆ ಮಾಡುತ್ತಾರೆ.

**೩.೧೦: ಸಾಮಾಜಿಕ ಸಂಘ ಸಂಸ್ಥೆಗಳು**

ಪ್ರತಿ ಊರಿನಲ್ಲಿ ಇರುವಂತೆ ಮರಿಯಮ್ಮನ ಹಳ್ಳಿಯಲ್ಲಿಯೂ ಸಾಮಾಜಿಕ ಸೇವೆಗಾಗಿ ಸೃಷ್ಟಿಯಾದ ಸುಮಾರು ೨೬ ಸಂಘ ಸಂಸ್ಥೆಗಳು ಇವೆ. ಪ್ರತಿಯೊಂದು ಸಂಘವು ತನ್ನದೇ ಆದ ಹಲವಾರು ಧ್ಯೇಯೋದ್ದೇಶಗಳನ್ನು ಹೊಂದಿದೆ. ಇಲ್ಲಿನ ಸಂಘ ಸಂಸ್ಥೆಗಳನ್ನು ಅವಲೋಕಿಸಿದಾಗ ಪ್ರತಿಯೊಂದು ಸಂಘವು ಸಮಾಜ, ದರ್ಮಕ್ಕನುಗುಣವಾಗಿ ಕೆಲಸ ನಿರ್ವಹಿಸುತ್ತವೆ. ಉದಾಹರಣೆಗೆ:– ವೀರಶೈವ ಧರ್ಮದ ಉದ್ದಾರಕ್ಕಾಗಿ ವೀರಶೈವ ಸಂಘ, ವೈಶ್ಯ ಸಮಾಜದ ವಾಸವಿ ಸಂಘ, ಬೋವಿಗಳ ಬೋವಿ ಸಂಘ, ಜೈನಸಮಾಜದ ಜೈನಸಂಘ, ನಾಯಕ ಸಮಾಜದ ವಾಲ್ಮೀಕಿ ಯುವಕ

ಸಂಘ, ಹೀಗೆ ಸಂಘಗಳು ತಮ್ಮ ತಮ್ಮ ಸಮುದಾಯಗಳ ಚೌಕಟ್ಟಿನಲ್ಲಿ ಕಾರ್ಯ ನಿರ್ವಹಿಸುತ್ತವೆ. ಇನ್ನುಳಿದಂತೆ ಸಮಾಜ ಸೇವಾ ಸಂಘ, ಕೈಹಿಡಿದು ನಡೆಸುವ ಸಂಘಟನೆ, ಯಂಗ್ ಬಾಯ್ಸ್ ಯೂತ್ಸ್ ಕ್ಲಬ್, ಮಾರುತಿ ಕಲಾ ಸಂಘ, ಕರ್ನಾಟಕ ರೈತ ಸಂಘ, ಲಲಿತ ಕಲಾರಂಗ, ಮಹಿಳಾ ವೃತ್ತಿ ರಂಗಕಲಾವಿದರ ಸಂಘ, ಕರ್ನಾಟಕ ರಕ್ಷಣಾ ವೇದಿಕೆ, ಮದಕರಿನಾಯಕ ಸಂಘ, ಅಂಬೇಡ್ಕರ್ ಸಂಘ, ವಿದ್ಯಾರ್ಥಿ ವೃಂದ, ಮಿತ್ರ ವೃಂದ, ಮುಂತಾದ ಸಂಘಗಳು ಸಾರ್ವಜನಿಕ ಹಿತಾಸಕ್ತಿಗಳ ಅನುಗುಣವಾಗಿ ಸಾಂಸ್ಕೃತಿಕ ಕಾರ್ಯ ಕ್ರಮಗಳನ್ನು ರಂಗ ಕಲೆಗಳನ್ನು, ಸಂಗೀತ, ಸಾಹಿತ್ಯ, ಕ್ರೀಡೆಗಳನ್ನು ಏರ್ಪಡಿಸಿ ಸದಾ ಕ್ರಿಯಾಶೀಲವಾಗಿವೆ.

**ಸಮಾಜ ಸೇವಾ ಸಂಘ :**

ಸಮಾಜ ಸೇವೆಗಾಗಿ ಈ ಸಂಘವು ಸ್ಥಾಪನೆಯಾಯಿತು. ಹಲವಾರು ರೀತಿಯ ಜನೋಪಕಾರಿ ಕೆಲಸ ಕಾರ್ಯಗಳನ್ನು ಮಾಡುತ್ತ ಸಮಾನತೆಗೆ ಹೆಸರಾಗಿದೆ. ನೇತ್ರ, ಚಿಕಿತ್ಸೆ ಶಿಬಿರ, ಆರೋಗ್ಯ ತಪಾಸಣಾ ಶಿಬಿರ ರಕ್ತದಾನ ಶಿಬಿರ, ಮುಂತಾದ ಜನೋಪಯೋಗಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವುದು ಈ ಸಂಘದ ಉದ್ದೇಶವಾಗಿದೆ.

**ಕೈ ಹಿಡಿದು ನಡೆಸು ಸಂಘಟನೆ :**

೧೯೯೩ರ ಡಿಸೆಂಬರ್ ೬ರಂದು ಉತ್ಸಾಹಿತರುಣ ಪ್ರತಿಭಾವಂತರಿಂದ ಸಂಘಟನೆ ಪ್ರಾರಂಭವಾಯಿತು. ಮರಿಯಮ್ಮನ ಹಳ್ಳಿಯಲ್ಲಿ ಸಾಂಸ್ಕೃತಿಕವಾಗಿ, ಸಾಹಿತ್ಯಿಕವಾಗಿ ಕಾರ್ಯಕ್ರಮಗಳನ್ನು ಏರ್ಪಡಿಸಿ ಜನರಲ್ಲಿ ಜಾಗೃತಿ ಮೂಡಿಸುವುದು ಈ ಸಂಘಟನೆಯ ಮುಖ್ಯ ಉದ್ದೇಶವಾಗಿದೆ. ಕುಂಚೂರು ಕಲಂ, ಪ್ರಕಾಶ್, ಜಿವಿ ಸುಬ್ಬರಾವ್, ಸೋಮೇಶ್, ಹರಿಪ್ರಸಾದ್ ಹೆಚ್.ಎಸ್., ಕುತುಬುದ್ದೀನ್ ಮುಂತಾದ ಯುವಕರು ಇರುವ ಸಂಘಟನೆಯಲ್ಲಿ ಬಿ.ಎಂ.ಎಸ್.ಮೃತ್ಯುಂಜಯಪ್ಪ ಶಿಕ್ಷಕರ ಮಾರ್ಗದರ್ಶನದಲ್ಲಿ ಸಂಘಟನೆಯ ಕಾರ್ಯಕ್ರಮಗಳು ನಡೆಯುತ್ತವೆ.

ಸ್ಥಳೀಯ ತಾಲೂಕು ಹಾಗೂ ಜಿಲ್ಲಾ ಮಟ್ಟದಲ್ಲಿ ಕವಿಗೋಷ್ಠಿ ನಡೆಸುವುದು ಪ್ರತಿಭಾವಂತ ವಿದ್ಯಾರ್ಥಿಗಳನ್ನು ಗುರುತಿಸಿ ಪುರಸ್ಕರಿಸುವುದು. ಬಡ ವಿದ್ಯಾರ್ಥಿಗಳಿಗೆ ಉಚಿತ ಪಠ್ಯಪುಸ್ತಕ ವಿತರಣೆ, ಕನ್ನಡ ಸಾಹಿತ್ಯ ಪರಿಷತ್ ಹಾಗೂ ವಿಶ್ವವಿದ್ಯಾಲಯಗಳ ಸಹಯೋಗದಲ್ಲಿ ದತ್ತಿ ಉಪನ್ಯಾಸ ಕಾರ್ಯಕ್ರಮ ನಡೆಸಿದೆ. ೧೯೯೬ರಲ್ಲಿ ಮರಿಯಮ್ಮನಹಳ್ಳಿ ಬಳ್ಳಾರಿ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನವು ಕೈಹಿಡಿದು ನಡೆಸು ಸಂಘಟನೆಯ ಸಹಯೋಗದಲ್ಲಿ ನಡೆಯಿತು. ಊರಿನಲ್ಲಿ ನಾಟಕ, ಜನಪದಕಲೆಗಳ ಪ್ರದರ್ಶನ ನೀಡಿದೆ. ಜೋಗತಿ ಕಲೆಯ ಸಂವಾದ, ರಂಗ ತರಬೇತಿ ಶಿಬಿರ, ಮುಂತಾದ ಚಟುವಟಿಕೆಗಳು ಮರಿಯಮ್ಮನಹಳ್ಳಿಯಲ್ಲಿ ನಡೆಯಲು ಸಂಘಟನೆಯ ಪಾತ್ರ ಪ್ರಮುಖವಾಗಿದೆ. ರಂಗ ಪರಂಪರೆಯೊಂದಿಗೆ ಸಾಹಿತ್ಯಿಕ ಪರಂಪರೆಯನ್ನು ಈ ಸಂಘಟನೆಯು ಮರಿಯಮ್ಮನಹಳ್ಳಿಯಲ್ಲಿ ಬೆಳೆಸುವ ಸಾಹಿತ್ಯಿಕ ಸಂಘಟನೆಯಾಗಿದೆ.

**ಮಾರುತಿ ಕಲಾ ಸಂಘ :**

ಮಾರುತಿ ಕಲಾ ಸಂಘವು ಬಯಲಾಟದಂತ ರಂಗ ಕಲೆಯನ್ನು ಉಳಿಸಿ ಬೆಳೆಸಿಕೊಂಡು ಹೋಗುವ ಸಲುವಾಗಿಯೇ ಜನ್ಮ ತಳೆಯಿತು. ಕೆ.ಯಂಕಣ್ಣ, ಕೆ.ರಾಮಚಂದ್ರಪ್ಪ, ಈಡಿಸೇರಕೊಂಡಪ್ಪ, ಸೋಗಿ ದುರುಗಪ್ಪ, ಬೆಲಕನ ಹಟ್ಟಿ ಸೋಮಣ್ಣ, ಬಿ.ಚಿದಾನಂದಪ್ಪ, ಎ.ಕೃಷ್ಣಪ್ಪ, ಸಿದ್ದಪ್ಪ, ಈ.ಸೋಮಣ್ಣ ಈ ಬಯಲಾಟ ತಂಡದ ಪ್ರಮುಖ ಕಲಾವಿದರು.

ಪ್ರತಿ ವರ್ಷ ಜಾತ್ರೆ ಸಂದರ್ಭದಲ್ಲಿ ಬಯಲಾಟವನ್ನು ಆಡುತ್ತಾರೆ. ಬಬ್ರುವಾಹನ ಕಾಳಗ, ರತಿ ಕಲ್ಯಾಣ, ರಾಮಾಯಣ, ಇವರು ಆಡುವ ಬಯಲಾಟಗಳು. ಪತ್ತರ್ ಖಾದರ್ ಸಾಬ್‌ಹತ್ತಿರ ಬಬ್ರುವಾಹನ ಕಾಳಗ, ರಾಮಾಯಣ ಕಲಿತಿದ್ದಾರೆ. ಮರಿಯಮ್ಮನ ಹಳ್ಳಿಯಲ್ಲದೇ, ಸುತ್ತಮುತ್ತಲಿನ ಊರುಗಳಲ್ಲಿ ಕೂಡ ಪ್ರದರ್ಶನ ನೀಡಿದ್ದಾರೆ.

**ಯಂಗ್ ಬಾಯ್ಸ್ ಯೂತ್ಸ್ ಕ್ಲಬ್ :**

ಹೆಸರೆ ಹೇಳುವಂತೆ ಯುವ ತರುಣರಿಂದ ಕೂಡಿದ ಸಂಘವಾಗಿದೆ. ಈ ಸಂಘದ ಸ್ಥಾಪನಾ ಅಧ್ಯಕ್ಷರಾಗಿ ಬಿ.ಎಂ.ಎಸ್.ಪ್ರಕಾಶ್ ಅವರು ಅತ್ಯಂತ ಉತ್ಸಾಹದಿಂದ ತಮ್ಮ ಕಾರ್ಯ ವ್ಯಾಪ್ತಿಯಲ್ಲಿನ ಕಾರ್ಯಕ್ರಮಗಳನ್ನು ಸಂಘ ಯಶಸ್ವಿಯಾಗಿ ನಡೆಸಿಕೊಂಡು ಬಂದಿದೆ. ಹೆಚ್ಚಾಗಿ ಕ್ರೀಡೆಗಳನ್ನು ಆಡಿಸುವುದು, ವಲಯ, ತಾಲ್ಲೂಕು ಮಟ್ಟದ ವಾಲಿಬಾಲ್, ಕ್ರಿಕೆಟ್ ಮುಂತಾದ ಕ್ರೀಡೆಯನ್ನು ಆಡಿಸಿದೆ. ಅಲ್ಲದೇ ಪ್ರತಿ ವರ್ಷ ನಿವೃತ್ತ ಶಿಕ್ಷಕರಿಗೆ ಸನ್ಮಾನ ಮಾಡುತ್ತಾರೆ. ಅಲ್ಲದೇ ಅನೇಕ ಜನಪದ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶ್ವಸಿಯಾಗಿ ನಡೆಸಿಕೊಂಡು ಬಂದಿದ್ದಾರೆ.

**ರೈತ ಸಂಘ :**

ಸ್ಥಳೀಯ ರೈತ ಸಂಘವು ತನ್ನದೇ ಆದ ರೀತಿಯಲ್ಲಿ ರೈತರ ಸಮಸ್ಯೆಗಳನ್ನು ಬಗೆಹರಿಸಿ ಅವರಿಗೆ ಮಾರ್ಗದರ್ಶನ ಅದರ ಜೊತೆಗೆ ಅವರ ಕಷ್ಟದಲ್ಲಿ ಭಾಗಿಗಳಾಗಿ ಅವರಿಗೆ ಸಲಹೆ ಸೂಚನೆ ನೀಡುತ್ತ ಬಂದಿದೆ. ಡಣಾಯಕನ ಕೆರೆಯ ಏತ ನೀರಾವರಿ ಯೋಜನೆಗಾಗಿ ಉಗ್ರ ಹೋರಾಟವನ್ನು ಇತರ ಸಂಘಟನೆಯ ಸಹಾಯದಿಂದ ಮಾಡಿದೆ. ರಾಷ್ಟ್ರೀಯ ಹೆದ್ದಾರಿ ಬಂದ್ ಮಾಡುವುದರ ಮೂಲಕ ಈ ಊರಿನ ರೈತರ ಜೀವನಾಡಿಯಾದ ಡಣಾಯಕನ ಕೆರೆಗೆ ತುಂಗಾಭದ್ರ ನದಿಯಿಂದ ನೀರು ಹರಿಸುವ ಸಲುವಾಗಿ ಅನೇಕ ವರ್ಷಗಳಿಂದ ಹೋರಾಟ ಮಾಡಿಕೊಂಡು ಬಂದಿದೆ. ಇವರ ಹೋರಾಟಕ್ಕೆ ಸರ್ಕಾರ ಸ್ಪಂದಿಸಿ ಯೋಜನೆ ಹಣ ಬಿಡುಗಡೆ ಮಾಡಿದೆ. ಇಂತಹ ಹೋರಾಟಗಳಿಂದ ರೈತ ಕ್ರಿಯಾಶೀಲವಾಗಿದೆ. ಸಂಘ ಸದಸ್ಯರುಗಳಾದ ಎಂ.ವಿರುಪಾಕ್ಷಯ್ಯ ಸ್ವಾಮಿ. ಕಲ್ಲಾಳ ಪರಶುರಾಮಪ್ಪ, ನೀರಳ್ಳಿ ಹನುಮಂತಪ್ಪ ಮುಂತಾದ ಮುಖಂಡರಿಂದ ಈ ರೈತ ಸಂಘವು ಕ್ರಿಯಾಶೀಲವಾಗಿದೆ.

## ವಾಲ್ಮೀಕಿ ಯುವಕ ಸಂಘ :

ಹೆಸರು ಹೇಳುವಂತೆ ವಾಲ್ಮೀಕಿ ಯುವಕ ಸಂಘವು ತಮ್ಮ ಸಮುದಾಯದ ಏಳಿಗೆಗಾಗಿ ಸ್ಥಾಪನೆಯಾಯಿತು. ಇದರ ಸ್ಥಾಪಕರು ಮಂಜುನಾಥ, ನಾಯಕ ಸಮುದಾಯಕ್ಕಾಗಿ ಸಂಘದಿಂದ ಅನೇಕ ಕಾರ್ಯಕ್ರಮಗಳನ್ನು, ಬಡ ವಿದ್ಯಾರ್ಥಿಗಳಿಗೆ ಬಟ್ಟೆ, ಪುಸ್ತಕ, ಮಹಿಳೆಯರಿಗೆ ಹೊಲಿಗೆ ತರಬೇತಿ ಶಿಬಿರವನ್ನು, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಮಾಡಿದೆ. ಸಾಮೂಹಿಕ ಮದುವೆ, ಕನ್ನಡ ವಿಶ್ವವಿದ್ಯಾಲಯದ ವಾಲ್ಮೀಕಿ ಪೀಠದ ಸಹಯೋಗದಲ್ಲಿ 'ಮರಿಯಮ್ಮನಹಳ್ಳಿ ಪರಿಸರದ ವಾಲ್ಮೀಕಿ ಸಮುದಾಯ' ಎಂಬ ವಿಚಾರಸಂಕಿರಣವನ್ನು ಫೆಬ್ರವರಿ ೨೦೦೭ರಲ್ಲಿ ಯಶಸ್ವಿಯಾಗಿ ನಡೆಸಿದ್ದಾರೆ.

# ಅಧ್ಯಾಯ - ೪

## ಆಚರಣೆಗಳು

ಮನುಷ್ಯ ಎಂದು ಈ ಪಕೃತಿಯ ವೈಚಿತ್ರಗಳನ್ನು ಕಂಡು ಬೆರಗಾಗಿ ಬೆದರಿ ತನಗಿಂತ ಯಾವುದೋ ಒಂದು ಆಗೋಚರವಾದ ಶಕ್ತಿಯನ್ನು ಗುರುತಿಸಿ ಈ ಪ್ರಕೃತಿಯಲ್ಲಿನ ಪ್ರತಿಯೊಂದು ಗಿಡ, ಮರ, ಪ್ರಾಣಿ ಪಕ್ಷಿ, ಸೂರ್ಯ, ಚಂದ್ರ, ನದಿ, ಬೆಟ್ಟ, ಗುಡ್ಡ, ಪರ್ವತ ಹೀಗೆ ಈ ಪ್ರಕೃತಿಯನ್ನು ಆರಾಧಿಸಲು ಪ್ರಾರಂಭಿಸಿದನೋ ಅಂದೇ ಆಚರಣೆಗಳು ಹುಟ್ಟಿಕೊಂಡವು ಎಂದು ಹೇಳಬಹುದು. ಮನುಷ್ಯ ತನ್ನ ಕಲ್ಪನೆಯ ಮೂಲಕ ಪ್ರಕೃತಿಯಲ್ಲಿಯ ಪ್ರತಿಯೊಂದಕ್ಕೂ ಜೀವ ತುಂಬುತ್ತ ಈ ಪ್ರಕೃತಿಯನ್ನು ಆರಾಧಿಸುತ್ತ ಅದರ ಸುತ್ತ ಪುರಾಣ, ಕಥೆ, ಅವತಾರ ರೂಪಗಳನ್ನೆಲ್ಲಾ ಕಟ್ಟಿಕೊಂಡು ದೇವರನ್ನು ಸೃಷ್ಟಿಸಿದ. ನಂತರ ಆ ದೇವರನ್ನು ಹಲವು ಹೆಸರುಗಳಲ್ಲಿ ಪೂಜಿಸಿದ ನಂತರ ದೇವರನ್ನು ಸಂತೃಪ್ತಿಗೊಳಿಸಲು ಹಲವು ಆಚರಣೆಗಳು, ನಂಬಿಕೆ, ಬೇಡಿಕೆ ಹೀಗೆ ಹಲವನ್ನು ಸೃಷ್ಟಿಸಿದ. ಮನುಷ್ಯನ ಇಂದಿನ ಆಚರಣೆಗಳಲ್ಲಿ ಮೂಲ ಆರಾಧನೆಯ ಈ ಸೃಷ್ಟಿ ಶಕ್ತಿಯ ಛಾಯೆಗಳು ಎದ್ದು ಕಾಣುತ್ತವೆ. ಈ ಹಿನ್ನೆಲೆಯಲ್ಲಿ ಮರಿಯಮ್ಮನಹಳ್ಳಿಯಲ್ಲಿನ ಮೂಲ ವಾಸಿಗಳ ಮತ್ತು ವಲಸೆ ಬಂದವರ ಬದುಕಿನಲ್ಲಿ ಆಚರಣೆಗಳ ವಿವರ ಅವುಗಳ ಪ್ರಾಮುಖ್ಯತೆ ಹಿನ್ನಲೆ ಮುಂತಾದ ವಿಶ್ಲೇಷಣೆಯನ್ನು ಕೈಗೊಳ್ಳಬಹುದು. ಈ ಘಟಕದಲ್ಲಿ ಮರಿಯಮ್ಮನಹಳ್ಳಿಯ ಮೂಲವಾಸಿಗಳ ಮತ್ತು ವಲಸಿಗರ ಬದುಕಿನಲ್ಲಿ ವಿಶಿಷ್ಟವಾಗಿ ಆಚರಿಸುವ ಜೀವನಾವರ್ತನದ ಹಾಗೂ ವಾರ್ಷಿಕಾವರ್ತನದ ಆಚರಣೆಗಳನ್ನು ಅಧ್ಯಯನ ಮಾಡಲಾಗಿದೆ.

### ೪.೧ ಜೀವನಾವರ್ತನದ ಆಚರಣೆಗಳು :

ಆಚರಣೆಗಳಿಲ್ಲದೆ ಮನುಷ್ಯನಿಲ್ಲ, ಹುಟ್ಟಿದ ಮಗುವಿನಿಂದ ಹಿಡಿದು ಸಾಯುವ ತನಕ ಆಚರಣೆಗಳೇ ಜೀವನದ ಜೊತೆಗಾರಿಕೆಗೆ ಒಳಪಟ್ಟಿರುತ್ತದೆ. ನಾವು ಎಷ್ಟೇ ವಿಚಾರವಂತರಾಗಿರುತ್ತೇವೆ

ಎಂದರೂ ಸಮಾಧಾನಕ್ಕೋಸ್ಕರವಾದರೂ ಆಚರಣೆಯನ್ನು ಅನುಸರಿಸುತ್ತೇವೆ. ಜೀವನವೇ ಒಂದು ಆಚರಣೆ ಎನ್ನಬಹುದು. ಆಚರಣೆ ಎನ್ನುವ ಆಡುಮಾತಿನ ಶಬ್ದವು ನಮ್ಮ ಜೀವನವನ್ನು ಭಾಗ ಮಾಡಲು ಬಹುದು ಅಥವಾ ಒಳ್ಳೆಯತನಕ್ಕೆ ಕೊಂಡೊಯ್ಯಬಹುದು. ಕಾಲಕ್ಕೆ ತಕ್ಕಂತೆ ನಾವುಗಳು ಬದಲಾದರೂ ಆಚರಣೆಗಳನ್ನು ಬಿಡದೆನೇ ಅವುಗಳಿಗೆ ಪ್ರತಿರೂಪವಾಗಿ ಬೇರೆ ರೀತಿಯಲ್ಲಿಯಾದರೂ ಅನುಸರಿಸುತ್ತಾ ಬಂದಿದ್ದೇವೆ. ಕೆಲವುಗಳನ್ನು ದೂರ ಸರಿಸಿದರೂ ಶಾಸ್ತ್ರಕ್ಕೆಂದು ಮಾಡುವುದಾಗಿದೆ. ಮತ್ತು ನಾವು ಎಷ್ಟೇ ಮುಂದುವರಿದರೂ ಆಚರಣೆಗಳನ್ನು ಬಿಟ್ಟಿಲ್ಲ.

ಆಚರಣೆಯನ್ನು ಒಂದು ವಿಧದಲ್ಲಿ ಮಾಡುತ್ತಾ ಹೋದಾಗ ಅದರಿಂದ ನಮಗೇನೋ ಜೀವನದ ಹಾದಿ ಗೊತ್ತಾಗಿರಬೇಕೇನೋ ಅದಕ್ಕೋಸ್ಕರ ಅಂದರೆ ಒಂದಕ್ಕೊಂದು ಪರಸ್ಪರ ಅಂದರೆ ಜೀವನಕ್ಕೂ ಮತ್ತು ಮನುಷ್ಯನಿಗೂ ಸಮಾಜದ ಒಳಿತಿಗೂ, ಕೆಡಕಿಗೂ ಸಂಬಂಧವಿದ್ದಿರಬಹುದು, ಆದಕಾರಣ ನಾವುಗಳು ಆಚರಣೆಗಳನ್ನು ಅನಸರಿಸುವಾಗಲೂ ಕೆಲವೊಂದು ಲೆಕ್ಕಾಚಾರದ ಸಾಮಾನುಗಳನ್ನು ವಸ್ತುಗಳನ್ನು, ತಕ್ಕಂತೆ ಬಣ್ಣದ ವಸ್ತುಗಳು, ಉಡುಪುಗಳು, ಬಳಸುವ ನೈಸರ್ಗಿಕ ಸಾಮಾನುಗಳು ಮತ್ತು ಅಧಿಕೃತವಾದ ವ್ಯಕ್ತಿಗಳು ಅಥವಾ ಅಧಿಕೃತತೆಗೆ ಒಳಪಟ್ಟಂತ ವ್ಯಕ್ತಿಗಳನ್ನೇ ಬಳಸುವುದು ಆಚರಣೆಯಲ್ಲಿ ವಾಡಿಕೆಯಾಗಿದೆ. ಇಂತಹ ಆಚರಣೆಗಳಿಗೆ ಇಂತಹ ವ್ಯಕ್ತಿಗಳೇ ಆಗಬೇಕು, ಇಂತಹವರಿಂದಲೇ ಈ ಕಾರ್ಯ ಸಾಗಲು ಸಾಧ್ಯ ಎನ್ನುವುದನ್ನು ಇಂದಿನ ದಿನದವರೆಗೂ ನಾವು ಕಾಣುತ್ತೇವೆ.

ಯಾವುದೋ ಒಂದು ಅಗೋಚರವಾದ ಶಕ್ತಿ ನಮ್ಮನ್ನು ಕಾಯುತ್ತಿರುತ್ತದೆ ಎಂದು ಪ್ರತಿಯೊಬ್ಬ ಮನುಷ್ಯರು ಆಚರಣೆಯನ್ನು ಕೈಗೊಳ್ಳುತ್ತಾರೆ. ಹಾಗಂತ ಆಚರಣೆಗಳಿಗೂ, ಅಗೋಚರ ಶಕ್ತಿಗೂ ಸಂಬಂಧವಿಲ್ಲ ಎಂದು ಹೇಳಲಿಕ್ಕಾಗುವುದಿಲ್ಲ ಅಥವಾ ಇದೆ ಎಂದು ಸಹ ಹೇಳಲಿಕ್ಕಾಗುವುದಿಲ್ಲ. ಹಾಗೇನೇ ಆಚರಣೆಯಿಲ್ಲದ ಜೀವನವಿಲ್ಲ, ಹುಟ್ಟಿದಾಗಿನಿಂದ ಹಿಡಿದು ಮನುಷ್ಯ ಸಾಯುವ ತನಕ ಆಚರಣೆಗಳು ಇರುತ್ತವೆ. ಮನುಷ್ಯ ಸತ್ತ ಮೇಲೂ ಆಚರಣೆಗಳಿರುವುದನ್ನು ಕಾಣುತ್ತೇವೆ. ಏಕೆಂದರೆ ಸತ್ತ ಮೇಲೆ ಮತ್ತೆ ಮರು ಹುಟ್ಟುವಿಕೆಗೆ ಅಲ್ಲಿಂದ ಮತ್ತೆ ಆಚರಣೆಗಳನ್ನು ಕಾಣುವುದಕ್ಕಾಗಿದೆ. ಮರಿಯಮ್ಮನ ಹಳ್ಳಿಯು ಒಂದು ಚಿಕ್ಕಗ್ರಾಮವಾದರೂ ಅಲ್ಲಿರುವ ಸಮುದಾಯಗಳು ಹಲವಾರು. ಪ್ರತಿಯೊಂದು ಸಮುದಾಯಕ್ಕೂ ತನ್ನದೇ ಆದ ಆಚರಣೆಗಳಿರುವುದನ್ನು ಕಾಣುತ್ತೇವೆ. ಸಾಮಾನ್ಯವಾಗಿ ಆಚರಣೆಗಳೂ ಒಂದು ಸಮುದಾಯದಿಂದ ಇನ್ನೊಂದು ಸಮುದಾಯದಲ್ಲಿ ನೋಡಿದಾಗ ಒಂದೇ ರೀತಿಯಲ್ಲಿರುತ್ತವೆ. ಏನೆಂದರೆ ಕೆಲವೊಂದು ಆಹಾರ ಪದಾರ್ಥಗಳಲ್ಲಿ ಆಚರಿಸುವ ವಿಧಾನದಲ್ಲಿ ಬೇರೆ ಬೇರೆ ಕಂಡು ಬಂದರೂ ಇನ್ನು ಉಳಿದುದೆಲ್ಲಾ ಒಂದೇ ರೀತಿಯದಾಗಿರುತ್ತದೆ.

ಜೀವನಾವರ್ತನದ ಆಚರಣೆಗಳಲ್ಲಿ ಹುಟ್ಟಿದಾಗಿನಿಂದ ಹಿಡಿದು ಸಾಯುವವರೆಗೂ ನಾವು ಆಚರಿಸುವ ಜನಪದ ಆಚರಣೆಗಳೆಲ್ಲಾ ವೈಜ್ಞಾನಿಕತೆಗೆ ಸಂಬಂಧಿಸಿದ್ದಾಗಿವೆ. ನಾವು ಯಾವುದನ್ನೂ ತುಚ್ಛ ಎಂದು ಹೇಳಲಿಕ್ಕಾಗುವುದಿಲ್ಲ. ಹುಟ್ಟಿದಾಗ ೩ ದಿನಕ್ಕೆ ೫ ದಿನಕ್ಕೆ, ೯ ದಿನಕ್ಕೆ, ೧೬ದಿನಕ್ಕೆ,

ಅಥವಾ ೩ ತಿಂಗಳ ತನಕ ಹಾಗೇನೇ ದೊಡ್ಡವರಾದಾಗ ೫,೯,೧೬ ಹಾಗೆನೇ ಮದುವೆಯ ಸಂದರ್ಭದಲ್ಲಿ, ಗರ್ಭಿಣಿಯಾದ ಸಂದರ್ಭದಲ್ಲಿ ಮತ್ತು ಬಾಣಂತಿಯಾದ ಸಂದರ್ಭದಲ್ಲಿ ದಿವಸಗಳಾಗಲೀ, ಬಳಸುವ ಉಡುಪುಗಳಾಗಲೀ, ವಸ್ತುಗಳಾಗಲೀ, ದಿನಿಸುಗಳಾಗಲಿ ಯಾವುದನ್ನೇ ತೆಗೆದುಕೊಂಡರೂ ಲೆಕ್ಕಾಚಾರದ ಸಂಕೇತವಾಗಿ, ಸರಿ ಬೆಸಸಂಖ್ಯೆಯ ಲೆಕ್ಕವಾಗಿ ಮನಸ್ಸಿನ ಆಸೆಗಳನ್ನು ಈಡೇರಿಸುವ ಮನಸ್ಸಿಗೆ ತೃಪ್ತಿಹೊಂದುವ ಮತ್ತು ವೈಜ್ಞಾನಿಕತೆಗೆ ಸಂಬಂಧಿಸಿದಂತವುಗಳನ್ನೇ ಕಾಣುತ್ತೇವೆ. ಆರೋಗ್ಯದ ದೃಷ್ಟಿಯಿಂದ, ಹಾರೈಕೆಯ ದೃಷ್ಟಿಯಿಂದ, ಕೆಟ್ಟ ದೃಷ್ಟಿತಾಕದೇ ಒಳ್ಳೆತನದ ಹಾದಿಯ ದೃಷ್ಟಿಯಿಂದ, ಕಾಣುವ ದೃಷ್ಟಿಯಿಂದ, ಪ್ರಕೃತಿಗೆ ಹೊಂದಿಕೊಳ್ಳುವ ದೃಷ್ಟಿಯಿಂದ ಇವುಗಳನ್ನು ಕಾಣುವುದಾಗಿದೆ. ಒಟ್ಟಾರೆ ಒಂದಕ್ಕೊಂದು ಪೂರಕ ಅಂಶಗಳನ್ನು ಜೀವನಾವರ್ತನದ ಆಚರಣೆಗಳಲ್ಲಿ ಕಾಣುತ್ತೇವೆ.

ಆಚರಣೆಗಳು ಏಕೆ, ಹೇಗೆ, ಯಾವಾಗ, ಯಾವುದು, ಏನನ್ನು ಎನ್ನುವುದನ್ನು ಕಂಡಾಗ ತಿಂಗಳು, ಋತು ಚಕ್ರಗಳು, ಕಾಲಗಳು,ಆಹಾರದ ವಿಶೇಷತೆಗಳಲ್ಲಿ ಹೆಚ್ಚಾಗಿ ಕಂಡುಕೊಳ್ಳುವುದೇ ಜೀವನಾವರ್ತನದ ಆಚರಣೆಯಾಗಿದೆ.

### ೪.೧.೧. ಸೀಮಂತ ಕಾರ್ಯ :

ಜೀವನಾವರ್ತನ ಆಚರಣೆಯಲ್ಲಿ ಹೆಣ್ಣಿಗೆ ಮಗು ಜನನ ಪೂರ್ವದಲ್ಲಿ ಮಾಡುವ ಆಚರಣೆಯಾಗಿದೆ. ಈ ಸೀಮಂತ ಕಾರ್ಯಕ್ಕೆ ಮತ್ತೊಂದು ಹೆಸರು ಇದೆ. 'ಕುಬಸ' ಮಾಡುವುದು ಎಂದು ಕರೆಯುತ್ತಾರೆ.

ಹೆಣ್ಣು ಗರ್ಭಿಣಿಯಾದ ಐದನೇ ತಿಂಗಳಲ್ಲಿ ಒಂದು ಆಚರಣೆ ನಡೆಯುತ್ತದೆ ಅದಕ್ಕೆ 'ಬಯಕೆ ಬುತ್ತಿ' ಎಂದು ಕರೆಯುತ್ತಾರೆ. ಈ ಆಚರಣೆ ಕೂಡ ಮರಿಯಮ್ಮನಹಳ್ಳಿಯಲ್ಲಿ ಎಲ್ಲಾ ವರ್ಗದಲ್ಲಿ ಕಂಡು ಬರುತ್ತದೆ.

ತವರು ಮನೆಯಿಂದ ತಂದೆ ತಾಯಿಗಳು ಈ ಬಯಕೆ ಬುತ್ತಿಯನ್ನು ತರುತ್ತಾರೆ. ಬಗೆಬಗೆಯ ಅಡುಗೆ ಮಾಡಿ ಆಕೆಗೆ ಉಡಿತುಂಬಿ ಆರದೆ ಮಾಡಿ ತಂದ ಬುತ್ತಿಯನ್ನು ತರುತ್ತಾರೆ. ಇದಾದ ಏಳು ತಿಂಗಳಲ್ಲಿ 'ಕುಬಸ' ಕಾರ್ಯಕ್ರಮ ಮಾಡುತ್ತಾರೆ. ಕೆಲವರು ತವರು ಮನೆಯಲ್ಲಿ ಮಾಡುತ್ತಾರೆ ಕೆಲವರು ಗಂಡನ ಮನೆಯಲ್ಲಿ ಮಾಡುತ್ತಾರೆ. ತಮ್ಮ ಸಮುದಾಯದ ಗುರುಗಳು, ಬ್ರಾಹ್ಮಣರು, ಶಾಸ್ತ್ರಿ ಮನೆಗಳಿಗೆ ಹೋಗಿ ಒಳ್ಳೆ ದಿವಸವನ್ನು ಕೇಳಿಕೊಂಡು ಈ ಕಾರ್ಯಕ್ರಮವನ್ನು ಮಾಡುತ್ತಾರೆ. ಈ ಕುಬಸ ಮಾಡುವ ಖರ್ಚು ತವರು ಮನೆಯವರದೆ ಆಗಿರುತ್ತದೆ. ಈ ಕಾರ್ಯಕ್ಕೆ ಬಂಧು ಬಳಗದವರನ್ನು ಕರೆಸುತ್ತಾರೆ. ತವರಿನವರು ಸೀರೆ–ಕುಪ್ಪಸ ಬಂಗಾರ ತರುತ್ತಾರೆ. ಅವರಿಬ್ಬರನ್ನು ಕೂಡಿಸಿ ಮಾಲೆ ಹಾಕಿ ಮೊದಲು ತವರಿನವರು ತಂದ ಸೀರೆ ಉಡಿಸಿ ದಂಡಿ ಹಾಕಿ ಎರಡು ತೆಂಗಿನಕಾಯಿಗಳನ್ನು ಉಡಿ ತುಂಬಿ ಆರತಿ ಬೆಳಗುತ್ತಾರೆ. ಗಂಡಿನ ಮನೆಯವರು ಸೀರೆ ಉಡಿ ತುಂಬುತ್ತಾರೆ. ನಂತರ ಊರಿನ ದೇವಸ್ಥಾನಕ್ಕೆ ಹೋಗಿ ಪೂಜೆ ಮಾಡಿಸಿಕೊಂಡು ಬರುತ್ತಾರೆ.

ಬಂದವರಿಗೂ ಊಟ ಮಾಡಿಸುತ್ತಾರೆ. ನಂತರ ಹೆಣ್ಣನ್ನು ಕಳುಹಿಸುವಾಗ ಉಡಿ ತುಂಬಿ ಕಳುಹಿಸುತ್ತಾರೆ. ಗಂಡನ ಮನೆಯಲ್ಲಿ ಇದ್ದಾಗ ಹಿಂದೂಗಳಲ್ಲಿ ಆಷಾಡ ಮಾಸದಂತೆ ಇವರು ಚೋಮಾಸದಲ್ಲಿ ಗಂಡನ ಮನೆಯಲ್ಲಿ ಇರುವುದಿಲ್ಲ, ತವರು ಮನೆಗೆ ಹೋಗುತ್ತಾರೆ.

ಜೈನರಲ್ಲಿ ಏಳನೇ ತಿಂಗಳಲ್ಲಿ ಸೀಮಂತ ಕಾರ್ಯ ಮಾಡುತ್ತಾರೆ. ಕೊಬ್ಬರಿ, ಗಾಜಿನ ಬಳೆ, ಕುಂಕುಮ ಮಹೆಂದಿ ಮುಖ್ಯವಾದ ವಸ್ತುಗಳು. ಈ ಕಾರ್ಯ ಮಾಡುವಾಗ ಬೆಲ್ಲ, ಕೊಬ್ಬರಿ ಅಕ್ಕಿಯನ್ನು ಉಡಿ ತುಂಬುತ್ತಾರೆ. ತವರಿನವರು ಕೆಂಪು ಅಥವಾ ಹಳದಿ ಬಣ್ಣದ ಸೀರೆಯನ್ನು ಸೀಮಂತ ಕಾರ್ಯದಲ್ಲಿ ಮಾಡುತ್ತಾರೆ, ಅಂದು ತವರಿನವರೆಲ್ಲರೂ, ನೆಂಟರು ಬಂದಿರುತ್ತಾರೆ. ಒಂದು ಒಳ್ಳೆಯ ದಿನವನ್ನು ಗೊತ್ತು ಪಡಿಸಿ ಈ ಕಾರ್ಯವನ್ನು ಮಾಡುತ್ತಾರೆ. ಅಂದು ಊಟದ ಖರ್ಚನ್ನು ಗಂಡಿನವರೇ ನೋಡಿಕೊಳ್ಳುತ್ತಾರೆ. ಉಡಿ ಸಾಮಾನಿನ ಜೊತೆಗೆ ಸಿಹಿ ಹಾಗೂ ಸೀರೆಗಳು, ಗಂಡನಿಗೆ ಬೆಳ್ಳಿ, ಬಂಗಾರ, ಬಟ್ಟೆ, ಅಲಂಕಾರ ಸಾಮಾನುಗಳನ್ನು ಮಂಚದ ಮೇಲೆ ಜೋಡಿಸಿ ಇಟ್ಟಿರುತ್ತಾರೆ. ಬಸುರಿ ಹೆಣ್ಣನ್ನು ಸುಂದರವಾಗಿ ಅಲಂಕಾರ ಮಾಡಿರುತ್ತಾರೆ.

ತವರಿನವರು ತಂದ ಸಿಹಿಯನ್ನು ತಮ್ಮ ಸಮಾಜದವರಿಗೆ ಹಂಚುತ್ತಾರೆ. ಹಿರಿಯ ಮುತ್ತೈದೆಯರು ದೇವರ ಹಾಡು, ಬಯಕೆ ಹಾಡನ್ನು ಹಾಡುತ್ತಾರೆ. ಚೊಚ್ಚಲು ಹೆರಿಗೆಗಾಗಿ ತವರು ಮನೆಗೆ ಹೋಗುತ್ತಾಳೆ.

### ೪.೧.೨. ನಾಮಕರಣ ಶಾಸ್ತ್ರ :

ಈ ಆಚರಣೆ ಎಲ್ಲಾ ವರ್ಗದಲ್ಲಿ ಕಂಡು ಬರುತ್ತದೆ. ಈ ಆಚರಣೆಯಲ್ಲಿ ವಿವಿಧತೆ ಇದ್ದರೂ ಶಾಸ್ತ್ರ ಸಂಪ್ರದಾಯ ಎಲ್ಲದರಲ್ಲೂ ಇದೆ, ಮಗು ಹುಟ್ಟಿದ ಗಳಿಗೆಯ ಅನುಗುಣವಾಗಿ ಶಾಸ್ತ್ರಿ ಅಥವಾ ಅರ್ಚಕರು ಏನಾದರು ದೋಷ ಇದ್ದರೆ, ತಂದೆ ಅಥವಾ ಸೋದರ ಮಾವ ಮೂರು ತಿಂಗಳು ಹದಿನಾರು ದಿವಸದವರೆಗೆ ಮುಖ ನೋಡ ಬಾರದೆಂದು ಹೇಳುತ್ತಾರೆ. ಅದಕ್ಕೆ ತೊಟ್ಟಿಲು ಶಾಸ್ತ್ರದ ದಿನದಂದು ಏನಾದರು ದಾನ ಮಾಡಬೇಕು. ಕೆಲವರು ಹೆಚ್ಚಾಗಿ ದವಸ, ದಾನ್ಯ, ಬೆಳ್ಳಿ, ಬಂಗಾರ, ವಸ್ತ್ರ, ಗೋವುಗಳನ್ನು ದಾನ ಮಾಡುತ್ತಾರೆ.

ನಾಮಕರಣವನ್ನು ಹೆಣ್ಣು ಮಗುವಿಗೆ ೧೬,೨೨ ದಿನದಲ್ಲಿ, ಗಂಡು ಮಗುವಿಗೆ ೨೧,೧೩ದಿನಗಳಲ್ಲಿ ಮಾಡುತ್ತಾರೆ. ಕೆಳವರ್ಗದಲ್ಲಿ ನಾಮಕರಣವನ್ನು ಊರಿನ ದೇವಸ್ಥಾನ (ಆಂಜನೇಯ ಸ್ವಾಮಿ, ಲಕ್ಷ್ಮೀನಾರಾಯಣ ಸ್ವಾಮಿ ದೇವಸ್ಥಾನ)ದಲ್ಲಿ ಮಗುವನ್ನು ದೇವರ ಮುಂದೆ ಹಾಕಿ ಹೆಸರನ್ನು ಇಡುತ್ತಾರೆ. ಕೆಲವು ಸ್ಥಿತಿವಂತರು ಮನೆಯಲ್ಲಿ ನಾಮಕರಣ ಮಾಡುತ್ತಾರೆ.

ನಾಣಿಕೇರಿಯಿಂದ ಬಂದಂತವರು ನಾಣಿಕೇರಪ್ಪನ ದೇವಸ್ಥಾನದಲ್ಲಿ ಮಾಡಿದರೆ, ಮೂಲ ಮರಿಯಮ್ಮನಹಳ್ಳಿಯವರು ಗ್ರಾಮ ದೇವತೆ ದುರುಗಮ್ಮನ ಸನ್ನಿದಿಯಲ್ಲಿ ಹೆಸರನ್ನು ಇಡುತ್ತಾರೆ. ಲಿಂಗಾಯಿತ ವೀರಶೈವರಲ್ಲಿ ತಮ್ಮ ಗುರುಗಳಿಂದ ಮಗುವಿಗೆ ಪಠಿಸುತ್ತಾರೆ. ಬಾಣಂತಿಯ ಮತ್ತು ಮಗುವಿನ ಬಟ್ಟೆಗಳನ್ನು ಒಗೆಯಲು ಅಗಸರಿಗೆ ಕೊಡುತ್ತಾರೆ. ಅಂದು ಬಾಣಂತಿಯನ್ನು

ಕರೆದುಕೊಂಡು ಹೋಗಿ ಸಮೀಪದ ಬಾವಿಗಳಿಗೆ ಹೋಗಿ ಗಂಗೆ ಪೂಜೆ ಮಾಡಿ ನಾಲ್ಕು ಜನ ಮುತ್ತೈದೆಯರಿಗೆ ಚಿಗಳಿ–ತಂಬಿಟ್ಟಿನ ಉಂಡಿ ತುಂಬಿ ಬಾಣಂತಿಗೂ ಉಡಿ ತುಂಬಿ, ಬಾಣಂತಿಯ ಕೈಯಲ್ಲಿ ತುಂಬಿದ ಕೊಡ ಹೊರಸಿಕೊಂಡು ಬರುತ್ತಾರೆ. ಅಲ್ಲಿಯವರೆಗೆ ಮನೆಯಲ್ಲಿ ಅಡುಗೆ ಮನೆ, ದೇವರ ಮನೆಗೆ ಹೋಗುವಂತಿಲ್ಲ, ಮನೆಯಲ್ಲಿ ಹೂವಿನಿಂದ ಅಲಂಕಾರ ಮಾಡಿದ ತೊಟ್ಟಿಲ ಕೆಳಗೆ ಸ್ವಲ್ಪ ಜೋಳ ಹಾಕಿ ಅದರ ಮೇಲೆ ಗಂಗೆ ಪೂಜೆ ಮಾಡಿ ತಂದಕೊಡವನ್ನು ಇಡುತ್ತಾರೆ. ತೊಟ್ಟಿಲಲ್ಲಿ ಮಂಡಾಳು ಮತ್ತು ನೆನಸುವ ಕಡ್ಲೆಕಾಳನ್ನು ಗಂಟು ಕಟ್ಟಿ ಮಗುವಿನ ಕಾಲ ಬಳಿ ಇಟ್ಟಿರುತ್ತಾರೆ. ಗಂಗೆ ಪೂಜೆಗೆ ಹೋದಾಗ ನಾಲ್ಕು ಜನ ಉಡಿ ತುಂಬಿಸಿಕೊಂಡ ಮಹಿಳೆಯರು ತೊಟ್ಟಿಲ ನಾಲ್ಕು ಮೂಲೆಗೂ ನಿಂತಿರುತ್ತಾರೆ. ಹೊಸದಾಗಿ ಮದುವೆಯಾದ ಹೆಣ್ಣು ಮಕ್ಕಳನ್ನು ಮತ್ತು ಮಕ್ಕಳಾಗದೆ ಇರುವವರು ಉಡಿ ತುಂಬಿರುತ್ತಾರೆ. ಎಲ್ಲಾ ಸಮುದಾಯದಲ್ಲಿ ಸೋದರ ಮಾವ ಅಥವಾ ಸೋದರ ಅತ್ತೆ ಬಂದು ತೊಟ್ಟಿಲಲ್ಲಿ ಕಾಯಿ ಒಡೆದು ಪೂಜಾರಿಗಳು ಅಥವಾ ಜಂಗಮ ಗುರುಗಳು ಹೇಳಿದ ಹೆಸರನ್ನು ಮಗುವಿನ ಕಿವಿಯಲ್ಲಿ ಕೂಗುತ್ತಾರೆ. ಆಗ ಜನರು, ಬೆನ್ನಿಗೆ ಗುದ್ದುತ್ತಾರೆ. ಎಲ್ಲಾ ವರ್ಗಗಳಲ್ಲಿ ಮೊದಲು ಮನೆಯ ದೇವರ ಹೆಸರು ಕರೆದು, ಹಿರಿಯರ ಹೆಸರು, ಜನ್ಮನಾಮದ ಹೆಸರನ್ನು ಕರೆದು ನಂತರ ಪ್ರೀತಿಯಿಂದ ಬೇರೆ ಬೇರೆ ಹೆಸರು ಕರೆಯುತ್ತಾರೆ. ಬಂದಂತವರು ಬಾಣಂತಿಗೆ ಉಡಕ್ಕಿ ತುಂಬುವ ಕಾರ್ಯ ಮಾಡುತ್ತಾರೆ.

ಜೈನರಲ್ಲಿ ತೊಟ್ಟಿಲಲ್ಲಿ ಹೆಸರು ಇಡುವುದಿಲ್ಲ. ಸಂಬಂಧಿಕರು ನಾಲ್ಕು ಜನ ಗಂಡಸರು ಕೆಂಪು ಬಣ್ಣದ ಸೀರೆಯನ್ನು ನಾಲ್ಕು ಮೂಲೆಗೆ ಒಂದು ಕೈಯಿಂದ ಹಿಡಿದುಕೊಂಡು ಇನ್ನೊಂದು ಕೈಯಲ್ಲಿ ಸಿಹಿಯನ್ನು ಹಿಡಿದು ಕೊಂಡಿರುತ್ತಾರೆ. ಮಗುವಿಗೆ ಚೆನ್ನಾಗಿ ಅಲಂಕಾರ ಮಾಡಿ ಸೀರೆ ಮೇಲೆ ಮಲಗಿಸಿರುತ್ತಾರೆ. ಸೋದರ ಮಾವ ಹೆಸರು ಇಡುತ್ತಾನೆ. ಸಿಹಿಯನ್ನು ಕೈಯಲ್ಲಿ ಹಿಡಿದು ಮಗುವಿನ ಜನ್ಮ ನಾಮವನ್ನು ಕರೆದು ನಂತರ ಪ್ರೀತಿಯಿಂದ ಇಷ್ಟವಾದ ಹೆಸರನ್ನು ಕರೆಯುತ್ತಾರೆ. ತವರಿನಲ್ಲಿ ನಡೆಯುತ್ತದೆ.

ಮಗುವಿಗೆ ಬಂಗಾರದ ಸರ, ಉಂಗುರ ನೀಡುತ್ತಾರೆ. ಬಂದಂತವರು ಉಡುಗೊರೆ ನೀಡುತ್ತಾರೆ. ಸಂಬಂಧಿಕರು ತಮ್ಮ ಯೋಗ್ಯತೆ ಅನುಸಾರವಾಗಿ ಉಡುಗೊರೆ ನೀಡುತ್ತಾರೆ. ನಂತರ ಬಾಣಂತಿಗೆ ಉಡಿ ತುಂಬುತ್ತಾರೆ. ಎರಡು ತಿಂಗಳ ನಂತರ ಗಂಡನ ಮನೆಗೆ ಹೋಗುತ್ತಾಳೆ.

**೪.೧.೩. ಮುಂಜಿ, ಉಪನಯನ :**

ಉಪನಯನವನ್ನು ಬ್ರಾಹ್ಮಣರು ವೈಶ್ಯರು ಅಕ್ಕಸಾಲಿಗರು ವಿಶ್ವಕರ್ಮದವರು ಮಾಡಿಸುತ್ತಾರೆ. ವೈಶ್ಯರು ಮದುವೆ ಸಂದರ್ಭದಲ್ಲಿ ಉಪನಯನವನ್ನು ಮಾಡಿಸಿದರೆ ಬ್ರಾಹ್ಮಣರು ಬಾಲ್ಯದಲ್ಲಿ ಮಾಡಿಸುತ್ತಾರೆ. ಬ್ರಾಹ್ಮಣರಿಗೆ ಉಪನಯನ ಅತ್ಯಗತ್ಯ. ಉಪನಯನ ಮಾಡುವದಿನದ ಹಿಂದಿನ ದಿನವೇ ಮದುವೆಯಲ್ಲಿ ಮಡುವ ಮದುಮಗನಂತೆ ಅರಿಶಿನ ದಬ್ಬೆ ಸುರುಗಿ ನೀರು ಹಾಕಿ ಹೊಸ ಬಟ್ಟೆ ತೊಡಸಿ ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ ಪೂಜೆ ಮಾಡಿಸಿಕೊಂಡು ಬರುತ್ತಾರೆ.

ಉಪನಯನದ ದಿನ ಕೂದಲನ್ನು ತೆಗೆಸುತ್ತಾರೆ. ತಲೆಯ ಮಧ್ಯದಲ್ಲಿ ಚಿಕ್ಕ ವೃತ್ತಕಾರದ ಜುಟ್ಟು (ಚಂಡಿ) ಬಿಡುತ್ತಾರೆ. ಹೋಮ ಹವನವನ್ನು ಮಾಡಿಸಿ ತನ್ನ ತಂದೆಯಿಂದ ಗಾಯಿತ್ರಿ ಮಂತ್ರ ಉಪದೇಶ ಮಾಡಿಸುತ್ತಾರೆ. ನಂತರ ಬಂದವರಿಂದ ಬಿಕ್ಷಾಟನೆ ಮಾಡಿಸುತ್ತಾರೆ. ಜನಿವಾರಧಾರಣೆ ಮಾಡುತ್ತಾರೆ. ಪ್ರತಿ ದಿನ ಸಂಧ್ಯಾವಂದನೆ ಮಾಡುತ್ತಾರೆ.

ವೀರಶೈವ ಜಂಗಮರಲ್ಲಿ ಆಯಾಚಾ, ಎಂದು ಕರೆಯುತ್ತಾರೆ. ಬಾಲ್ಯದಲ್ಲಿಯೇ ಮಾಡಿಸುತ್ತಾರೆ. ಲಿಂಗಧಾರಣೆಯನ್ನು ಸ್ವಾಮಿಯಿಂದ ಮಾಡಿಸಿ ಪಂಚಾಕ್ಷರಿ ಮಂತ್ರ ಉಪದೇಶ ಮಾಡುತ್ತಾರೆ. ನಂತರ ಐದು ಮನೆಗಳಿಗೆ ಹೋಗಿ ಭಿಕ್ಷೆ ಬೇಡುತ್ತಾರೆ.

ನಾಯಕ ಸಮುದಾಯದಲ್ಲಿ ಮುಂಜಿ ಎಂದು ಕರೆಯುತ್ತಾರೆ. ಇಲ್ಲಿ ಶಂಖ, ಚಕ್ರದ ಮುದ್ರೆ ಹಾಕುತ್ತಾರೆ. ಹುಡುಗ ಮತ್ತು ಮನೆಯವರು ಸೇರಿ ಮೆರವಣಿಗೆ ಮೂಲಕ ಅಂಜನೇಯ ದೇವಸ್ಥಾನಕ್ಕೆ ಹೋಗುತ್ತಾರೆ. ದೇವಸ್ಥಾನದ ಪೂಜಾರಿಯು ಶಂಖ ಚಕ್ರದ ಮುದ್ರೆಯನ್ನು ಕೆಂಡದಲ್ಲಿ ಕಾಯಿಸಿ ಅದನ್ನು ಹುಡುಗನಿಗೆ ಎದೆ ಭಾಗದಲ್ಲಿ ಮುದ್ರೆ ಹಾಕುತ್ತಾನೆ.

ಮುಸ್ಲಿಂರಲ್ಲಿ 'ಖತ್ನಾ' ಎಂದು ಕರೆಯುತ್ತಾರೆ. ಇಲ್ಲಿ ಏಳು ವರ್ಷದ ಒಳಗೆ ಬಾಲಕನಿಗೆ ಅವನ ಶಿಶ್ನದ ಮುಂದಿನ ಭಾಗದ ಚರ್ಮವನ್ನು ಕತ್ತರಿಸಿ ಇಸ್ಲಾಂ ಧರ್ಮದ ದೀಕ್ಷೆ ನೀಡುತ್ತಾರೆ. ಇದಕ್ಕೆ 'ಸುನ್ನಾತ' ಎಂದು ಕೂಡ ಕರೆಯುತ್ತಾರೆ.

ಕೆಲವರು ಹುಟ್ಟಿದ ಏಳು, ಒಂಬತ್ತು ದಿನಕ್ಕೆ ಈ ಖತ್ನಾವನ್ನು ಮಾಡುತ್ತಾರೆ. ೨೧ ದಿನದವರೆಗೆ ಅವನಿಗೆ ಸ್ನಾನ ಮಾಡಿಸುವುದಿಲ್ಲ. ೨೧ ದಿನ ಆದ ನಂತರ ಅವನಿಗೆ ಸ್ನಾನ ಮಾಡಿ ಮಸೀದಿಗೆ ಕರೆದುಕೊಂಡುಬಂದು ನಮಾಜ್ ಮಾಡಿಸಿ, ಕಲ್ಮಾ ಓದಿಸಿ, ನಂತರ ಅವನು ಇಸ್ಲಾಂಮಿಯಾಗುತ್ತಾನೆ.

ಹರಿಜನರಲ್ಲಿ ಮುದ್ರೆ ಹಾಕಿಸುತ್ತಾರೆ ಅವರಿಗೆ ಅವರ ಗುರುಗಳಾದ ದಾಸಯ್ಯನವರು ಹಾಕುತ್ತಾರೆ. ಶಂಖ ಚಕ್ರ ಹಾಕುತ್ತಾರೆ. ನಾಣಿಕೇರಿಯ ಹರಿಜನರು ನಾಣಿಕೇರಪ್ಪನ ಜಾತ್ರೆ ಸಂದರ್ಭದಲ್ಲಿ ತಮ್ಮ ಮಕ್ಕಳಿಗೆ ಮುದ್ರೆ ಹಾಕಿಸುತ್ತಾರೆ. ಬೇರೆ ಯಾವುದೇ ಸಂದರ್ಭದಲ್ಲಿ ಮುದ್ರೆ ಹಾಕಿಸುವುದಿಲ್ಲ. ಮರಿಯಮ್ಮನಹಳ್ಳಿಯ ಮೂಲ ಹರಿಜನರು ತಮ್ಮ ದುರ್ಗಮ್ಮನ ದೇವಸ್ಥಾನದಲ್ಲಿ ಮುದ್ರೆ ಹಾಕಿಸುತ್ತಾರೆ.

**೪.೧.೪. ಋತುಮತಿ :**

ಋತುಮತಿ ಎನ್ನುವುದು ಹೆಣ್ಣಿನ ಜೀವನದಲ್ಲಿ ಬರುವ ಮಹತ್ವದ ಘಟ್ಟವಾಗಿದೆ. ಹೆಣ್ಣಿಗೆ ಪ್ರೌಢ ಬರುವುದು ಈ ಋತುಮತಿ ಆದಾಗ, ಮರಿಯಮ್ಮನ ಹಳ್ಳಿಯಲ್ಲಿ ಋತುಮತಿಯಾದವಳು ಎನ್ನುವುದಕ್ಕೆ 'ದೊಡ್ಡವಳಾದಳು' ಎನ್ನುತ್ತಾರೆ.

ಋತುಮತಿ ಆದಾಗ ಆಚರಿಸುವಂತಹ ಆಚರಣೆಗಳು ಎಲ್ಲಾ ವರ್ಗದಲ್ಲಿ ಕಂಡು ಬರುತ್ತವೆ. ಹೆಣ್ಣು ಋತುಮತಿಯಾದಾಗ ಸೂತಕವನ್ನು ಆಚರಿಸುತ್ತಾರೆ.

ಬ್ರಾಹ್ಮಣರು, ವೈಶ್ಯರು, ಲಿಂಗಾಯಿತರು ಋತುಮತಿಯಾದ ಹೆಣ್ಣನ್ನು ಮನೆಯ ಒಂದು ಕೋಣೆಯಲ್ಲಿ ಕೂಡಿಸುತ್ತಾರೆ. ನಾಯಕರು, ಹರಿಜನರು, ಕುರುಬರು, ಈಡಿಗರು ಋತುಮತಿಯಾದ ಹೆಣ್ಣನ್ನು ಒಂದು ಮೂಲೆಯಲ್ಲಿ ಕೂಡಿಸುತ್ತಾರೆ. ಹರಿಜನರಲ್ಲಿ ಹುಡುಗಿ ದೊಡ್ಡವಳಾದ ವಿಷಯವನ್ನು ಕೇಳಿ, ಸೋದರ ಮಾವ ಹುಡುಗಿ ಮನೆ ಮುಂದೆ ಚಪ್ಪರ ಹಾಕಿ ಕುಳಿತುಕೊಳ್ಳುತ್ತಾನೆ. ಆಗ ಹುಡುಗಿ ಸೋದರಮಾವನಿಗೆ ತಾನು ಎಲ್ಲಿ ಕೂಡಬೇಕು ಎಂದು ಹೇಳಿ ಆ ಚಪ್ಪರದಲ್ಲಿ ಕುಳಿತುಕೊಳ್ಳುತ್ತಾನೆ.

ಬ್ರಾಹ್ಮಣ, ವೈಶ್ಯ, ಲಿಂಗಾಯಿತರಲ್ಲಿ, ಬೇಡರಲ್ಲಿ ಹುಡುಗಿಗೆ ನೀರುಹಾಕುವ ಸಂದರ್ಭದಲ್ಲಿ ಸೋದರ ಅತ್ತೆಯರು ನೀರುಹಾಕುತ್ತಾರೆ. ಸ್ನಾನ ಮಾಡಿಸುವ ಮೊದಲು ಮುತ್ತೈದೆಯರು ಹಾಲು ತುಪ್ಪ ತಲೆಗೆ ಹಚ್ಚಿ, ಎಣ್ಣೆ ಹಾಕಿ, ಅರಿಶಿನ ಹಚ್ಚಿ ಸ್ನಾನ ಮಾಡಿಸುತ್ತಾರೆ. ಆಕೆಯ ಬಟ್ಟೆಯನ್ನು ಆಗಸರು ಒಗೆದು ತಂದಿರುತ್ತಾರೆ. ಆ ಬಟ್ಟೆಯನ್ನ ಹಾಕಿ ಪೂರ್ವ ದಿಕ್ಕಿಗೆ ಮುಖ ಮಾಡಿ ಕೂಡಿಸುತ್ತಾರೆ. ಆಕೆಯನ್ನು ಮುಟ್ಟದೇ ಎಲೆ ಅಡಿಕೆ, ಉಡಿ ತುಂಬಿ ಆರತಿ ಮಾಡುತ್ತಾರೆ. ಋತುಮತಿಯಾದ ಹುಡುಗಿಯನ್ನು ಬಿಟ್ಟು ಬೇರೆ ಯಾರು ಜೊತೆಗೆ ಕುಳಿತುಕೊಳ್ಳುವುದಿಲ್ಲ. ಋತುಮತಿಯಾದಾಗ ಉಟ್ಟ ಬಟ್ಟೆಯನ್ನು ಅಗಸರಿಗೆಕೊಡುತ್ತಾರೆ. ಕೊಡುವಾಗ ಅಕ್ಕಿ, ಗೋಧಿ, ಬೆಲ್ಲ, ಕಾಯಿ, ಎಲೆ, ಅಡಿಕೆ, ಕುಂಕುಮ, ಅರಿಶಿನ ದಕ್ಷಿಣೆ ಕೊಡುತ್ತಾರೆ.

ಹುಡುಗಿ ದೊಡ್ಡವಳಾದಾಗ ಕೊಬ್ಬರಿ, ಬೆಲ್ಲ, ಎಳ್ಳು ತಿನ್ನಲು ಎಲ್ಲಾ ಸಮುದಾಯದಲ್ಲಿ ಕೊಡುವುದು ಕಂಡು ಬರುತ್ತದೆ. ಐದು ದಿನದವರೆಗೆ ಮುತ್ತೈದೆಯರೆಲ್ಲಾ ಸೇರಿ ಆರತಿ ಮಾಡುತ್ತಾರೆ. ಎಲ್ಲಾ ಸಮುದಾಯದಲ್ಲಿ ಐದು ದಿನದವರೆಗೆ ಯಾರು ಮುಟ್ಟಿಸಿಕೊಳ್ಳುವುದಿಲ್ಲ. ಐದು ದಿನ ಕಳೆದ ನಂತರ ಅಂದು ಮನೆ ದೇವರಿಗೆ ಪೂಜೆ ಮಾಡಿ ಆಕೆಯನ್ನು ಮನೆಯೊಳಗೆ ಕರೆದುಕೊಳ್ಳುತ್ತಾರೆ.

ಐದನೇ ದಿನದಿಂದ ಆಕೆಗೆ ವಿವಿಧ ಬಗೆಯ ವೇಷ ಭೂಷಣಗಳನ್ನು ಹಾಕಿ ಕೂಡಿಸುವ ಸಂಪ್ರದಾಯ ಬ್ರಾಹ್ಮಣ, ವೈಶ್ಯ, ಲಿಂಗಾಯಿತರಲ್ಲಿ ಕಂಡು ಬರುತ್ತದೆ. ಉಳಿದ ನಾಯಕರು, ಹರಿಜನರಲ್ಲಿ ಹೆಚ್ಚಾಗಿ ಕಂಡು ಬರುವುದಿಲ್ಲ ಇದಕ್ಕೆ ಕಾರಣ ಅವರ ಆರ್ಥಿಕ ಪರಿಸ್ಥಿತಿ, ಆರ್ಥಿಕ ಪರಿಸ್ಥಿತಿ ಚೆನ್ನಾಗಿ ಇರುವವರು ಈ ವರ್ಗದಲ್ಲಿ ವೇಷಭೂಷಣ ಹಾಕಿ ಭರ್ಜರಿಯಾಗಿ ಆಚರಿಸುತ್ತಾರೆ. ಕೆಲವರು ಒಂಭತ್ತು, ಹನ್ನೊಂದು, ಹದಿನಾರು ದಿನಗಳವರೆಗೆ ಕೂಡಿಸುತ್ತಾರೆ. ಹೆಚ್ಚಾಗಿ ಒಂಭತ್ತು ದಿನಗಳವರೆಗೆ ಕೂಡಿಸುತ್ತಾರೆ. ಏಕೆಂದರೆ ಆಧುನಿಕತೆಯ ಪ್ರಭಾವದಿಂದಾಗಿ ಹೆಚ್ಚಾಗಿ ಯಾರು ಆಚರಣೆಗಳನ್ನು ಮಾಡಲು ಇಷ್ಟಪಡುವುದಿಲ್ಲ. ಕೊನೆದಿನ ಆಚರಣೆಗೆ ಹುಡುಗಿಯನ್ನು 'ಎಬ್ಬಿಸು'ವ ಕಾರ್ಯ ಮಾಡುತ್ತಾರೆ. ಇದನ್ನು ಭರ್ಜರಿಯಾಗಿ ಆಚರಿಸುತ್ತಾರೆ. ಅಂದು ಸಂಜೆ ದೀಪದ ಅಲಂಕಾರ, ಸೀರೆ ಅಲಂಕಾರ ಮಾಡುತ್ತಾರೆ. ಅಂದು ಹುಡುಗಿಗೆ ಬಳೆತೊಡಿಸಿ, ಗಂಗಮ್ಮನ ಮಾಡುತ್ತಾರೆ. ಹೆಣ್ಣಜ್ಜಿಯವರು ಒಸಗೆ ತರುತ್ತಾರೆ. ಒಸಗೆ ತರುವವರು ಹಣ್ಣು, ಹೂ, ಎಲೆ, ಅಡಿಕೆ ವಿವಿಧ ಬಗೆಯ ಐದು ತಿನಿಸುಗಳಾದ ಕಾರ, ಚಕ್ಕುಲಿ ಮುಂತಾದವು ಜೊತೆಗೆ ಸೀರೆ, ಕುಪ್ಪಸ ತಂದು

ಹುಡುಗಿ ಕೈಯಿಂದ ಮುಟ್ಟಿಸಿ ಆರತಿ ಮಾಡುತ್ತಾರೆ. ಮೈನೆರತ ಹಾಡು, ಆರತಿ ಹಾಡು ಹೇಳುತ್ತಾರೆ.

ಅಂದು ಊರಿನ ಪ್ರಮುಖ ದೇವರಾದ ಲಕ್ಷ್ಮೀನಾರಾಯಣಸ್ವಾಮಿ ಅಂಜನೇಯ ಸ್ವಾಮಿ ದುರುಗಮ್ಮನ ದೇವಸ್ಥಾನಕ್ಕೆ ಪೂಜೆ ಮಾಡಿಸಿಕೊಂಡು ಬರುತ್ತಾರೆ. ಹುಡುಗಿಯನ್ನು ಎಬ್ಬಿಸುವ ಕಾರ್ಯಕ್ರಮಕ್ಕೆ ತಮ್ಮ ಸಂಬಂಧಿಕರು, ನೆಂಟರು, ಸ್ನೇಹಿತರನ್ನು ಕರೆದಿರುತ್ತಾರೆ.

**೪.೧.೫. ಮದುವೆ :**

ಮದುವೆ ಹೆಣ್ಣುಗಂಡಿನವರು ಸೇರಿ ವಿಧಿ-ವಿಧಾನಗಳ ಮೂಲಕ ಆಚರಿಸುವಂತಹ ಕ್ರಿಯೆ ಆಗಿದೆ. ಬೆಡಗು, ಗೋತ್ರವಾರ ಮಹತ್ವದ ಸ್ಥಾನ ಪಡೆದಿವೆ.

ಮೊದಲು ಹೆಣ್ಣು ನೋಡುವುದು ಎಲ್ಲಾ ಸಮುದಾಯದ ಪದ್ಧತಿ. ಹೆಣ್ಣುನೋಡಲು ವಧುವಿರುವ ಕಡೆ ವರ ಹೋಗುತ್ತಾನೆ. ಆದರೆ ಬ್ರಾಹ್ಮಣರಲ್ಲಿ ವರನಿರುವ ಕಡೆ ವಧು ಕರೆದುಕೊಂಡು ಹೋಗುವ ಪದ್ಧತಿ ಇದೆ.

ಲಿಂಗಾಯಿತರಲ್ಲಿ, ಬ್ರಾಹ್ಮಣರಲ್ಲಿ ವೈಶ್ಯರಲ್ಲಿ ಹೆಣ್ಣು ನೋಡಲು ಹೋದಾಗ ಹಾಡು ಹೇಳಿಸುತ್ತಾರೆ. ಗಂಡಿನವರು ತಂದ ಹೂ, ಹಣ್ಣು, ಕಲ್ಲು, ಸಕ್ಕರೆ, ಅರಿಷಿಣ, ಕುಂಕುಮ, ಎಲೆ, ಅಡಿಕೆ, ಮುಂತಾದ ವಸ್ತುಗಳನ್ನು ದೇವರ ಮುಂದೆ ಇಟ್ಟು ಪೂಜೆ ಮಾಡುತ್ತಾರೆ. ಹೆಣ್ಣು ಒಪ್ಪಿದ ಬಳಿಕ ಮನೆ ನೋಡುತ್ತಾರೆ. ನಂತರ ಹೆಣ್ಣಿನ ಕಡೆಯವರು ಗಂಡಿನ ಸ್ಥಳಕ್ಕೆ ಹೋಗಿ ಅವರ ಬಗ್ಗೆ ಅವರ ಮನೆತನದ ಬಗ್ಗೆ ವಿಚಾರಿಸಿಕೊಂಡು ಒಪ್ಪಿಗೆಯಾದರೆ ಮಾತುಕತೆ ಮುಗಿಸಿಕೊಂಡು ಸಿಹಿಯೂಟ ಮಾಡಿ ಬರುತ್ತಾರೆ. ಈ ರೀತಿ ಬರುವ ಪದ್ಧತಿ ಎಲ್ಲಾ ಸಮುದಾಯದಲ್ಲಿ ಕಂಡು ಬರುತ್ತದೆ.

**ನಿಶ್ಚಿತಾರ್ಥ :**

ನಿಗದಿ ಪಡಿಸಿದ ದಿನದಂದು ಒಂದು ಹೆಣ್ಣನ್ನು ಗಂಡಿಗೆ ಮದುವೆಯಾಗಲು ನಿಶ್ಚಿಯಿಸಿ ಮಾಡುವ ದಿನವಾಗಿದೆ. ಈ ಕಾರ್ಯ ಎಲ್ಲಾ ಸಮುದಾಯದಲ್ಲಿ ಕಂಡು ಬರುತ್ತದೆ. ಇದನ್ನು ಹೆಣ್ಣಿನ ಮನೆಯಲ್ಲಿ ಮಾಡುತ್ತಾರೆ. ಆಯಾ ಸಮುದಾಯದ ಹಿರಿಯರು ಹೆಣ್ಣನ್ನು ಕೂಡಿಸಿ ತಾಂಬೂಲವನ್ನು ನೀಡುತ್ತಾರೆ. ಅದನ್ನು ಗಂಡಿನವರು ಹೆಣ್ಣಿನವರು ಸ್ವೀಕರಿಸಿದರೆ ಮಾತಾಡಿದಂತೆ. ಬ್ರಾಹ್ಮಣರು ವೈಶ್ಯರು ಹೆಣ್ಣಿನ ಮನೆಯಲ್ಲಿಯೇ ಧಾರೆ ಎರೆಯುತ್ತಾರೆ. ಲಿಂಗಾಯಿತರು, ನಾಯಕರು, ಹರಿಜನರು, ಗಂಡಿನ ಅಥವಾ ಹೆಣ್ಣಿನ ಮನೆಯಲ್ಲಿ ಮದುವೆ ಆಗುತ್ತದೆ.

**ಲಗ್ನ ಪತ್ರಿಕೆ :**

ಮೊದಲೆಲ್ಲಾ ಮೇಲಿನ ವರ್ಗದಲ್ಲಿ ಲಗ್ನ ಪತ್ರಿಕೆ ತಾಂಬೂಲಕೊಟ್ಟು ಕರೆಯುವುದು ವಾಡಿಕೆಯಾಗಿತ್ತು. ಈಗ ಎಲ್ಲಾ ಸಮುದಾಯದವರು ಲಗ್ನ ಪತ್ರಿಕೆಯನ್ನು ಕೊಟ್ಟು ಕರೆಯುತ್ತಾರೆ.

ಮದುವೆ ಒಂದು ವಾರ ಮುಂಚೆ ಇರುವಾಗ ಲಗ್ನಪತ್ರಿಕೆ ಪ್ರಿಂಟು ಹಾಕಿಸುತ್ತಾರೆ.

ಬ್ರಾಹ್ಮಣರು, ವೈಶ್ಯರು, ಲಿಂಗಾಯಿತರಲ್ಲಿ ಲಗ್ನ ಪತ್ರಿಕೆಯನ್ನು ದೇವರ ಮುಂದೆ ಇಟ್ಟು ಪೂಜೆ ಮಾಡಿ ಲಗ್ನಪತ್ರಿಕೆಯ ಐದು ಮೂಲೆಯಲ್ಲಿ ಕುಂಕುಮ ಹಚ್ಚಿ ಪೂಜೆ ಮಾಡುತ್ತಾರೆ. ನಂತರ ಮೊದಲ ಪತ್ರಿಕೆಯನ್ನು ತಮ್ಮ ಕುಲದೈವದ ಮುಂದೆ ಇಡುತ್ತಾರೆ. ನಂತರ ತಮ್ಮ ಸಮುದಾಯದ ಗುರುವಿಗೆ ನೀಡುತ್ತಾರೆ. ಲಿಂಗಾಯಿತ, ಬ್ರಾಹ್ಮಣರು, ವೈಶ್ಯರಲ್ಲಿ ಲಗ್ನ ಪತ್ರಿಕೆಯನ್ನು ಹಂಚುವ ಕಾರ್ಯ ಗಂಡಸರು ಮಾಡುತ್ತಾರೆ. ಹೆಂಗಸರು ತಮ್ಮ ಸಮುದಾಯದ ಹೆಂಗಸರನ್ನು ಕರೆದು ಒಳಕಲ್ಲು ಪೂಜೆ ಮಾಡಿ ಅದರಲ್ಲಿ ಅಕ್ಕಿ ಹಾಕಿ ಶಾಸ್ತ್ರದ ಪ್ರಕಾರ ಐದು ಜನ ಮುತ್ತೈದೆಯರು ಕುಟ್ಟೋದು, ಹಾಗೆ ಬೀಸುವ ಕಲ್ಲಿನ ಪೂಜೆ ಮಾಡುತ್ತಾರೆ. ಐದು ಸೇರು ಅಕ್ಕಿ, ಬೆಲ್ಲ, ಲಗ್ನಪತ್ರಿಕೆ, ಕುಬಸ ಎಲೆ ಅಡಿಕೆ ದಕ್ಷಿಣೆ ತೆಗೆದು ಕೊಂಡು ಹೋಗಿ ಗಂಡನ ಮನೆಗೆ ಹೋಗುತ್ತಾರೆ. ಇದನ್ನು ತಂದವರಿಗೆ ಸಿಹಿಯೂಟ ಮಾಡಿಸಿ ಬಟ್ಟೆ ಕೊಟ್ಟು ಕಳುಹಿಸುತ್ತಾರೆ. ಲಿಂಗಾಯಿತರು ಮದುವೆಗೆ ಮೂರುದಿನ ಮುಂಚೆ ಲಕ್ಷ್ಮಿ ಪೂಜೆ ಮಾಡುತ್ತಾರೆ.

**ಗುಗ್ಗಳ ಆಚರಣೆ :**

ವೀರಭದ್ರ ದೈವದ ಆರಾಧನೆ ಇರುವ ಮನೆಗಳಲ್ಲಿ ಈ ಗುಗ್ಗಳ ಆಚರಣೆ ಕಂಡು ಬರುತ್ತದೆ. ಗಂಡು ಮಗನ ಮದುವೆ ಸಂದರ್ಭದಲ್ಲಿ ಗುಗ್ಗಳ ಆಚರಣೆ ಮಾಡುತ್ತಾರೆ. ಈ ಆಚರಣೆ ಮಾಡುವ ಮನೆಗಳಲ್ಲಿ ಮನೆಯ ಹಿರಿಯ ಮಗನಿಂದ ಹಿಡಿದು ಕಿರಿಯ ಮಗನ ಮದುವೆಯವರೆಗೆ ಈ ಗುಗ್ಗಳ ಆಚರಣೆ ನಡೆಯುತ್ತದೆ. ಇನ್ನೂ ಕೆಲವರು ಹಿರಿಯ ಮತ್ತು ಕಿರಿಯ ಮಗನ ಮದುವೆಯಲ್ಲಿ ಮಾತ್ರ ಆಚರಣೆ ಮಾಡುತ್ತಾರೆ.

**ಗುಗ್ಗಳ :**

ಕುಂಬಾರ ಮನೆಗೆ ಹೋಗಿ ತಮಗೆ ಮದುವೆ ದಿನವನ್ನು ಹೇಳಿ ಇಂತಹ ದಿನ ನಮಗೆ ಗಡಿಗೆ ಬೇಕು ಎಂದುಹೇಳಿ. ಅವರಿಗೆ ಅರಿಷಿಣ ಕುಂಕುಮ ಕೊಟ್ಟು ಬರುತ್ತಾರೆ; ಮದುವೆ ಹಿಂದಿನ ದಿವಸ ಮೆರವಣಿಗೆ ಮೂಲಕ ಕುಂಬಾರನ ಮನೆಗೆ ಹೋಗಿ ಉಲುಪಿ ಕೊಟ್ಟು ಅಕ್ಕಿ ಬೇಳೆ ಎಲೆ ಅಡಿಕೆ ಕೊಟ್ಟು ಗಡಿಗೆಗಳನ್ನು ತೆಗೆದುಕೊಂಡು ಬಂದು ದೇವರ ಮನೆಯಲ್ಲಿ ಇಡುತ್ತಾರೆ.

ಪುರವಂತರು ತಂದಂತಹ ಗಡಿಗೆಯನ್ನು ಅಳತೆ ಮಾಡಿ, ಗಡಿಗೆಯ ತಳವನ್ನು ಕತ್ತರಿಸುತ್ತಾರೆ. ತಳಭಾಗವನ್ನು ಆ ಗಡಿಗೆಯಲ್ಲಿ ಹಾಕುತ್ತಾರೆ. ಪಟವನ್ನು ತರುತ್ತಾರೆ. ಜೊತೆಗೆ ೮–ಸಣ್ಣಬಿದಿರು. ೮–ದೊಡ್ಡಬಿದಿರು ತೆಗೆದುಕೊಂಡು ಕತ್ತರಿ ಆಕಾರದಲ್ಲಿ ಕಟ್ಟುತ್ತಾರೆ. ಆ ಮೇಲೆ ಚಿತ್ರಪಟಕಟ್ಟುತ್ತಾರೆ. ಗಂದಕಟ್ಟಿಗೆಯ ತುಂಡನ್ನು ತಂದು ಗಡಿಗೆಯಲ್ಲಿ ಹಾಕುತ್ತಾರೆ. ಗೋದಿ, ಮೈದಾ ಹಿಟ್ಟನ್ನು ಕಲಸಿ ಗಡಿಗೆಯ ತಳಕ್ಕೆ ಹಚ್ಚುತ್ತಾರೆ. ಒಂದು ಜೊತೆ ಪಂಚೆ ತಂದು ಅದನ್ನು ತೆಗೆದುಕೊಂಡು ಮೂರು ಸಿಂಬಿ ಮಾಡುತ್ತಾರೆ. ಅದನ್ನು ಎಣ್ಣೆಯಲ್ಲಿ ನೆನೆ ಇಡುತ್ತಾರೆ. ಇದೆಲ್ಲಾ ರಾತ್ರಿ ಮಾಡುತ್ತಾರೆ. ಮರುದಿನ ಸುರುಗಿ ನೀರನ್ನು ಮದುಮಕ್ಕಳಿಗೆ ಹಾಕುತ್ತಾರೆ. ಪುರುವಂತರನ್ನು ಕರೆಸಿ ದೈವದವರನ್ನು ಸಮಾಳದವರು ಕರೆಸಿ ಆಗ ಒಡಪು ಹೇಳುತ್ತಾರೆ.

ಹಿರಿಯರು ಗುಗ್ಗಳವನ್ನು ತೆಗೆದುಕೊಂಡು ಹೋಗಬಹುದು ಎಂದಾಗ ಆಗ ಕರಿಯ ಕುಂಬಳಕಾಯಿಯಿಂದ ಇಳೆ ತೆಗೆದು ಬಾಗಿಲಿಗೆ ಒಡೆದುಹಾಕುತ್ತಾರೆ. ಗುಗ್ಗಳ ತೆಗೆದುಕೊಂಡು ಮದುಮಕ್ಕಳಿಗೆ ಮೂರು ಸಾರಿ ತಲೆ ಮೇಲಿನಿಂದ ಇಳೆ ತೆಗೆದು ಗುಗ್ಗಳವನ್ನು ತೆಗೆದುಕೊಂಡು ಹೋಗುತ್ತಾರೆ. ಯಾರೂ ಚಪ್ಪಲಿಗಳನ್ನು ಹಾಕಿ ಕೊಳ್ಳುವುದಿಲ್ಲ. ಕತ್ತರಿಯಾಕಾರದ ರಸ್ತೆ ಬಂದಾಗ ನಿಂಬೆ ಹಣ್ಣು ತೆಗೆದು ಹಾಕುತ್ತಾರೆ. ಕಾಯಿ ಒಡೆಯುತ್ತಾರೆ. ಜಂಗಮರ ಪಾದವನ್ನು ತೊಳೆದ ನೀರು ಹಾಕುತ್ತಾ ಹೋಗುತ್ತಾರೆ. ತಮ್ಮ ದೈವದ ದೇವಸ್ಥಾನಕ್ಕೆ ಹೋಗಿ ಒಡಪುಗಳನ್ನು ಹೇಳುತ್ತಾರೆ. ಗುಡಿಯಲ್ಲಿ ಇಡುತ್ತಾರೆ. ನಂತರ ದೀಪ ಹಚ್ಚಿದ ದಿವಳಿಗೆ ಹಾಲಿನಿಂದ ಶಾಂತಿ ಮಾಡುತ್ತಾರೆ.

ಗುಗ್ಗಳದಲ್ಲಿ ಶಸ್ತ್ರ ಹಾಕಿಸಿಕೊಳ್ಳುವ ಹರಕೆ ಹೊತ್ತು ಕೊಂಡಿರುತ್ತಾರೆ. ತಮ್ಮ ಮಕ್ಕಳ ಮದುವೆಯಾದರೆ ಶಸ್ತ್ರ ಹಾಕಿಸಿಕೊಳ್ಳುತ್ತೇವೆ ಎಂದು ಬೇಡಿಕೊಂಡಿರುತ್ತಾರೆ. ಮಗನ ಮದುವೆ ಸಂದರ್ಭದಲ್ಲಿ ಗುಗ್ಗಳ ಆಚರಣೆ ಮಾಡುವಾಗ ಶಸ್ತ್ರ ಹಾಕಿಸಿಕೊಳ್ಳುತ್ತಾರೆ. ಹೆಣ್ಣು ಗಂಡು ಬೇದ ಭಾವ ಇಲ್ಲದೆ ಶಸ್ತ್ರ ಹಾಕಿಸಿಕೊಳ್ಳುತ್ತಾರೆ.

**ದೇವರ ರೂಟ :**

ಮದುವೆಕ್ಕಿಂತ ಎರಡುದಿನ ಮುಂಚೆ ದೇವರ ಊಟದ ಕಾರ್ಯ ಎಲ್ಲಾ ಸಮುದಾಯದಲ್ಲಿ ಕಂಡು ಬರುತ್ತದೆ. ಇದಕ್ಕೆ ದೈವದೂಟ ಎಂದು ಕರೆಯುತ್ತಾರೆ. ಮದುವೆ ಮನೆಮುಂದೆ. ಹಂದರ ಹಾಕುತ್ತಾರೆ. ಅದು ತೆಂಗಿನ ಗರಿಯಿಂದ ಹಾಕಿರುತ್ತಾರೆ. ಸೋದರ ಮಾವನ ಹಂದರ ಹಾಕುವ ಕಾರ್ಯ ಮಾಡುತ್ತಾನೆ. ಮದುವೆ ಮನೆ ಮುಂದೆ ನಾಲ್ಕು ಕಂಬ ಹೂಳಿ ಒಂದೊಂದು ಕಂಬಕ್ಕೆ ಅರಿಷಿಣ, ಕುಂಕುಮ, ವಿಭೂತಿ, ಗಂಧವನ್ನು, ಕೆಮ್ಮಣ್ಣಿನ ಪಟ್ಟಿ ಹಚ್ಚುತ್ತಾರೆ. ನಂತರ ಕಟ್ಟುತ್ತಾರೆ. ಪೂಜೆ ಮಾಡುತ್ತಾರೆ.

**ಐರಾಣಿ ತರುವುದು :**

ಐರಾಣಿಯನ್ನು ಹಿಂದೂಗಳಲ್ಲಿ ಮೇಲ್ ವರ್ಗದವರು ಕೆಳವರ್ಗದವರು ಸೇರಿದಂತೆ ಎಲ್ಲಾರು ಐರಾಣಿ ತರುತ್ತಾರೆ. ಐರಾಣಿ ತರುವಾಗ ಕುಂಬಾರರಿಗೆ ಅಕ್ಕಿ ಬೇಳೆ, ಬೆಲ್ಲ, ಕೊಟ್ಟು ಸುಣ್ಣ ಬಳಿದ ಸಣ್ಣ ಗಡಿಗೆಗಳನ್ನು ತಂದು ಆಂಜನೇಯ ಸ್ವಾಮಿ ದೇವಸ್ಥಾನದಲ್ಲಿ ಇಡುತ್ತಾರೆ. ಅಲ್ಲಿ ಪೂಜೆ ಮಾಡಿಸಿ ನಂತರ ಮನೆಗೆ ತಂದು ಕೊಂಬೆಯ ಹಂದರಕ್ಕೆ ಕಟ್ಟುತ್ತಾರೆ. ಲಿಂಗಾಯಿತರಲ್ಲಿ ಅವನ್ನು ಮನೆಯ ದೇವರ ಮುಂದೆ ಇಟ್ಟು ಪೂಜೆ ಮಾಡುತ್ತಾರೆ.

**ಭಟ್ಟು ಬಡೆಯೋದು :**

ಈ ಪದ್ದತಿ ಇರುವರ ಮನೆಯಲ್ಲಿ ಮಾತ್ರ ಮಾಡುತ್ತಾರೆ. ಮನೆಯ ಮಗಳು ಅಳಿಯ ಸೇರಿ ಈ ಕಾರ್ಯ ಮಾಡುತ್ತಾರೆ. ಮಗಳು ಎರಡು ಕೈಯಿಂದ ಕೆಮ್ಮಣಿನಲ್ಲಿ ಅದ್ದಿ ಗೋಡೆಗೆ ಬಡಿಯುತ್ತಾ ಹೋಗುತ್ತಾಳೆ. ಅಳಿಯ ಕೆಮ್ಮಣಿನ ತಟ್ಟೆಯನ್ನು ಹಿಡಿದಿರುತ್ತಾನೆ.

**ಕರಿಸೀರಿ ದೇವರು**

ಈ ಆಚರಣೆಯನ್ನು ಹಂಪಿನ ಕಟ್ಟಿಯಿಂದ ವಲಸೆ ಬಂದು ಮರಿಯಮ್ಮನಹಳ್ಳಿಯಲ್ಲಿ ನೆಲೆಸಿರುವ ನಾಯಕ ಸಮುದಾಯದಲ್ಲಿ ಕಂಡು ಬರುತ್ತದೆ. ಬೇರೆ ಊರುಗಳಿಂದ ಬಂದು ನೆಲೆಸಿರುವ ನಾಯಕ ಸಮುದಾಯದಲ್ಲಿ ಕಂಡು ಬರುವುದಿಲ್ಲ.

ಈ ಆಚರಣೆಯನ್ನು ಮದುವೆ ಕಾರ್ಯಕ್ಕಿಂತ ಮುಂಚೆ ಮಾಡುತ್ತಾರೆ. ಆಚರಣೆಯ ವೈಶಿಷ್ಟ್ಯತೆಯೆಂದರೆ – ನಿಶಬ್ಧತೆಯಿಂದ ಆಚರಣೆ ಮಾಡುತ್ತಾರೆ. ಬೇರೆಯವರಿಗೆ ಪ್ರವೇಶವಿಲ್ಲ. ಇವರು ಮನೆಯೊಳಗೆ ಬಾಗಿಲು ಹಾಕಿಕೊಂಡು ಮಾಡುತ್ತಾರೆ. ಇಲ್ಲಿ ಬಳೆ ಶಬ್ದಕೂಡ ನಿಷೇಧ.

ಈ ಆಚರಣೆಯನ್ನು ಮದುವೆ ಆಗುವುದಿಕ್ಕಿಂತ ಮುಂಚೆ ಆಚರಿಸುತ್ತಾರೆ. ಬೇವಿನ ಮರದ ಒಂದು ಕೊಂಬೆಯನ್ನು ಕಡಿದುಕೊಂಡು ಬಂದು ಅದನ್ನು ಮನೆಯ ನಡುಮನೆಯಲ್ಲಿ ಸ್ಥಾಪಿಸಿ ಸೀರೆ–ಕುಬಸ ಇತ್ಯಾದಿ ಅಲಂಕಾರ ಮಾಡಿ ಪೂಜೆ ಮಾಡುತ್ತಾರೆ. ಮನೆಯವರು ಮಾತ್ರ ಪೂಜೆ ಮಾಡುತ್ತಾರೆ. ಬೇರೆಯವರಿಗೆ ಅವಕಾಶವಿಲ್ಲ. ಈ ಕರಿಸಿರಿ ದೇವರಿಗೆ ಕುರಿಯನ್ನು ಬಲಿಕೊಡುತ್ತಾರೆ. ಕೊಟ್ಟಂತ ಬಲಿಯಿಂದ ದೇವಿಗೆ ಕುರಿಯ ತಲೆ, ಕಾಲುಗಳನ್ನು ಎಡೆ ಇಡುತ್ತಾರೆ. ಮಾಂಸದ ಅಡುಗೆ ಮಾಡಿ ಮನೆಯವರು ಮಾತ್ರ ಸೇವಿಸುತ್ತಾರೆ. ದೇವಿಯ ಮುಂದೆ ಸಣ್ಣ ತೆಗ್ಗನ್ನು ತೋಡಿ ಅದರಲ್ಲಿ ಕುರಿಯ ತಲೆ–ಕಾಲುಗಳನ್ನು ಹಾಕುತ್ತಾರೆ. ಉಳಿದ ಅಡುಗೆಯನ್ನು ಆ ತೆಗ್ಗಿನಲ್ಲಿ ಹಾಕಿ ಮುಚ್ಚುತ್ತಾರೆ.

ಈ ಆಚರಣೆಯು ನಡೆಯುವುದು–ರಾತ್ರಿಯಿಂದ ಬೆಳಗಿನ ಜಾವದವರೆಗೆ,

ಮರುದಿನ ಕರಿಸಿರಿ ದೇವರ ಕಂಬವನ್ನು ಕೆಲವರು ತೆಗೆಯುತ್ತಾರೆ, ಇನ್ನು ಕೆಲವರು ಮಜ್ಜಿಗೆ ಕಡಿಯುಲು ಬಳಸುತ್ತಾರೆ. ಇದು ಮದುವೆ ಮನೆಯಂಬುದರ ಸಂಕೇತವಾಗಿದೆ.' ಛಟ್ಟು ಬಡಿದವರಿಗೆ ಹಂದರದ ಕೆಳಗೆ ಕೂಡಿಸಿ ನೀರು ಹಾಕಿ ಸೀರೆ ಕುಪ್ಪಸ, ಗಂಡಸರಿಗೆ ದೋತ್ರ, ಅಂಗಿಕೊಟ್ಟು ಆರತಿ ಮಾಡುತ್ತಾರೆ.

**ಹುಲಿಗೆಮ್ಮ, ಎಲ್ಲಮ್ಮನ ಪೂಜೆ :**

ಹುಲಿಗೆಮ್ಮ ಎಲ್ಲಮ್ಮ ದೇವರುಗಳನ್ನು ತಮ್ಮ ಮನೆದೇವರಂತೆ ಪೂಜಿಸುವವರು ಮದುವೆಕ್ಕಿಂತ ಮುಂಚೆ ಈ ಆಚರಣೆ ಮಾಡುತ್ತಾರೆ.

ನಾಣಿಕೇರಿಯಿಂದ ಬಂದು ನೆಲೆಸಿದಂತಹ ಬ್ರಾಹ್ಮಣರ ಮನೆಯ ಕುಟುಂಬದಲ್ಲಿ ಎಲ್ಲಮ್ಮ 'ಉಟುಗಿ' ಪೂಜೆ ಮಾಡುತ್ತಾರೆ. ಉಳಿದ ಬ್ರಾಹ್ಮಣರಲ್ಲಿ ಈ ಪೂಜೆ ಕಂಡು ಬರುವುದಿಲ್ಲ.

ಉಟುಗಿ ಪೂಜೆಯ ದಿನ ಅಂದು ಗಂಗೆ ಪೂಜೆಗೆ ಹೋಗಿ ಬಂದು ಮನೆಯಲ್ಲಿ ಪೂಜೆ ಸಲ್ಲಿಸಿದ ನಂತರ ತಂದಂತಹ ಉಟುಗಿಯನ್ನು ಮುತ್ತೈದೆಯು ಮಡಿಯಿಂದ ಅದನ್ನು ವಸ್ತ್ರವಿಲ್ಲದೇ ತೊಡುತ್ತಾಳೆ. ತೊಟ್ಟ ನಂತರ ಪೂಜೆ ಸಲ್ಲಿಸುತ್ತಾರೆ.

ಹುಲಿಗೆಮ್ಮನ ಆಚರಣೆ ಮಾಡುವಂತವರು ನಾಯಕರು, ಹರಿಜನರು, ಉಳಿದ ಕೆಳವರ್ಗದವರು. ಇವರುಕೂಡ ಮನೆಯಲ್ಲಿ ಹುಲಿಗಮ್ಮ ಪೂಜೆ ಮಾಡಿದ ನಂತರವೇ ,ಮದು ಮಕ್ಕಳನ್ನು ಮಾಡುವುದು.

ಇಲ್ಲಿ ಇರುವ ನಾಯಕರಲ್ಲಿ ಹಂಪನ ಕಟ್ಟೆಯಿಂದ ವಲಸೆ ಬಂದಂತಹದವರು ಈ ಕರಿಸಿರಿ ದೇವರು ಎಂಬ ಆಚರಣೆ ಮಾಡುತ್ತಾರೆ.

**ಮದು ಮಕ್ಕಳನ್ನು ಮಡುವುದು :**

ಈ ಕಾರ್ಯವು ಎಲ್ಲಾ ಸಮುದಾಯದಲ್ಲಿ ಸಾಮಾನ್ಯದಂತೆ ಕಂಡು ಬಂದರೂ, ಕೆಲವೊಂದು ಭಿನ್ನತೆ ಕಂಡು ಬರುತ್ತಾರೆ. ಮದು ಮಗ/ಮಗಳನ್ನು, ಬ್ರಾಹ್ಮಣರು, ವೈಶ್ಯರು, ಲಿಂಗಾಯಿತರು ಮನೆಯೊಳಗೆ ಮಣೆ ಮೇಲೆ ಕೂಡಿಸಿ ಮೈಗೆ ಕೈಗೆ ಅರಿಷಿಣ ಹಚ್ಚುತ್ತಾರೆ. ಆದರೆ ನಾಯಕರು ಹರಿಜನರು, ಮುಂತಾದ ಕೆಳವರ್ಗದವರು ಕಂಬಳಿಯ ಮೇಲೆ ಅಕ್ಕಿ ಹಾಕಿ ಅದರ ಮೇಲೆ ಮದು ಮಕ್ಕಳನ್ನು ಕೂಡಿಸುತ್ತಾರೆ. ನಂತರ ಆರತಿ ಮಾಡಿ ನೀರು ಹಾಕುತ್ತಾರೆ. ಬಳೆ ಹಾಕಿಸುವ ಶಾಸ್ತ್ರ ಮಾಡುತ್ತಾರೆ. ಮದುಮಗಳಿಗೆ ಬಳೆ ಹಾಕಿಸಿದ ನಂತರ ಬಂದ ಮುತ್ತೈದೆಯರಿಗೆಲ್ಲಾ ಬಳೆ ಹಾಕಿಸುತ್ತಾರೆ. ಬಳೆ ಹಾಕಲು ಬಂದ ಬಳೆಗಾರನಿಗೆ ಅಕ್ಕಿ, ಬೇಳೆ, ಬೆಲ್ಲ, ದಕ್ಷಿಣೆ, ಕಾಯಿ ಕೊಟ್ಟು ಕಳುಹಿಸುತ್ತಾರೆ.

**ಎದುರುಗೊಂಬುವುದು :**

ಮದುವೆ ಹೆಣ್ಣಿನ ಮನೆಯಲ್ಲಿ ನೆಡೆದರೆ ಗಂಡು ಹೆಣ್ಣಿನ ಮನೆಗೆ ಬರುತ್ತಾನೆ. ಗಂಡಿನ ಮನೆಯಲ್ಲಿ ಮದುವೆ ಇದ್ದರೆ ಹೆಣ್ಣು ಗಂಡಿನ ಮನೆಗೆ ಬರುತ್ತಾಳೆ. ಆಗ ಅವರಿಬ್ಬರನ್ನೂ ದೇವಸ್ಥಾನ ಛತ್ರದಲ್ಲಿ ಎದುರುಗೊಂಡು ಅವರಿಗೆ ಮನೆಯಲ್ಲಿ ಬಿಟ್ಟು ಊಟೋಪಚಾರ ಮಾಡಿಸುತ್ತಾರೆ.

ಹರಿಜನರು ನಾಯಕರಲ್ಲಿ 'ಮಸಿಟ್ಟು' ಎಂಬುದನ್ನು ಬೀಗರಿಗೆ ಕೊಡುವರು. ಇದರಲ್ಲಿ ಅನ್ನ ತುಪ್ಪ ಹೋಳಿಗೆ ಹಾಗೂ ಕುಬಸದ ಕಣವನ್ನು ಜೊತೆಗೆ ಬೆಲ್ಲ ಕೊಬ್ಬರಿ ಕೊಡುತ್ತಾರೆ.

**ಸುರುಗಿ ನೀರು ಹಾಕುವುದು :**

ಸುರುಗಿ ನೀರು ಹಾಕುವುದು ಎಲ್ಲಾ ವರ್ಗಗಳಲ್ಲಿ ಕಂಡು ಬರುತ್ತದೆ. ಮದುವೆ ದಿನ ಬೆಳಿಗ್ಗೆ ಈ ಕಾರ್ಯಕ್ರಮ ನಡೆಯುತ್ತದೆ. ಬ್ರಾಹ್ಮಣರು, ವೈಶ್ಯರಲ್ಲಿ ಮದುಮಕ್ಕಳ ಜೊತೆಗೆ ತಂದೆ ತಾಯಿಯರು ಅಕ್ಕ, ತಂಗಿಯರು ಕೂಡುತ್ತಾರೆ. ಆದರೆ ನಾಯಕರು ಲಿಂಗಾಯಿತರು ಹರಿಜನರು ಮುಂತಾದ ವರ್ಗದಲ್ಲಿ ಗಂಡುಹೆಣ್ಣನ್ನು ಒಟ್ಟಿಗೆ ಕೂಡಿಸಿ ನೀರು ಹಾಕುತ್ತಾರೆ. ಮೊದಲು ಐದು ಜನ ಮುತ್ತೈದೆಯರು ಎಣ್ಣೆ ಅರಿಷಿಣ ಹಚ್ಚಿ ಎಲೆ ಅಡಿಕೆ ಕೊಟ್ಟು ಆರತಿ ಮಾಡುತ್ತಾರೆ. ನಂತರ ಅವರಿಬ್ಬರನ್ನು ಹಂದರದ ಕೆಳಗೆ ಮಣೆ ಹಾಕಿ ನೀರು ಹಾಕುತ್ತಾರೆ. ಸುರುಗಿಯನ್ನು ಸುತ್ತಿ, ನಾಲ್ಕು ಮೂಲೆಯಲ್ಲಿ, ತಂಬಿಗೆಯನ್ನು ಇಟ್ಟು ಅವೆಲ್ಲಕ್ಕೂ ಚೌಕಾಕಾರವಾಗಿ ಬಿಳಿ ದಾರದಿಂದ ಒಂಬತ್ತು

ಎಳೆಯನ್ನು ಸುತ್ತಿ ನೀರು ಹಾಕಿದ ನಂತರ ಅದನ್ನು ತೆಗೆದು ಅರಿಷಿಣದ ಕೊಂಬು ಕಟ್ಟಿ, ಕಂಕಣ ಕಟ್ಟುವರು. ನೀರು ಹಾಕಿದ ನಂತರ ಬಟ್ಟೆಕೊಡುವರು.

**ಬಾಸಿಂಗ ಕಟ್ಟುವುದು. :**

ಬಾಸಿಂಗವನ್ನು ಬ್ರಾಹ್ಮಣರು, ವೈಶ್ಯರು ಬಿಟ್ಟು ಉಳಿದ ಸಮುದಾಯಗಳಲ್ಲಿ ಕಂಡು ಬರುತ್ತದೆ. ಕೆಲವರು ಮುತ್ತಿನ ಬಾಸಿಂಗ, ಇನ್ನೂ ಕೆಲವರಲ್ಲಿ ಹೂವಿನ ಬಾಸಿಂಗಗಳನ್ನು ನೋಡಬಹುದು.

ಬ್ರಾಹ್ಮಣರು, ವೈಶ್ಯರು ಗಂಡಿಗೆ ಪೇಟವನ್ನು ತೊಡಿಸುತ್ತಾರೆ. ನಂತರ ಧಾರೆಯರೆಯುವ ಕಾರ್ಯವನ್ನು ಮಾಡುತ್ತಾರೆ.

ಬ್ರಾಹ್ಮಣರು, ವೈಶ್ಯರಲ್ಲಿ–ಬ್ರಾಹ್ಮಣ ಅರ್ಚಕರು ಮಂತ್ರ ಹೇಳಿ ತಾಳಿ ಕಟ್ಟಿಸಿದರೆ, ಲಿಂಗಾಯಿತರಲ್ಲಿ ಅವರ ಶಾಸ್ತ್ರಿಗಳು, ಹರಿಜನರಲ್ಲಿ ದಾಸ್ಯಯ್ಯವನವರು, ನಾಯಕರಲ್ಲಿ ದಾಸ್ಯಯನವರು ತಾಳಿ ಕಟ್ಟಿಸುತ್ತಾರೆ.

ಇತ್ತೀಚಿನ ದಿನಗಳಲ್ಲಿ ಎಲ್ಲಾ ವರ್ಗದವರು ಬ್ರಾಹ್ಮಣ ಪುರೋಹಿತರನ್ನು ಮದುವೆ ಮಾಡಿಸಲು ಕರೆಯುತ್ತಾರೆ. ತಾಳಿಯಾದ ನಂತರ ಆರುಂದತಿ ಪೂಜೆ ನಡೆಯುತ್ತದೆ. ಆ ಮೇಲೆ ಸಪ್ತಪದಿ ತುಳಿಯುತ್ತಾರೆ.

ತಾಳಿಯಾದ ದಿನವೇ ಉಡಿ ತುಂಬಿಕೊಡುವ ಪದ್ಧತಿ ಇದೆ. ಅಂದರೆ 'ಪ್ರಸ್ತ' ಕಾರ್ಯವನ್ನು ಬ್ರಾಹ್ಮಣರು ವೈಶ್ಯರು ತಾಳಿಯಾದ ದಿನವೇ ಈ ಕಾರ್ಯ ಮಾಡುತ್ತಾರೆ. ಲಿಂಗಾಯಿತ, ವೀರಶೈವ ಹದಿನಾರು ದಿನ, ತಿಂಗಳು ಅಥವಾ ಐದು ತಿಂಗಳೊಳಗೆ ಈ ಕಾರ್ಯ ಮಾಡುತ್ತಾರೆ. ಉಳಿದ ಸಮುದಾಯದಲ್ಲಿ ಈ ತೆರನಾದ ಕಾರ್ಯವನ್ನು ವಾರದೊಳಗೆ ಮಾಡುತ್ತಾರೆ. ಹರಿಜನರು, ನಾಯಕರಲ್ಲಿ, ಉಳಿದ ಸಮುದಾಯದಲ್ಲಿ ಹಾಸಿಗೆ ಪೂಜೆ ಮಾಡಿ ಅದರ ಮೇಲೆ ಮದುಮಕ್ಕಳಿಬ್ಬರನ್ನು ಕೂಡಿಸಿ ಸೋಬಾನ ಪದ ಹಾಡುತ್ತಾರೆ. ಮುತ್ತೈದೆಯರಿಗೆ ಕಾಯಿಗಳನ್ನು ದಕ್ಷಿಣೆಯನ್ನು ಕೊಡುತ್ತಾರೆ.

ಮುಸ್ಲಿಂರಲ್ಲಿ ಮದುವೆಯಾದ ದಿನವೇ ಈ ಕಾರ್ಯಕ್ರಮ ಮಾಡುತ್ತಾರೆ. ಮದುವೆಯಾಗಿ ೯ನೇ ದಿನ ಹಂದ್ರ ತಿರುವು ಹಾಕುತ್ತಾರೆ. ಇದು ಎಲ್ಲಾ ವರ್ಗದ ಸಮುದಾಯದಲ್ಲಿ ಕಂಡು ಬರುತ್ತದೆ.

ಮುಸ್ಲಿಂರು ಮದುವೆ ಸಂದರ್ಭದಲ್ಲಿ ಮೊದಲಿಗೆ 'ಶುಕ್ರಾನ್' ಮಾಡುತ್ತಾರೆ. 'ಶುಕ್ರಾನ್' ಅಂದರೆ 'ವೀಳೆ ಶಾಸ್ತ್ರ' – ಎಳೆ, ಹಣ್ಣು, ಕೊಬ್ಬರಿ, ಉತ್ತತ್ತಿ, ಎಲೆ, ಅಡಿಕೆ, ಕೊಡುತ್ತಾರೆ. ಹೆಣ್ಣಿಗೆ ಒಡವೆ ವಸ್ತ್ರ ಹಾಕುತ್ತಾರೆ. ಮದುವೆ ಹೆಣ್ಣಿನ ಮನೆಯಲ್ಲಿಯೇ ನಡೆಯುವುದು. ಬಂದವರಿಗೆಲ್ಲಾ ಊಟ ಹಾಕುತ್ತಾರೆ. ಮರುದಿನ 'ನಿಖಾ' ಇರುತ್ತದೆ.

**ಜೈನರಲ್ಲಿ ಮದುವೆ ಸಂಪ್ರದಾಯ :**

ಜೈನರಲ್ಲಿ ಮದುವೆ ಸಂಪ್ರದಾಯವು ತನ್ನದೇ ಆದ ವೈಶಿಷ್ಟ್ಯತೆಯಿಂದ ಕೂಡಿದೆ, ಈ ಸಮುದಾಯದಲ್ಲಿ ಸಂಬಂಧಿಕರಲ್ಲಿ, ಬೀಗತನ ಇರುವುದಿಲ್ಲ, ಸಗೋತ್ರದಲ್ಲಿ ಮದುವೆ ನಡೆಯುವುದಿಲ್ಲ. ಜೈನ ಜೈನರಲ್ಲಿ ಬೀಗಸ್ತನ ಮಾಡುತ್ತಾರೆ. ಅಂತರ್ ಜಾತಿ ವಿವಾಹ ಹೆಚ್ಚಾಗಿ ಕಂಡುಬರುವುದಿಲ್ಲ.

ಎಲ್ಲಾ ಸಮುದಾಯದಂತೆ ಇವರು ಕೂಡ ಹೆಣ್ಣು ನೋಡಲು ಬರುತ್ತಾರೆ. ಇವರಲ್ಲಿ ಮೊದಲು ಹುಡುಗ ನೋಡಿ ಒಪ್ಪಿಗೆಯಾದರೆ, ಹಿರಿಯರು ಒಂದು ಹುಡುಗಿಯನ್ನು ನೋಡುತ್ತಾರೆ. ಹುಡುಗಿಯ ಗುಣ ಲಕ್ಷಣಗಳು ತಮಗೆ ಒಪ್ಪಿಗೆಯಾದರೆ ಅವರ ಮನೆಯಲ್ಲಿಯೇ ಸಿಹಿಯೂಟ ಮಾಡುತ್ತಾರೆ. ಮುಂದೆ ಇಪ್ಪತ್ತು ದಿನದೊಳಗಾಗಿ ಮಾತುಕತೆಗೆ ಬರುತ್ತಾರೆ. ಬರುವಾಗ ಬೆಲ್ಲ, ಅವಿಜಾ, ಗಿಟಕಕೊಬ್ಬರಿ, ಮೆಹೆಂದಿ ಮುಖ್ಯವಾದ ವಸ್ತುಗಳು ಜೊತೆಗೆ ಸಿಹಿಯನ್ನು ತರುತ್ತಾರೆ. ತಮ್ಮ ಮನೆ ದೇವರ ಹೆಸರಿನಲ್ಲಿ ಮತ್ತು ಸ್ನೇಹಿತ, ಬಂಧುಗಳ ಸಮಕ್ಷಮದಲ್ಲಿ ಹುಡುಗಿ ಒಪ್ಪಿಗೆಯಾಗಿದೆ ಎಂದು ಹೇಳುತ್ತ ನಿಮಗೆ ತಿಳಿದಿದ್ದನ್ನು ಹುಡುಗಿಗೆ ಹಾಕಿದರೆ ಸಾಕು, ಎಂದು ಹೇಳುತ್ತಾರೆ. ಬಂದವರಿಗೆಲ್ಲಾ ಊಟದ ವ್ಯವಸ್ಥೆ ಮಾಡಿರುತ್ತಾರೆ. ಒಂದು ವಾರದ ನಂತರ ಹುಡುಗನ ಅಣ್ಣ, ತಮ್ಮಂದಿರು, ಅಕ್ಕ, ತಂಗಿಯರು ಮದುವಿಗೆ ಸೀರೆ, ಕುಪ್ಪಸ ಬೆಳ್ಳಿ ಕಾಲುಂಗರ, ಕಾಲಗೆಜ್ಜೆ, ಬಂಗಾರದ ಒಡವೆ, ಸಿಹಿ ತರುತ್ತಾರೆ. ಜೊತೆಗೆ ಉಡಿ ತುಂಬುವ ಸಾಮಾನುಗಳಾದ ಗಿಟಕ, ಬೆಲ್ಲ, ಅವಿಜಾ, ಅರಿಶಿಣ, ತಂದಿರುತ್ತಾರೆ. ಗಂಡಿನ ಕಡೆಯವರು ತಂದಂತಂಹ ಸಾಮಾನನ್ನು ತಮ್ಮ ಸಂಬಂಧಿಕರಿಗೆ ತೋರಿಸುತ್ತಾರೆ.

ಗಂಡಿನವರು ಹೊರಡುವಾಗ ಹಣವನ್ನು ಕೊಟ್ಟು ಕಳುಹಿಸುತ್ತಾರೆ. ಗಂಡಿನವರು ತಂದಂತಹ ವಸ್ತುಗಳನ್ನು ದೇವರ ಮುಂದೆ ಇಟ್ಟು ಪೂಜೆ, ನೈವೇದ್ಯ ಮಾಡಿ, ವಧುವಿಗೆ ಸ್ವಲ್ಪ ತಿನ್ನಿಸಿ ನಂತರ ಉಳಿದವರಿಗೆ ಕೊಡುತ್ತಾರೆ.

ನಂಗರ ಲಗ್ನ ಪತ್ರಿಕೆಯನ್ನು ಹಂಚುವ ಕಾರ್ಯ ಮಾಡುತ್ತಾರೆ. ಲಗ್ನ ಪತ್ರಿಕೆಯನ್ನು ದೇವರ ಮುಂದೆ ಇಟ್ಟು ಪೂಜಿಸಿದ ನಂತರ ತಮ್ಮ ಕುಲ ಪುರೋಹಿತರಿಗೆ ದೇವಸ್ಥಾನಕ್ಕೆ ಮೊದಲು ಕೊಟ್ಟು ನಂತರ ಸಂಬಂಧಿಕರಿಗೆ, ನೆಂಟರಿಗೆ ಸ್ನೇಹಿತರಿಗೆ ಕೊಡುತ್ತಾರೆ. ಮದುವೆ ಒಂದು ವಾರ ಇರುವಾಗ ಈ ಕಾರ್ಯವನ್ನು ಮಾಡುತ್ತಾರೆ.

ಇವರು ಮದುವೆಯನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ಮಾಡುತ್ತಾರೆ. ಒಂದು ವೇಳೆ ಮದುವೆ ಮನೆಯಲ್ಲಿ ಯಾರಾದರೂ ಸತ್ತರೆ. ಮದುವೆ ಮುಂದೂಡುತ್ತಾರೆ. ಮದುವೆ ಕೆಲಸಗಳು ಲಗ್ನ ಪತ್ರಿಕೆ ಹಂಚುವುದರಿಂದ ಕಾರ್ಯಕ್ರಮ ಪ್ರಾರಂಭವಾಗುತ್ತದೆ. ಮದುಮಗಳನ್ನು ಒಂದು ವಾರದ ಮುಂಚೆ ಮಾಡುತ್ತಾರೆ.

ವಧುವಿಗೆ ಕೆಂಪು ಅಥವಾ ಹಳದಿ ಬಣ್ಣದ ಬಟ್ಟೆ, ವರನಿಗೆ ಬಿಳಿವಸ್ತ್ರದ ಬಟ್ಟೆ ಹಾಕುತ್ತಾರೆ. ಅರಿಷಿಣವನ್ನು ಮೊದಲು ತಂದೆ ತಾಯಿ ನಂತರ ಸಹೋದರ ಸಹೋದರಿಯರು ನೆಂಟರು ಹಚ್ಚುತ್ತಾರೆ.

ಮದು ಮಕ್ಕಳನ್ನು ಮಾಡುವಾಗ ಮೈದಾಹಿಟ್ಟು, ಅರಿಶಿಣ, ತುಪ್ಪ ಹಾಕಿ ಚಿಕ್ಕ ಉಂಡಿಯನ್ನು ಮಾಡಿರುತ್ತಾರೆ. ಒಂದು ತೆಂಗಿನ ಕಾಯಿ, ಅಕ್ಕಿ, ಬೆಲ್ಲ, ಈ ಉಂಡಿಗಳನ್ನು ಉಡಿ ತುಂಬುತ್ತಾರೆ. ಉಡಿಯನ್ನು ಗಂಟು ಹಾಕಿ ಅದನ್ನು ದೇವರ ಮನೆಯಲ್ಲಿ ಇಟ್ಟು ಇನ್ನೊಂದು ಮದುವೆ

ಆಗುವವರೆಗೂ ಪೂಜೆ ಮಾಡುತ್ತಾರೆ. ಇನ್ನೊಂದು ಮದುವೆ ಗೊತ್ತಾದಾಗ ಇದನ್ನು ಪೂಜಿಸಿ ಇದನ್ನು ಬಾವಿಗೆ ಹಾಕುತ್ತಾರೆ. ಮದುಮಕ್ಕಳನ್ನು ಮಾಡುವಾಗ ಹಳದಿ ಕೆಂಪು, ದಾರವನ್ನು ಗಂಟು ಹಾಕಿ ಹುಡುಗರಕಾಲಿಗೆ ಕಟ್ಟುತ್ತಾರೆ. ಕೆಂಪುದಾರವನ್ನು ಶಂಖದಿಂದ ಗಂಟುಹಾಕಿ ಕೈಗೆ ಕಟ್ಟುತ್ತಾರೆ.

ವಧುವಿಗೆ ಕಾಲಿಗೆ ಕೆಂಪು, ಹಳದಿ ದಾರವನ್ನು ಕಟ್ಟುತ್ತಾರೆ. ಮದುವೆಯಾದ ನಂತರ ವಧು–ವರರಿಬ್ಬರು ಪರಸ್ಪರ ದಾರವನ್ನು ಬಿಚ್ಚುತ್ತಾರೆ.

ಜೈನರಲ್ಲಿ ಮದುವೆಗೆ ಮುಂಚೆನೆ ಬೀಗರು ಬರುತ್ತಾರೆ. ಹತ್ತಿರ ಇದ್ದವರು ಮದುವೆ ದಿನ ಬರುತ್ತಾರೆ. ಮದುವೆ ಹಿಂದಿನ ದಿನ ತಮ್ಮ ಸಮಾಜದವರಿಗೆ ಊಟ ಹಾಕಿಸುತ್ತಾರೆ. ಬಂದಂತಹ ಬೀಗರು ಸಮಾಜದ ಛತ್ರದಲ್ಲಿ ಉಳಿದುಕೊಳ್ಳುತ್ತಾರೆ. ಊಟವಾದ ನಂತರ ರಾತ್ರಿಯಲ್ಲಾ ಮನೋರಂಜನೆ ಕಾರ್ಯಕ್ರಮ ಮಾಡುತ್ತಾರೆ.

ಮದುವೆ ದಿನ ತಮ್ಮ ಸಮುದಾಯದವರು ಯಾರು ಕೂಡ ಮನೆಯಲ್ಲಿ ಅಡುಗೆ ಮಾಡುವುದಿಲ್ಲ. ಎಲ್ಲರೂ ಮದುವೆ ಸಮಾರಂಭದಲ್ಲಿ ಪಾಲ್ಗೊಂಡಿರುತ್ತಾರೆ. ಮದುಮಗನನ್ನು ಮಾಡುವರು ಅಕ್ಕನ ಗಂಡಂದಿರು, ಮದು, ಮಗಳನ್ನು ಮಾಡುವವರು ಸೋದರತ್ತೆಯವರು, ಮದುಮಗನಿಗೆ ಪೇಟ ಸುತ್ತಿ ಹೂವಿನ ಹಾರಹಾಕಿ, ಕುದುರೆ ಮೇಲೆ ಕುಡಿಸಿ, ಊರೆಲ್ಲ, ಮೆರವಣಿಗೆ ಮಾಡಿ ಛತ್ರಕ್ಕೆ ಕರೆದುಕೊಂಡು ಬರುತ್ತಾರೆ. ಅಲ್ಲಿ ಹೋಮ ಮಾಡಿ ಇಬ್ಬರಿಗೂ ಏಳುಗಂಟು ಹಾಕಿ ನಂತರ ವರನು ವಧುವಿಗೆ ಬೈತೆಲೆಗೆ ಸಿಂಧೂರವಿಡಿಸಿ, ಕಾಲಿಗೆ ಉಂಗುರ ಹಾಕಿಸಿ ತಾಳಿ ಕಟ್ಟುತ್ತಾನೆ, ತಾಳಿಗೆ ಕಂಟಿ ಎಂದು ಕೂಡ ಕರೆಯುತ್ತಾರೆ.

ಮದುವೆಯಾದ ನಂತರ ಮನೆಗೆ ಕರೆದುಕೊಂಡು ಬಂದು ತಂಬಿಗೆಯಲ್ಲಿ ಹಾಲು, ಬಾದಾಮಿ, ಬೆಳ್ಳಿ, ಬಂಗಾರ, ಉಂಗುರ ನಾಣ್ಯಗಳನ್ನು ಹಾಕಿ ಮದು ಮಕ್ಕಳಿಗೆ ಹುಡುಕಲು ಹೇಳುತ್ತಾರೆ. ಯಾರು ಮೊದಲು ಹುಡುಕುತ್ತಾರೋ ಅದು ಅವರಿಗೆ, ದೇವರಿಗೆ, ಹಿರಿಯರಿಗೆ ನಮಸ್ಕಾರ ಮಾಡುತ್ತಾರೆ. ಹಿರಿಯರು ಬಂಗಾರ ಉಂಗುರ ಉಡುಗೊರೆಯಾಗಿ ನೀಡುತ್ತಾರೆ. ಆ ದಿನವೇ ಹೆಣ್ಣಿನ ಮನೆಯಲ್ಲಿ ಪ್ರಸ್ಥ ನೆಡೆಯುತ್ತದೆ. ಮೂರು ದಿನ ಅಲ್ಲಿಯೇ ಇರುತ್ತಾರೆ.

**೪.೧.೬ ಸಾವಿನ ಸಂದರ್ಭದಲ್ಲಿನ ಆಚರಣೆ :**

ಪ್ರತಿಯೊಂದು ಜನಾಂಗದಲ್ಲಿ ವ್ಯಕ್ತಿ ಸತ್ತ ನಂತರ ಅವರ ಬಂಧುಗಳಿಗೆ ಸುದ್ದಿ ತಲುಪಿಸುವರು. ಸಾಮಾನ್ಯವಾಗಿ ಎಲ್ಲಾ ಜನಾಂಗದಲ್ಲಿ ಜೀವ ಹೋಗುವುದನ್ನು ತಿಳಿದಾಗ ಬಾಯಲ್ಲಿ ನೀರು, ಹಾಲು ಬಿಡುತ್ತಾರೆ. ಬ್ರಾಹ್ಮಣರು, ವೈಶ್ಯರು ನಾಯಕರು, ಹರಿಜನರು, ಹೆಣವನ್ನು ಮಲಗಿಸಿರುತ್ತಾರೆ. ಹಿಂದುಗಳೆಲ್ಲ ಶವವನ್ನು ಸ್ನಾನ ಮಾಡಿಸಿ ಹೊಸ ಬಟ್ಟೆ ಹಾಕಿ ವಿಭೂತಿ ಧಾರಣೆ ಮಾಡಿಕೈಯಲ್ಲಿ ವಿಭೂತಿ ಉಂಡೆಯನ್ನು, ಬಿಲ್ವ ಪತ್ರೆಯನ್ನು ಕೊಡುತ್ತಾರೆ. ಕೆಲವರು ಎಲೆ ಅಡಿಕೆಯನ್ನು ಇಡುವರು. ಶವದ ಪಕ್ಕದಲ್ಲಿ ದೀಪ, ಕಳಸ ಹಚ್ಚಿ ಇಡುವರು.

ಮುಸ್ಲಿಂರು ಹೆಣವನ್ನು ಮಲಗಿಸುತ್ತಾರೆ. ಮೊದಲು ಶವ ಸ್ನಾನ ಮಾಡಿಸುತ್ತಾರೆ. ಶವ ಸ್ನಾನ ಮಾಡಿಸುವವರು ಬೇರೆ ಇರುತ್ತಾರೆ. ಅವರನ್ನು ಮುರ್ದಾಸೊ ಎಂದು ಕರೆಯುತ್ತಾರೆ. ನಾಯಕರು, ಬಾರಿಕರು, ಹರಿಜನರು ಶವವನ್ನು ಹೂಳುತ್ತಾರೆ. ಬ್ರಾಹ್ಮಣ, ವೈಶ್ಯರು ಹೆಣವನ್ನು ಸುಡುತ್ತಾರೆ.

ಬ್ರಾಹ್ಮಣರು, ವೈಶ್ಯರು, ಮಾತ್ರ ಹೆಣವನ್ನು ಬಹಳ ಹೊತ್ತು ಕಾಯಿಸುವುದಿಲ್ಲ. ಉಳಿದ ಸಮುದಾಯದವರು, ಬಂಧುಗಳು ಬರುವವರೆಗೂ ಭಜನೆ ಮಾಡುವರು, ಮುಸ್ಲಿಂರು, ಕ್ರೈಸ್ತರು ಬೈಬಲ್, ಖುರಾನ್ ಓದುವರು.

ಎಲ್ಲಾ ಸಮುದಾಯದಲ್ಲಿ ಶವವನ್ನು ಒಯ್ಯುವಾಗ ದುಃಖ ಪೂರಿತವಾದ ರಾಗಗಳ ಮೂಲಕ ಬ್ಯಾಂಡ್ ಬಾರಿಸುತ್ತಾರೆ. ಎಲ್ಲಾ ವರ್ಗಗಳಲ್ಲಿ ಶವವನ್ನು ಒಯ್ಯಲು ಬೇರೆ ಬೇರೆಯಾಧ ವಿಧಾನಗಳನ್ನು ಅಳವಡಿಸಿಕೊಂಡಿದ್ದಾರೆ. ಬ್ರಾಹ್ಮಣರು ವೈಶ್ಯರು ಹೆಣವನ್ನು ಮಲಗಿಸಿ ಹೊರುತ್ತಾರೆ. ಲಿಂಗಾಯಿತರು, ವೀರಶೈವರು ಮಂಟಪದಲ್ಲಿ ಕೂಡಿಸಿ ಒಯ್ಯುತ್ತಾರೆ. ಉಳಿದ ಸಮುದಯಾದವರೆಲ್ಲಾ ಮಲಗಿಸಿಯೇ ಒಯ್ಯುತ್ತಾರೆ. ಹೆಣವನ್ನು ಒಯ್ಯುವ ಸಿದಿಗಿಯನ್ನು ತಾವೇ ತಯಾರಿಸಿಕೊಳ್ಳುತ್ತಾರೆ. ಕ್ರೈಸ್ತರು ಶವವನ್ನು ತೆಗೆದುಕೊಂಡು ಹೋಗುವ ಮುನ್ನ ಚರ್ಚಿಗೆ ತೆಗೆದುಕೊಂಡು ಹೋಗಿ ಬೈಬಲ್ ಓದಿ ಸತ್ತವರ ಪರವಾಗಿ ಪಾರ್ಥನೆ ಮಾಡುತ್ತಾರೆ. ದಾರಿಯುದ್ದಕ್ಕೂ ಬೈಬಲ್ ಓದುತ್ತಾರೆ. ಮುಸ್ಲಿಂರು ಜನಾಜಾ ಪಟ್ಟಿಯಲ್ಲಿ ಶವ ಇಟ್ಟು ಈ ಮುಂಚೆ ಸತ್ತವರ ಹೆಂಡತಿಯಿಂದ ಮಹರ್‌ಮಾಫಿ ಎಂದು ಉಚ್ಚರಿಸುತ್ತಾರೆ. ಇವರಲ್ಲಿ ಹೆಣ್ಣು ಸತ್ತರೆ ಕೆಂಪು ಬಟ್ಟೆ, ಗಂಡು ಸತ್ತರೆ ಹಸಿರು ಬಟ್ಟೆಯನ್ನು ಜನಾಜಾ ಪಟ್ಟಿಗೆ ಹೊದಿಸುತ್ತಾರೆ. ದಾರಿಯುದ್ದಕ್ಕೆ ಅದೇ ಸಮುದಾಯದವರು ಹೆಗಲುಕೊಡುತ್ತಾರೆ. ಎಲ್ಲಾ ಸಮುದಾಯದಲ್ಲಿ ಯಾರು ಚಪ್ಪಲಿ ಹಾಕಿಕೊಂಡು ಹೋಗುವುದಿಲ್ಲ.

ಶವವನ್ನು ತೆಗೆದುಕೊಂಡು ಹೋಗುವಾಗ ಮಂಡಾಳು ಎಲೆ, ನವಣಿ, ಹೂ, ಚೆಲ್ಲುತ್ತ ಹೋಗುತ್ತಾರೆ. ಕೆಲವರಲ್ಲಿ ಕಾಯಿ ಒಡೆಯುತ್ತಾರೆ.

ಬ್ರಾಹ್ಮಣ ವೈಶ್ಯ ಸಮುದಾಯದಲ್ಲಿ ಶವದ ಹಿಂದೆ ಹೆಣ್ಣು ಮಕ್ಕಳು ಹೋಗುವುದಿಲ್ಲ. ಬೇರೆ ಸಮುದಾಯದಲ್ಲಿ ಹೋಗುವುದನ್ನು ಕಾಣಬಹುದಾಗಿದೆ. ಬ್ರಾಹ್ಮಣರು ವೈಶ್ಯರು, ಹೆಣವನ್ನು ಹೊರಗಡೆ ತಂದು ಸಿದಿಗಿ ಮೇಲೆ ಮಲಗಿಸಿ ಸಂಬಂಧಿಕರಿಂದ ಎಳ್ಳುನೀರನ್ನು ಎಡಗೈ ಮೂಲಕ ಹಾಕಿಸುತ್ತಾರೆ. ನಂತರ ಬೀಗರು ಮೊದಲು ಹೆಗಲು ಕೊಡಬೇಕು. ಶವವನ್ನು ಸ್ಮಶಾನಕ್ಕೆ ಒಯ್ಯುವಾಗ ರಾಮಧ್ಯಾನ ಮಾಡುತ್ತ ತೆಗೆದುಕೊಂಡು ಊರಿನ ಮುಂದುಗಡೆ ಇರುವ ಕೆ.ಇ.ಬಿ.ಯ ಎದುರುಗಡೆ ಸ್ಮಶಾನದಲ್ಲಿ ಇಡುತ್ತಾರೆ. ಮೊದಲೇ ಕಟ್ಟಿಗೆಯಿಂದ ಮಾಡಿದ ಮಂಟಪದ ಮೇಲೆ ಮಲಗಿಸುತ್ತಾರೆ. ನಂತರ ಸತ್ತವರ ಹಿರಿಯ ಮಗ ಮನೆಯಿಂದ ತಂದ ಗಡಿಗೆಯನ್ನು ಶವದ ಸುತ್ತ ಮೂರು ಸಾರಿ ಪ್ರದಕ್ಷಿಣೆ ಹಾಕಿ ಆ ಗಡಿಗೆಯನ್ನು ಒಡೆಯುತ್ತಾನೆ ನಂತರ ಹಿರಿಯ ಮಗ ಅಗ್ನಿಸ್ಪರ್ಶ ಮಾಡುತ್ತಾನೆ.

ಈಡಿಗರು, ಹರಿಜನರು, ನಾಯಕರು, ಲಿಂಗಾಯಿತರು ಮುಂತಾದ ಸಮುದಾಯದವರು ಶವವನ್ನು ತೆಗೆದುಕೊಂಡು ಹೋಗಿ ಈಗಿನ ಚಿತ್ರಮಂದಿರದ ಹಿಂಭಾಗದಲ್ಲಿ ಇರುವ ಸ್ಮಶಾನದಲ್ಲಿ ಹೂಳುತ್ತಾರೆ. ಮೊದಲೇ ಕುಣಿಯನ್ನು ತೆಗೆಸಿರುತ್ತಾರೆ. ನಂತರ ಎಲ್ಲರೂ ಹಿಡಿ ಮಣ್ಣನ್ನು ಹಾಕುವರು. ಈ ಸಮುದಾಯದಲ್ಲಿ ಹೆಣದ ಹಿಂದೆ ಹೋದ ಸ್ಮಶಾನಕ್ಕೆ ಹೋಗಿ ಹೆಣ್ಣಿನ ಮುತ್ತೈದೆ ತನವನ್ನು ವಿದುವೆಯರು ತೆಗೆಯುತ್ತಾರೆ. ಆ ಮುಖ ಯಾರಿಗೂ ಕಾಣದ ಹಾಗೆ ಮುಚ್ಚಿಕೊಂಡು ಮನೆಗೆ ಬರುತ್ತಾರೆ.

ಬ್ರಾಹ್ಮಣರು, ವೈಶ್ಯರಲ್ಲಿ ತಂದೆ ತಾಯಿ ಬದುಕಿದ್ದವರು ಸ್ಮಶಾನಕ್ಕೆ ಹೋಗುವುದಿಲ್ಲ. ಒಂದು ವೇಳೆ ಸೊಸೆ ಬಸುರಿಯಾಗಿದ್ದರೆ, ಮಗ ಬೆಂಕಿಕೊಡಲು ಬರುವುದಿಲ್ಲ, ಉಳಿದವರು ಅಗ್ನಿ ಸ್ಪರ್ಶ ಮಾಡಬಹುದು. ಇವರಲ್ಲಿ ಶವ ಸುಟ್ಟು ಮೂರು ದಿನದ ನಂತರ ಶವದ ಬೂದಿಯನ್ನು ಉಳಿದ ಎಲುಬುಗಳನ್ನು ಒಂದು ಮಡಿಕೆಯಲ್ಲಿ ಹಾಕಿ ತುಂಗಾಭಧ್ರಾ ನದಿಗೆ ಬಿಟ್ಟು ಬರುತ್ತಾರೆ.

ಎಲ್ಲಾ ಸಮುದಾಯದಲ್ಲಿ ಒಂಬತ್ತು ದಿನಗಳವರೆಗೆ ಎಲ್ಲಿಗೂ ಹೋಗುವಂತಿಲ್ಲ. ತಲೆ ಕೂದಲು ಗಡ್ಡವನ್ನು ಬೋಳಿಸುವಂತಿಲ್ಲ. ಮುಸ್ಲಿಂರಲ್ಲಿ ಮೂರನೇ ದಿನದಂದು ಕುರಿಯನ್ನು ಬಲಿಕೊಟ್ಟು ಗೋರಿಯ ಬಳಿಗೆ ಹೋಗಿ ಅವರು ತಿನ್ನುವ ಮಾಂಸದ ಊಟವನ್ನು ಇಟ್ಟು ಪ್ರಾರ್ಥಿಸುವರು. ಆ ದಿನ ಮನೆಯಲ್ಲಿ ಖುರಾನ್ ಓದುವರನ್ನು ಕರೆಯಿಸಿ ಸಂಪೂರ್ಣ ಖುರಾನ್ ಓದಿಸುವವರು, ನಂತರ ತಮ್ಮ ಕೈಲಾದಷ್ಟು ದಾನವನ್ನು ಮಾಡುತ್ತಾರೆ. ಕೆಲವರು ೩ ದಿನ, ೯ದಿನ, ೪೦ದಿನ, ಕಾರ್ಯಮಾಡುತ್ತಾರೆ.

ರಂಜಾನ್ ತಿಂಗಳಲ್ಲಿ ಸತ್ತವರ ಹೆಸರಿನಲ್ಲಿ ಪಿತ್ರಹ (ದಾನ) ಮಾಡುತ್ತಾರೆ. ಮನೆಯಲ್ಲಿ ಎಷ್ಟು ಜನ ಇರುತ್ತಾರೊ ಅದರಂತೆ ಒಂದು ತಲೆಗೆ ೨೧/೨ ಕೆ.ಜಿ ಗೋಧಿಯನ್ನು ದಾನ ಮಾಡುತ್ತಾರೆ.

ಕೆಲವು ಸಮುದಾಯದಲ್ಲಿ ಗಂಧ ಪೂಜೆ ಮಾಡುವುದರ ಮೂಲಕ ಸೂತಕ ಕಳೆಯುತ್ತಾರೆ. ಎಲ್ಲಾ ಸಮುದಾಯದಲ್ಲಿ ತಿಥಿಯ ಪೂರ್ವದಲ್ಲಿ ಮನೆಗಳಿಗೆ ಸುಣ್ಣ ಬಳಿಸುತ್ತಾರೆ. ಶ್ರಾದ್ಧದಿನ ವೈಶ್ಯರು, ಬ್ರಾಹ್ಮಣರು ಜನಿವಾರ ಬದಲಾಯಿಸಿಕೊಂಡು ಪಿಂಡ ಪ್ರದಾನ ಮಾಡುತ್ತಾರೆ. ಹರಿಜನರು ನಾಯಕರು ಮಾಂಸದೂಟ ಮಾಡುತ್ತಾರೆ, ಬ್ರಾಹ್ಮಣರು ವೈಶ್ಯರಲ್ಲಿ ಗಂಡಸತ್ತ ೧೦ನೇ ದಿನಕ್ಕೆ ಮಹಿಳೆಯ ಮುತ್ತೈದೆತನವನ್ನು ತೆಗೆಯುತ್ತಾರೆ.

ಜೈನರಲ್ಲಿ ಸತ್ತ ವ್ಯಕ್ತಿ ಬಾಯಲ್ಲಿ ಬಂಗಾರದ ತುಂಡನ್ನು ಹಾಕಿರುತ್ತಾರೆ, ಶವಕ್ಕೆ ಸ್ನಾನ ಮಾಡಿಸಿ ಬಿಳಿಬಟ್ಟೆ ತೊಡಿಸುತ್ತಾರೆ. ಸ್ನಾನ ಮಾಡಿಸಿ ಬಟ್ಟೆ ತೊಡಿಸಿ ಗಂಡನಿಂದ ಹಣೆಗೆ ಕುಂಕುಮ ಇಡುತ್ತಾರೆ. ಶವ ತೆಗೆದುಕೊಂಡು ಹೋಗುವ ಸಂದರ್ಭದಲ್ಲಿ ಶವದ ಕಾಲಿನ ಹತ್ತಿರ ಕೊಬ್ಬರಿಯನ್ನು ಇಟ್ಟು ಸಂಬಂಧಿಕರೆಲ್ಲಾ ನಮಸ್ಕಾರ ಮಾಡುತ್ತಾರೆ. ನಂತರ ಶವವನ್ನು ಸ್ಮಶಾನಕ್ಕೆ ಒಯ್ಯುತ್ತಾರೆ. ಇಲ್ಲಿ ಕೂಡ ಹೆಂಗಸರು ಸ್ಮಶಾನಕ್ಕೆ ಹೋಗುವುದಿಲ್ಲ, ಹೆಣವನ್ನು ಸುಡುತ್ತಾರೆ. ಗಂಡು ಮಕ್ಕಳು ಕೂದಲು ತೆಗೆಯುತ್ತಾರೆ. ೧೧ನೇ ದಿನ ತಿಥಿ ಮಾಡುತ್ತಾರೆ. ಎಲ್ಲರು ಬಿಳಿ ಬಟ್ಟೆ ಧರಿಸಿರುತ್ತಾರೆ.

ತುಪ್ಪದಲ್ಲಿ ತಯಾರಿಸಿದ ಸಿಹಿ ಪರೋಟ, ಹೆಸರುಬೇಳೆ ಸಾರು, ಹಪ್ಪಳ ಅಡುಗೆ ಮಾಡಿ ಬಂದವರಿಗೆಲ್ಲಾ ಬಡಿಸುತ್ತಾರೆ. ಅಂದು ಬಡವರಿಗೆಲ್ಲಾ ಬಟ್ಟೆ ಇತರ ವಸ್ತುಗಳನ್ನು ದಾನ ಮಾಡುತ್ತಾರೆ. ಒಂದು ವರ್ಷದವರೆಗೆ ಯಾವುದೇ ಹಬ್ಬ ಮಾಡುವುದಿಲ್ಲ.

ವೀರಶೈವರಲ್ಲಿ ಯಾರಾದರು ತೀರಿಕೊಂಡರೆ ಸಮಾಜದ ಎಲ್ಲಾ ಬಾಂಧವರು ಬರುತ್ತಾರೆ. ಮೊದಲು ಶವಕ್ಕೆ ಸ್ನಾನ ಮಾಡಿಸಿ ಮನೆಯ ಮುಂದೆ ಕೂಡಿಸುತ್ತಾರೆ. ಒಬ್ಬ ಜಂಗಮನನ್ನು ಕರೆಸಿ ಅವರು ತಮ್ಮ ಕಾಲಿನ ಪಾದವನ್ನು ಶವದ ಮೇಲೆ ಇಡುತ್ತಾರೆ, ನಂತರ ಜಂಗಮರ ಪಾದವನ್ನು ಮನೆಯವರು ಪೂಜೆ ಮಾಡುತ್ತಾರೆ. ಶವಕ್ಕೆ ಹೂವಿನ ಅಲಂಕಾರ ಮಾಡುತ್ತಾರೆ. ಶವವನ್ನು ತೆಗೆದುಕೊಂಡು ಹೋಗುವುದಕ್ಕೆ ಚಕ್ಕಡಿಯನ್ನು ಮಾಡಿರುತ್ತಾರೆ, ಆ ಚಕ್ಕಡಿಯನ್ನು ತೊಳೆದು ಜಂಗಮರ ಪಾದ ಪೂಜೆಯ ನೀರನ್ನು ಚಕ್ಕಡಿ ಹಾಕಿ ಪೂಜೆಮಾಡುತ್ತಾರೆ. ಎಲ್ಲಾ ದೈವಸ್ಥರು ಬಂದಿದ್ದಾರೆ ಎಂದು ಗೊತ್ತಾದಾಗ ಐದು ಮಂದಿ ಬಂದು ಆ ಚಕ್ಕಡಿಯಲ್ಲಿ ಶವವನ್ನು ಕೂಡಿಸುತ್ತಾರೆ. ಈ ಐದು ಮಂದಿಗೆ ಭಸ್ಮದ ಉಂಡಿ ಕೊಡುತ್ತಾರೆ. ಅವರು ತಿಥಿಯ ದಿನ ಬರಬೇಕು, ಚಕ್ಕಡಿಯ ಮೂಲಕ ತೆಗೆದುಕೊಂಡು ಹೋಗಿ ಮೊದಲೆ ಕುಣಿಯನ್ನು ತೋಡಿಸಿರುತ್ತಾರೆ. ಹಿರಿಯರೆಲ್ಲಾ ಸೇರಿ ಆ ಕುಣಿಯಲ್ಲಿ ಶವವನ್ನು ಕೂಡಿಸುತ್ತಾರೆ. ಕೈಯಲ್ಲಿ ಲಿಂಗಕೊಟ್ಟು ನಂತರ ಮುಚ್ಚುತ್ತಾರೆ. ಮುಚ್ಚಿದ ಮೇಲೆ ಜಂಗಮರ ಪಾದವನ್ನು ಶವದ ಮೇಲೆ ಇಟ್ಟು ಪೂಜೆ ಮಾಡುತ್ತಾರೆ. ಅಲ್ಲಿಯೇ ಜಂಗಮರು ೯ನೇ ದಿವಸದ ಕಾರ್ಯದ ಬಗ್ಗೆ ಹೇಳುತ್ತಾರೆ. ೯ ದಿವಸದಲ್ಲಿ ತಿಥಿಕಾರ್ಯದಲ್ಲಿ ಸಿಹಿ ಅಡುಗೆ ಮಾಡುತ್ತಾರೆ, ಒಂದು ತಂಬಿಗೆಯಲ್ಲಿ ನೀರು, ಅಡುಗೆ ಜೊತೆಗೆ ಸತ್ತಾಗಉಟ್ಟುಕೊಂಡ ಬಟ್ಟೆಯನ್ನು ಒಗೆಸಿ ಆ ಬಟ್ಟೆಯನ್ನು ಮನೆಯಲ್ಲಿ ಇಟ್ಟು ಪೂಜೆ ಮಾಡುತ್ತಾರೆ. ಜಂಗಮರಿಗೆ ಪಾದ ಪೂಜೆ ಮಾಡಿ ಅವರಿಗೆ ಊಟ ಹಾಕಿಸಿ ನಂತರ ಬಂದವರಿಗೆಲ್ಲಾ ಊಟ ಹಾಕಿಸುತ್ತಾರೆ. ೯ ದಿನಗಳ ವರೆಗೆ ಸೂತಕ ಇರುತ್ತದೆ. ನಂತರ ಯಾವ ಕಾರ್ಯಬೇಕಾದರು ಮಾಡಬಹುದು. ಸತ್ತಂತಹ ಸಂದರ್ಭ ಸರಿಯಾಗಿಲ್ಲದಿದ್ದರೆ ಒಂದು ದಿನದ ಮಟ್ಟಿಗೆ ಮನೆಯನ್ನು ಬಿಟ್ಟು ಬೇರೆ ಕಡೆ ವಾಸಮಾಡುತ್ತಾರೆ.

ಮುಸ್ಲಿಂರಲ್ಲಿ ಯಾರಾದರು ಸತ್ತಾಗ–ತಮ್ಮ ಸಂಬಂಧಿಕರಿಗೆಲ್ಲಾ ಸುದ್ದಿ ತಿಳಿಸುತ್ತಾರೆ. ಸತ್ತ ಹೆಣವನ್ನು ಶುಚಿಗೊಳಿಸಿ ಬಟ್ಟೆ ಹೊದಿಸುತ್ತಾರೆ. ಶವಕ್ಕೆ ಗಂಧದ ಎಣ್ಣೆ ಹಚ್ಚುತ್ತಾರೆ. ಹೂವನ್ನು ಹಾಕಿ ನಂತರ ನಾಲ್ಕು ಜನ ಹೊತ್ತುಕೊಂಡು ಹೋಗುತ್ತಾರೆ. ಹೆಣವನ್ನು 'ದಫನ್' ಮಾಡುತ್ತಾರೆ. ಮೂರು ದಿನ ಕಾರ್ಯ, ೯ದಿವಸದ ಕಾರ್ಯ, ೨೦ ದಿವಸದ ಕಾರ್ಯ ನಂತರ ೪೦ ದಿವಸದ ಕಾರ್ಯ, ೧೧ತಿಂಗಳಳದಲ್ಲಿ ಪರ್ಸಿ ಎಂಬ ಕಾರ್ಯ ಮಾಡುತ್ತಾರೆ.

'ಪರೀಕ್ಷೆ' ಮಾಡುವಾಗ ದಫನ್ ಮಾಡಿದ ಜಾಗಕ್ಕೆ ಹೋಗಿ ಪೂಜೆ ಸಲ್ಲಿಸಿ ಎಡೆ ಇಡುತ್ತಾರೆ. ಅಂದು ತಮ್ಮ ಕೈಲಾದಾದಷ್ಟು ದಾನ ಮಾಡುತ್ತಾರೆ.

ರಂಜಾನ್ ಸಮಯದಲ್ಲಿ ತೀರಿಹೋದ ತಂದೆ ತಾಯಿಯರ ಹೆಸರಲ್ಲಿ ಪತ್ರಹ (ದಾನ) ಮಾಡುತ್ತಾರೆ. ಮನೆ ಸದಸ್ಯರು ಎಷ್ಟು ಜನ ಇರುವರೋ ಅದರಂತೆ ಒಂದು ತಲೆಗೆ ೨೧/

೨ಕೆ.ಜಿ ಗೋಧಿಯನ್ನು ದಾನ ಮಾಡುತ್ತಾರೆ. ಗೋಧಿ ಅಥವಾ ಜೋಳ, ಸಜ್ಜೆ, ಎಣ್ಣೆ, ದಾನ ಮಾಡಲೇಬೇಕು ಇದು ಇವರಲ್ಲಿ ಕಡ್ಡಾಯವಾಗಿದೆ.

ಹೆಣವನ್ನು ಮುಟ್ಟುವವರು ಸ್ನಾನ ಮಾಡಿ ಬಂದು ಮುಟ್ಟಬೇಕು, ಒಂದು ವೇಳೆ ಸ್ನಾನ ಮಾಡದೇ ಬಂದಂತಹ ವ್ಯಕ್ತಿಯು ಹೆಣವನ್ನು ಮುಟ್ಟಿದರೆ ಸತ್ತ ವ್ಯಕ್ತಿಯು ಪಾಪಕ್ಕೆ ಹೋಗುತ್ತಾನೆ ಎಂಬುದು ನಂಬಿಕೆ. ಮಹಿಳೆಯರು ದಫನ್ ಕ್ರಿಯೆಯಲ್ಲಿ ಭಾಗವಹಿಸುವುದಿಲ್ಲ ಅಲ್ಲಿ ಅವರಿಗೆ ಪ್ರವೇಶ ನಿಷಿದ್ಧ. ಪ್ರತಿಯೊಬ್ಬ ಹೆಣ್ಣು ಗಂಡು 'ಖುರಾನ್' ಓದಲು ಕಲಿತಿರಬೇಕು. ೧೦ ವರ್ಷದ ಒಳಗಾಗಿ ಖುರಾನ್ ಓದಲು ಕಲಿತಿರಬೇಕು.

**ಸಾಮೂಹಿಕ ವಿವಾಹಗಳು**

ಇಂದು ಸಾಮೂಹಿಕ ವಿವಾಹಗಳು ಹೆಚ್ಚಾಗಿ ನಡೆಯುವುದನ್ನು ಮರಿಯಮ್ಮನಹಳ್ಳಿಯಲ್ಲಿ ಕಾಣಬಹುದಾಗಿದೆ. ಕೆಳವರ್ಗದವರಾದ ನಾಯಕರು, ಹರಿಜನರು, ಈಡಿಗರು, ವಡ್ಡರು, ಕೊರವರು, ಹೆಳವರು, ಕುರುಬರು, ಈ ಸಮುದಾಯದಲ್ಲಿನ ಆರ್ಥಿಕ ಸ್ಥಿತಿ ಮಟ್ಟ ಕಡಿಮೆ ಇರುವಂತವರು ಸಾಮೂಹಿಕ ಮದುವೆಗಳಲ್ಲಿ ಮದುವೆಯಾಗುತ್ತಾರೆ.

ಮರಿಯಮ್ಮನಹಳ್ಳಿ, ಹೋಸಪೇಟೆ, ಬಳ್ಳಾರಿ ಮುಂತಾದ ಕಡೆಗಳಿಗೆ ಹೋಗಿ ಅಲ್ಲಿ ನಡೆಯುವಂತಹ ಸಾಮೂಹಿಕ ಮದುವೆಗಳಲ್ಲಿ ಮದುವೆ ಮಾಡಿಕೊಂಡು ಬರುತ್ತಾರೆ. ಮದುವೆ ಕಾರ್ಯವನ್ನು ಮಾಡಿಸುವ ಸಂಘಟನೆಗಳು ಮದುವೆಗೆ ಬೇಕಾಗುವ ಮಾಂಗಲ್ಯ ಸರ, ಬಟ್ಟೆ, ಹಾರ ಮುಂತಾದ ವಸ್ತುಗಳನ್ನು ಕೊಡುತ್ತಾರೆ. ಹೀಗಾಗಿ ಕೆಳವರ್ಗದಲ್ಲಿ ಸಾಮೂಹಿಕ ಮದುವೆಗಳಲ್ಲಿ ಮದುವೆಯಾಗುವುದಯ ಕಂಡು ಬರುತ್ತಾದೆ.

ಮರಿಯಮ್ಮನಹಳ್ಳಿಯ ವಾಲ್ಮೀಕಿ ಯುವಕ ಸಂಘ, ಕರ್ನಾಟಕ ರಕ್ಷಣಾವೇದಿಕೆಯವರು ಇತರ ಸಂಘಟನೆಗಳಿಂದ ಜೊತೆಗೂಡಿ ಇತ್ತೀಚಿನ ವರ್ಷಗಳಿಂದ ಈ ಊರಿನಲ್ಲಿ ಸಾಮೂಹಿಕ ವಿವಾಹವನ್ನು ನಡೆಸುತ್ತಾ ಬಂದಿದ್ದಾರೆ. ಇಂದು ಇಂತಹ ಕಾರ್ಯಕ್ರಮಗಳು ಹೆಚ್ಚು ಜನಪ್ರಿಯ ಆಗುತ್ತಾ ಬಂದಿವೆ.

**೪.೨. ವಾರ್ಷಿಕಾವರ್ತನದ ಆಚರಣೆ :**

ವರ್ಷದಲ್ಲಿ ನಡೆಯುವ ಅಂದರೆ ತಿಂಗಳಿನಿಂದ ತಿಂಗಳಿಗೂ ನಡೆಯುವ ಪ್ರತಿಯೊಂದು ಪೂಜೆಗಳಾಗಲಿ, ಹಬ್ಬಗಳಾಗಲಿ, ಹರಿದಿನಗಳಾಗಲಿ ಇವೆಲ್ಲವನ್ನು ವಾರ್ಷಿಕಾವರ್ತನದ ಆಚರಣೆಗಳೆಂದು ಕರೆಯುತ್ತಾರೆ.

ವಾರ್ಷಿಕಾವರ್ತನದ ಆಚರಣೆಗಳಾದಂತವುಗಳಿಗೆ ತನ್ನದೇ ಆದಂತ ವಿಶಿಷ್ಟತೆ ಇದೆ. ತನ್ನದೇ ಆದ ವಿಶಿಷ್ಟತೆಯಿಂದಲೇ ವಾರ್ಷಿಕಾವರ್ತನ ಆಚರಣೆ ಇಂದಿಗೂ ಇರುವುದನ್ನು ಕಾಣುತ್ತೇವೆ. ನೆಲೆ, ಬೆಲೆಗಳು ವಾರ್ಷಿಕಾವರ್ತನದ ಆಚರಣೆಗಳಿಂದ ಬಂದಿರುವುದಾಗಿದೆ.

ಮನುಷ್ಯನ ಜೀವನವು ನಿಂತ ನೀರಾಗದೆ ಚಲನವಲನ ಕ್ರಿಯೆಗೆ ಒಳಪಟ್ಟಿದೆ. ಹಳೆಯದು ಕೊಚ್ಚಿಕೊಂಡು ಹೋಗಿ ಹೊಸತು ಬರುವ ಹಾಗೆ ಋತುವಿನಿಂದಲೇ ಹೊಸದನ್ನು ಆರಂಭಿಸುವ

ನಾವು ಕಾಲಕ್ಕೆ ಬದ್ಧರಾಗಿ ಮನುಸ್ಸನ್ನು ಬದಲಾಯಿಸಿಕೊಂಡು ಹೊಸತನದಿಂದ ಜೀವನ ಸಾಗಿಸುವುದಕ್ಕೆ ಈ ವಾರ್ಷಿಕಾವರ್ತನದ ಆಚರಣೆಗಳು ಕಾರಣವಾಗಿವೆ. ಹುಣ್ಣಿಮೆ, ಅಮವಾಸ್ಯೆ, ಜಯಂತಿ, ಉತ್ಸವ, ಹಬ್ಬಗಳು ಈ ವಾರ್ಷಿಕಾವರ್ತನದ ಆಚರಣೆಗಳಾಗಿವೆ.

ಪ್ರತಿಯೊಂದು ಸಮುದಾಯದಲ್ಲಿಯೂ ತಿಂಗಳುಗಳಲ್ಲಿ ಬರುವ ಆಚರಣೆಗಳ ಆಚರಿಸುವಿಕೆಯನ್ನು ಪ್ರಚಲಿತ ವಿದ್ಯಾಮಾನಗಳಲ್ಲಿಯೂ ಕಾಣಬಹುದು. ಕೆಲವು ಕಡೆ ವರುಷಕ್ಕೊಮ್ಮೆ ಆಚರಿಸುವ ಪದ್ಧತಿಯನ್ನು ಅಂದರೆ ಪ್ರಾದೇಶಿಕವಾಗಿ ಭಿನ್ನತೆಯನ್ನು ಕಾಣುತ್ತಾ ಹೋಗುವುದಾಗಿದೆ. ಪ್ರಾದೇಶಿಕವಾಗಿ ಋತುಗಳಿಗನುಸಾರವಾಗಿ ಆಚರಿಸುವುದನ್ನು, ಆರ್ಥಿಕ ಪರಿಸ್ಥಿತಿಗನುಸಾರವಾಗಿ ನಡೆಸುವುದನ್ನು ಕಾಣುತ್ತೇವೆ.

ಈ ಹಬ್ಬ ಹರಿ ದಿನಗಳನ್ನು ಯಾಕೆ, ಯಾವ ಕಾರಣಕ್ಕೋಸ್ಕರ, ಅದು ಏನನ್ನು ಸೂಚಿಸುತ್ತೆ ಎನ್ನುವುದನ್ನು ನಾವು ಶಿಷ್ಟ ಮತ್ತು ಜನಪದಗಳೆರಡರಲ್ಲೂ ಕಂಡುಕೊಳ್ಳುತ್ತೇವೆ. ಇನ್ನು ಸಾಮಾಜಿಕವಾಗಿ ಬೆರೆಯುವ ಜನ ಜಂಗುಳಿಗೋಸ್ಕರ ಜಾತ್ರೆಗಳು, ಊರಿನ ಒಳಿತಿಗಾಗಿ ಅಮ್ಮನನ್ನು ಮಾಡಿ ಆಕೆಯನ್ನು ಶಾಂತಿ ಪಡಿಸಲು, ಬೇಟೆಯ ಆಚರಣೆ, ಯಾವುದೇ ಬೇದ ಭಾವವಿಲ್ಲದೆ ಬೆರೆಯುವುದಕ್ಕೋಸ್ಕರ ನಡೆಯುವ ಜಾತ್ರೆಗಳು ತಿಂಗಳಿಗನುಗುಣವಾಗಿ ಮಳೆ, ಗಾಳಿ, ಚಳಿ, ಬೇಸಿಗೆಗೆ ತಕ್ಕಂತೆ ಬರುವ ಹಬ್ಬಗಳು ಉದಾ:–ಹೇಳುವುದಾದರೆ;

೧. ನಾಗಪ್ಪನ ಮುಖ ತೊಳೆಯಲು ಜಿನಿ ಜಿನಿ ಮಳೆ

೨. ದೀಪಾವಳಿಗೆ ದೀಗಿಯಷ್ಟು ಚಳಿ

೩. ಶಿವರಾತ್ರಿಗೆ ಶಿವಶಿವ ಎನ್ನುವಷ್ಟು ಬಿಸಿಲು

೪. ಬಂದುಣ್ಣಿಮೆಗೆ ಬಂಡಿಗಾಲಿಯಷ್ಟು ಚಳಿ

೫. ಶೀಗಿ ಹುಣ್ಣಿಮೆಗೆ ಶಿಗೇಕಾಯಿಯಷ್ಟು ಚಳಿ

೬. ಹಸಿರನ್ನು ಸೂಚಿಸ ಯುಗಾದಿ ಈ ರೀತಿಯಲ್ಲಿ ಆಡು ಮಾತಿನಲ್ಲಿ

೭. ಜೋಕಪ್ಪನ ಅಳಲುವಿಗೆ ಜೋಕುಮಾರನಂಥ ಮಗ

ಈ ತರಹ ತಿಂಗಳಿಗನುಗುಣವಾಗಿ ಹೆಸರು ಸೂಚಿಸುವ ಹುಣ್ಣಿಮೆ, ಅಳಲು, ಅಮವಾಸ್ಯೆ, ಷಷ್ಠಿ, ಪಂಚಮಿ, ರಾಹು, ಗುಕಕಾಲಗಳನ್ನು ಈ ರೀತಿಯಾಗಿ ಕಾಣುವುದಾಗಿದೆ.

ಒಟ್ಟಾರೆ ಹುಟ್ಟು ಸಾವು ಎರಡೂ ಸೂತಕಗಳೇ. ಜೀವವೊಂದು ಜಗತ್ತಿಗೆ ಬಂದ ಹತ್ತು ದಿನಗಳ ನಂತರ ಸೂತಕ ಕಳೆದುಕೊಂಡು, ಕರೆಸಿಕೊಂಡ ಹೆಸರಿನೊಂದಿಗೆ ಬದುಕಿಗೆ ತೊಡಗಿದರೆ, ತೀರಿಕೊಂಡ ಜೀವ ಹತ್ತು ದಿನಗಳ ನಂತರ ಸೂತಕ ಕಳೆದುಕೊಂಡು ನಿರ್ಗಮನ ಹೊಂದುತ್ತವೆ. ಹುಟ್ಟು ಬದುಕಿನ ಮುಂದುವರಿಕೆಯಾಗಿ ನಾವು ಬದುಕಿದ್ದರ ನೆನಪಿನ ಆಚರಣೆಯಾಗಿ ಮುಂದುವರೆಯುತ್ತದೆ.

ಇನ್ನು ವಾರ್ಷಿಕಾವರ್ತನದ ಆಚರಣೆಯಲ್ಲಿ ಸತ್ತವರ ನೆನಪಿನಲ್ಲಿ ವರ್ಷಕ್ಕೊಮ್ಮೆ ನೆರವೇರಿಸುವ ಆಚರಣೆಯನ್ನು ಶಿಷ್ಟ ಪರಂಪರೆಯಲ್ಲಿ ಪಿತೃ ಪಕ್ಷ, ಶ್ರಾದ್ಧ ಎಂಬ ಹೆಸರುಗಳಲ್ಲಿ ಕರೆದರೆ ಜನಪದ ಪರಂಪರೆಯಲ್ಲಿ ಹಿರಿಯರ ಹಬ್ಬ, ಮಾಳಪಕ್ಷ ಎಂದು ಹೇಳುತ್ತಾರೆ. ಹೆಚ್ಚಾಗಿ ಹಿರಿಯರ ಹಬ್ಬವನ್ನು ದಸರಾ, ಯುಗಾದಿಯ ಅಮವಾಸ್ಯೆಯ ದಿನದಂದು ಆಚರಿಸುತ್ತಾರೆ.

ಹಿರಿಯರನ್ನು ನೆನೆಯುವ ಆಚರಣೆ ದಕ್ಷಿಣ ಕರ್ನಾಟಕದಲ್ಲಿ ಒಂದು ಕ್ರಮದಲ್ಲಿದ್ದರೆ, ಉತ್ತರ ಕರ್ನಾಟಕದಲ್ಲಿ ಇನ್ನೊಂದು ಬಗೆಯಲ್ಲಿದೆ. ಉತ್ತರ ಕರ್ನಾಟಕದ ಭಾಗ ಬಹುತೇಕ ಇತಿಹಾಸ ನಡೆದ ಸ್ಥಳವಾದ್ದರಿಂದ ಅಲ್ಲಿ ಅದು ವೀರಗಲ್ಲು ಮಾಸ್ತಿಕಲ್ಲು ಪೂಜೆಯ ಹಿನ್ನೆಲೆಯಲ್ಲಿ ಬೆಳದಿದೆ. ಈ ಹಿರಿಯರ ದಿನಾಚರಣೆಯನ್ನು ನಿರ್ಧಿಷ್ಟ ಸಮಯದಲ್ಲಿ ಗ್ರಾಮದವರೆಲ್ಲಾ ಗಾಡಿಕಟ್ಟಿಕೊಂಡು ಹೋಗಿ ತಮ್ಮ ಹಿರಿಯರು ಬದುಕಿದ್ದ ರಾಜಧಾನಿಗಳ ಕಡೆ ಹೋಗಿ ಅಲ್ಲಿಯ ನದಿಯ ತೀರದಲ್ಲಿ ಆಗಿ ಹೋದ ಹಿರಿಯರೊಂದಿಗೆ ರಾಜಮಹಾರಾಜರಿಗೂ ಎಡೆ ಇಟ್ಟು ಪೂಜೆ ನೆರವೇರಿಸಿ ಬರುವ ಕ್ರಮವಿದೆ. ಈ ಹಿರಿಯರ ಹಬ್ಬವು ಸಾಮೂಹಿಕ ಆಚರಣೆಯಾಗುವುದಕ್ಕಿಂತ ಕೌಟುಂಬಿಕ ನೆಲೆಯಲ್ಲಿ ಅಂಥ ಸಂಭ್ರಮವೇನೂ ಕಾಣಿಸದೆ ಮನೆಯಲ್ಲೇ ಮೌನದಲ್ಲೆಂಬಂತೆ ನಡೆದುಬಿಡುತ್ತದೆ. ಯಾವುದೇ ಕಹಳೆಯ ಕೊಂಬು ಮೆರವಣಿಗೆಯ ವಿಧಾನಗಳು ಈ ಹಬ್ಬದಲ್ಲಿರುವುದಿಲ್ಲ.

ಯಾವುದೇ ಸಮುದಾಯಕ್ಕೆ ತನ್ನದೇ ಆದ ದೈವಗಳ ಆಚರಣೆಗಳು ಇರುತ್ತವೆ. ಅಂತಹ ದೈವಗಳನ್ನು ಅವರು ತಮ್ಮದೇ ಆದ ಕ್ರಮದಲ್ಲಿ ಪೂಜಿಸುವುದು, ಸ್ಥಾಪಿಸುವುದು, ಅವುಗಳ ಕುರಿತು ನಂಬಿಕೆಗಳನ್ನು ಇಟ್ಟುಕೊಳ್ಳುವುದು, ವಿಧಿನಿಷೇಧಗಳನ್ನು ಇಟ್ಟುಕೊಂಡಿರುತ್ತಾರೆ. ಇದ್ದೇ ಇರುತ್ತವೆ. ಜಗತ್ತಿನ ಎಲ್ಲಾ ಸಮುದಾಯಗಳು ದೇವರ ಪ್ರೀತ್ಯಾರ್ಥವಾಗಿ ಹಬ್ಬಗಳನ್ನು ಆಚರಿಸುತ್ತಾ ಬಂದಿವೆ.

ಮರಿಯಮ್ಮನಹಳ್ಳಿಯಲ್ಲಿ ವಲಸೆ ಬಂದು ನೆಲೆಸಿರುವಂತಹ ಸಮುದಾಯಗಳು ತಮ್ಮ ಮೂಲ ಊರುಗಳಾದ ನಾರಾಯಣದೇವರ ಕೆರೆ, ಗೌರಿಪುರ, ಬಸಾಪುರಗಳಲ್ಲಿ ಇದ್ದಾಗ ಆಚರಿಸುವಂತಹ ಆಚರಣೆಗಳಾದ ಜೋಕಪ್ಪನ ಆಚರಣೆ, ಖೇಲದಮ್ಮನ ಆಚರಣೆ, ರಥದಮ್ಮನ ಆಚರಣೆ, ಚಂಗಳೀಕಮ್ಮ ಮತ್ತು ಕ್ಯಾತಪ್ಪನ ಆಚರಣೆ, ಮತ್ತು ಲಕ್ಷ್ಮಿನಾರಾಯಣಸ್ವಾಮಿ ಮತ್ತು ಆಂಜನೇಯಸ್ವಾಮಿ ದೈವಗಳ ಜಾತ್ರೆಗಳನ್ನು ಈ ಊರಿನಲ್ಲಿ ನೆಲೆಸಿದರು ಕೂಡ ತಪ್ಪದೇ ಆಚರಿಸುತ್ತಾ ಬಂದಿದ್ದಾರೆ.

ಮರಿಯಮ್ಮನಹಳ್ಳಿಯ ಮೂಲವಾಸಿಗಳು ತಮ್ಮ ಹಿಂದಿನವರು ಆಚರಿಸಿಕೊಂಡು ಬರುತ್ತಿದ್ದ ಮರಿಯಮ್ಮನಹಳ್ಳಿಯ ಗ್ರಾಮ ದೇವತೆಯ ಜಾತ್ರೆ ಆಚರಣೆಯನ್ನು ಇಂದಿಗೂ ಆಚರಿಸಿಕೊಂಡು ಬರುತ್ತಿದ್ದಾರೆ.

ಇಲ್ಲಿ ಮೂಲ ನಿವಾಸಿಗಳಿಗೂ ಮತ್ತು ವಲಸೆ ಬಂದಂತಹವರಿಗೂ ಸಾಂಸ್ಕೃತಿಕ ಸಂಘರ್ಷವು ಸೂಕ್ಷ್ಮವಾಗಿ ಕಂಡುಬಂದರೂ ಅಂತಹ ಸಂಘರ್ಷಕ್ಕೆ ಇಳಿಯದೇ ಆಚರಿಸುತ್ತಾ ಬಂದಿದ್ದಾರೆ.

ಮಾನವನ ಲೌಕಿಕ ಜೀವನದಿಂದ ಪಾರಮಾರ್ಥಿಕ ಜೀವನದತ್ತ ಮುನ್ನಡೆಯಲು ಸನಾತನವಾಗಿ ಆಚರಿಸುತ್ತಾ ಬಂದ ಈ ಆಚರಣೆಗಳು ಅನೇಕ ಸಮುದಾಯಗಳ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ.

ಮರಿಯಮ್ಮನಹಳ್ಳಿಯಲ್ಲಿ ನೆಲೆಸಿರುವ ಮತ್ತು ಮೂಲವಾಸಿಗಳ ಯುಗಾದಿಯಿಂದ ಯುಗಾದಿಯವರೆಗೆ ಬರುವಂತಹ ಹಬ್ಬಗಳನ್ನು ಆಚರಿಸುತ್ತಾರೆ. ಇವರಲ್ಲಿ ಯುಗಾದಿ ಹಬ್ಬವನ್ನು ಮರಿಯಮ್ಮನಹಳ್ಳಿಯ ಮೂಲನಿವಾಸಿಗಳಾದ ಬೇಡರು ಹಬ್ಬದ ಮರುದಿನ ಕಾಡಿಗೆ ಬೇಟೆಗೆ ಹೋಗುತ್ತಾರೆ. ಆದರೆ ಇಲ್ಲಿ ಬಂದು ನೆಲೆಸಿರುವಂತಹ ಬೇಡ ಸಮುದಾಯದವರಲ್ಲಿ ಬೇಟೆಗೆ ಹೋಗುವ ಪದ್ಧತಿ ಕಂಡು ಬರುವುದಿಲ್ಲ.

ವಲಸೆ ಬಂದಂತ ಮುಸ್ಲಿಂ ಮತ್ತು ಹಿಂದೂಗಳು ನಾರಾಯಣದೇವರ ಕೆರೆ, ಗೌರಿಪುರ, ಬಸಪುರದ ಮುಸ್ಲಿಂರು ಮೊಹರಂ ಹಬ್ಬದ ಸಂದರ್ಭ ಈ ಊರಿನ ಪೀರಲ್ ದೇವರುಗಳಲ್ಲಿ ಸಕ್ಕರೆ ಓದಿಕೆ ಮಾಡಿ ಪೂಜಿಸಿದರೆ, ನದಿ ಮುಳುಗಡೆಯಾದ ಹಂಪನ ಕಟ್ಟೆಯಿಂದ ಬಂದಂತಹ ಸಮುದಾಯದವರು ಈಗ ಇರುವ ಹಂಪನಕಟ್ಟೆಗೆ ಹೋಗಿ ಅಲ್ಲಿಯ ಪೀರಲ್ ದೇವರುಗಳಿಗೆ ಸಕ್ಕರೆ ಓದಿಸಿ ಬರುತ್ತಾರೆ. ಹೀಗೆ ಇಲ್ಲಿ ನೆಲೆಸಿರುವಂತ ಸಮುದಾಯಗಳಲ್ಲಿ ಆಚರಿಸುವಂತಹ ಆಚರಣೆಯಲ್ಲಿ ಭಿನ್ನತೆ ಕಂಡು ಬರುವುದನ್ನು ವಿಶ್ಲೇಷಣೆ ಮಾಡಲಾಗಿದೆ.

'ಹಬ್ಬ' ಎನ್ನುವ ಶಬ್ದ ಸಂಸ್ಕೃತದ ಪರ್ವನ್ ಪದದ ತದ್ಭವ ಪರ್ವವಾಗಿದೆ. 'ಪರ್ವ' ಎಂದರೆ ಇನ್ನೊಂದರ ಜೊತೆಯಲ್ಲಿ ಸಂಧಿಸುವುದು ಎಂದರ್ಥ. ಸಂಪ್ರದಾಯಗಳು ಮತ್ತು ಆಚರಣೆಗಳು ಹಬ್ಬಗಳಿಗೆ ಪ್ರೇರಕವಾಗಿವೆ. (ಕೃಷ್ಣಮೂರ್ತಿ ಓಡಿಗ ಬುಡಕಟ್ಟು ಸಮುದಾಯ ಒಂದು ಅಧ್ಯಯನ:ಪು೧೧೮). ಸಂಪ್ರದಾಯಗಳ ನೆಲೆಯಲ್ಲಿ ಪೂಜೆಯೂ ಜನರ ಸಾಮಾಜಿಕ ಚಲನ ಶೀಲತೆಯ ಒಂದು ಹಬ್ಬವಾಗಿದೆ. ಮತ್ತು ಜೀವಂತ ನೆನಪು ತರುವ ಭಾವನೆಗಳಾಗಿವೆ. ಸಂಸ್ಕೃತಿ ಬೆಳೆದದ್ದೇ ಹಬ್ಬಗಳಿಂದ ಹಾಗೂ ಹಬ್ಬಗಳನ್ನು ಆಚರಿಸುವುದರಿಂದ ಜನರ ಒಂದು ವಿಶೇಷ ಸಂಸ್ಕೃತಿ ಎಂದು ತೋರಿಸಿಕೊಡುವುದೇ ಹಬ್ಬವಾಗಿದೆ. ಹಬ್ಬಗಳ ಹುಟ್ಟಿಗೆ ದರ್ಮದ ನಂಬಿಕೆಗಳೇ ಕಾರಣವಾಗಿದೆ.

ಆಧುನಿಕ ದಿನ ಮಾನಗಳಲ್ಲಿ ಹಬ್ಬಗಳು, ಜಾತ್ರೆಗಳು ಕಡಿಮೆಯಾಗಿಲ್ಲ, ಎಂತಹ ಕಷ್ಟದ ಪರಿಸ್ಥಿತಿ ಇದ್ದರೂ ಸಹ ಈ ಆಚರಣೆಗಳನ್ನು ಆಚರಿಸುವುದು ಮಾತ್ರ ನಿಲ್ಲುವುದಿಲ್ಲ. ಬೇರೆ ಯಾವ ವಿಷಯಗಳಿಗೆ ಹಣ ಕ್ರೋಢೀಕರಣವಾಗದಿದ್ದರೂ ಹಬ್ಬ, ಉತ್ಸವದಲ್ಲಿ ತಮಗರಿವಿಲ್ಲದೇ ಹಣ ಜಮಾವಣೆಯಾಗುವುದು ಆಶ್ಚರ್ಯದ ಸಂಗತಿಯಾಗಿದೆ. ದೇವರನ್ನು ತಮ್ಮೊಡನೆ ಒಲಿಸಿಕೊಳ್ಳುವ ಸತತ ಪ್ರಯತ್ನಗಳಾಗಿ ಹಬ್ಬ ಆಚರಣೆ ಮಾಡುತ್ತಾರೆ. ಈ ರೀತಿಯಾಗಿ ತಮ್ಮ ಬದುಕಿನ ಎಲ್ಲ ಕಷ್ಟ ಸುಖಗಳಿಗೂ ದೇವರೇ ಕಾರಣ ಎಂದು ಭಾವಿಸಿದ್ದಾರೆ. ಮರಿಯಮ್ಮನಹಳ್ಳಿಯ ವಿವಿಧ ಸಮುದಾಯದವರುಗಳು ಅನೇಕ ವೃತ್ತಿಗಳಲ್ಲಿ ಭಾಗಿಯಾಗಿ ತಾವು ನಂಬಿರುವ ದೇವತೆಗಳನ್ನು ಪೂಜಿಸುವುದರೊಂದಿಗೆ ಹಬ್ಬಗಳನ್ನು ಆಚರಿಸುವುದನ್ನು ರೂಡಿಸಿಕೊಂಡಿದ್ದಾರೆ. ಜೊತೆಗೆ ಜೀವನ ನಿರ್ವಹಣೆಗಾಗಿ ಇನ್ನಿತರ ಕೆಲಸದಿಂದ ವರ್ಷವೆಲ್ಲ ದುಡಿಯುವುದರಿಂದ ಬಿಡುವು ಇರುತ್ತಿರಲಿಲ್ಲ. ಇಂತಹ ಸಮಯದಲ್ಲಿ ಅವರು ಸುಖ ಸಂತೋಷದಿಂದ ಇರಲು ಹಬ್ಬಗಳನ್ನು ಆಚರಿಸಿಕೊಂಡು

ಬಂದಿದ್ದಾರೆ. ಅವುಗಳಲ್ಲಿ ಯುಗಾದಿ, ದಸರಾ, ದೀಪಾವಳಿ, ಮೊಹರಂ ಮುಖ್ಯವಾದವುಗಳು ಹಾಗೂ ಗ್ರಾಮದೇವತೆ ದುರುಗಮ್ಮ ಜಾತ್ರೆ ಮತ್ತು ನಾಣಿಕೆರೆ ಲಕ್ಷ್ಮೀನಾರಾಯಣಸ್ವಾಮಿ ಮತ್ತು ಶ್ರೀ ಆಂಜನೇಯ ಸ್ವಾಮಿ ಜಾತ್ರೆಗಳನ್ನು ಮಾಡುತ್ತಾರೆ.

**೪.೨. ಜೋಕಪ್ಪನ ಆಚರಣೆ :**

ಮರಿಯಮ್ಮನ ಹಳ್ಳಿಯಲ್ಲಿ ಜೋಕಪ್ಪನ ಆಚರಣೆ ಮಾಡುತ್ತಾರೆ. ಜೋಕಪ್ಪನನ್ನು ಆಡಿಸುವವರು ನಾಣಿಕೇರಿಯ ಬಾರಿಕರ ಮನೆತನದವರು. ಇವರು ನೂರಾರು ವರ್ಷಗಳಿಂದ ಈ ಆಚರಣೆಯನ್ನು ಮಾಡಿಕೊಂಡು ಬಂದಿದ್ದಾರೆ.

ಬೆನಕನ ಅಮವಾಸ್ಯೆ ಆಗಿ ಐದು ದಿನಕ್ಕೆ ಬ್ರಾಹ್ಮಣರ ಮನೆಗೆ ಹೋಗಿ ಪಂಚಾಂಗ ಕೇಳುತ್ತಾರೆ. ಜೋಕಪ್ಪ ಎಂದು ಹುಟ್ಟಬೇಕು ಎಂದು ಕೇಳಿದಾಗ ಅವರು ಹೇಳಿದ ದಿನ ಜೋಕಪ್ಪ ಹುಟ್ಟುತ್ತಾನೆ. (ಜೋಕಪ್ಪ ಹುಟ್ಟಿದ ದಿನ ಬಾರಿಕ ಮನೆಯಲ್ಲಿ ಸಿಹಿ ಅಡುಗೆ ಮಾಡುತ್ತಾರೆ.) ಬ್ರಾಹ್ಮಣರು ಹೇಳಿದ ದಿನವನ್ನು ಕೇಳಿಕೊಂಡು ಬಡಿಗೇರ ಮನೆಗೆ ಹೋಗಿ ೧೨ ಜನ ಬಾರಿಕರೊಂದಿಗೆ ಅವರಿಗೆ ೫೦೦ರೂ ಹಣ, ೧೧ಸೇರು ಅಕ್ಕಿ ೨ ಅರಳಿಕಟಗಿ ಕೊಟ್ಟು ಜೋಕಪ್ಪ ಹುಟ್ಟುವುದಕ್ಕಿಂತ ಒಂದು ದಿನ ಮುಂಚೆ ಬಂದು ಒಂದು ಬುಟ್ಟಿಯಲ್ಲಿ ಬೇವಿನ ಸೊಪ್ಪು ಹಾಕಿಕೊಂಡು ೧೨ಜನ ಬಾರಿಕ, ನಾಯಕರ ಮಹಿಳೆಯರು ಹೋಗುತ್ತಾರೆ. ಬಡಿಗೇರು ಜೋಕಪ್ಪನ ಕೊಡುವಾಗ ಪೂಜೆ ಮಾಡಿಕೊಡುತ್ತಾರೆ. ಅವರು ಕೊಟ್ಟನಂತರ ಜೋಕಪ್ಪನನ್ನು ತಾವು ತಂದಂತಹ ಬುಟ್ಟಿಯಲ್ಲಿ ಕೂಡಿಸಿ ಹಾಡು ಹೇಳುತ್ತಾರೆ. ನಂತರ ಬಡಿಗೇರರು ಬೆಲ್ಲ, ಬ್ಯಾಳಿ, ಉಪ್ಪು ಹುಣಸೇಹಣ್ಣು, ಜೋಳ, ದಕ್ಷಿಣೆ ಕೊಡುತ್ತಾರೆ. ನಂತರ ಬಾರಿಕರ ಮನೆಗೆ ಬರುತ್ತಾರೆ.

ಬಾರಿಕರ ಮನೆಯಲ್ಲಿ ಅವತ್ತು ಸಿಹಿ ಅಡುಗೆ ಇರುತ್ತದೆ. ಜೋಕಪ್ಪನಿಗೆ ಎಡೆ(ನೈವೇದ್ಯ) ಇಟ್ಟು ಪೂಜೆ ಮಾಡುತ್ತಾರೆ. ಊರಿನ ಪ್ರಮುಖ ದೇವರಾದ ಆಂಜನೇಯ, ಲಕ್ಷ್ಮಿನಾರಾಯಣ ಸ್ವಾಮಿ ದೇವಸ್ಥಾನಕ್ಕೆ ಹೋಗಿ ಜೋಕಪ್ಪನನ್ನ ಆಡಿಸುತ್ತಾರೆ. ಆಂಯಗಾರ ಮನೆಗೆ ಹೋಗುತ್ತಾರೆ.

ಆಂಯಗಾರ ಮನೆ ಎಂದರೆ ಗೌಡ, ಶಾನುಬೋಗ, ತಳವಾರ, ಬಡಿಗೇರ, ಕುಂಬಾರ, ಕ್ಷೌರಿಕರ ಮನೆಗೆ ಹೋಗಿ ಆಡಿ ಬರುತ್ತಾರೆ. ಮರುದಿನದಿಂದ ಊರಿನ ರೈತರ ಮನೆಗೆ ಹೋಗಿ ಆಡುತ್ತಾರೆ. ರೈತರು ಜೋಕಪ್ಪ ಆಡಿಸಲು ಬಂದವರಿಗೆ ದವಸ, ಧಾನ್ಯ, ದಕ್ಷಿಣೆ, ನೀಡುತ್ತಾರೆ. ಹೀಗೆ ೯ ದಿವಸ ಆಡುತ್ತಾರೆ. ಮೊದಲೆಲ್ಲಾ ೭ ದಿವಸ ಆಡುತ್ತಿದ್ದರು, ಊರು ದೊಡ್ಡದಾದ ಮೇಲೆ ಉಳಿದವರ ಮನೆಗಳಿಗೆ ಹೋಗಲು ಆಗುತ್ತಿರಲಿಲ್ಲ, ಊರಿನ ಜನರೆ ತಮ್ಮ ಮನೆಗೆ ಬನ್ನಿ ಎಂದು ಕರೆಯ ತೊಡಗಿದರು. ಆದ್ದರಿಂದ ಜೋಕಪ್ಪನನ್ನು ೭ ದಿವಸಕ್ಕಿಂತ ಮುಂಚೆ ಹುಟ್ಟಿಸಿ ೯ ದಿನಗಳವರೆಗೆ ಆಡಿಸುತ್ತಾರೆ.

ಜೋಕಪ್ಪನನ್ನು ಆಡಿಸುವ ತಂಡಗಳು ಎರಡು ಇವೆ, ಒಂದು ಗುಂಪು ಊರಲ್ಲಿ ಆಡಿಸಿದರೆ ಎರಡನೇ ಗುಂಪು ಸುತ್ತ ಮುತ್ತಲಿನ ಹಳ್ಳಿಗಳಿಗೆ ಹೋಗಿ ಆಡಿಸುತ್ತಾರೆ. ಜೋಕಪ್ಪ ಸಾಯುವುದು

ಹುಣ್ಣಿಮೆ ದಿನದಂದು. ಹುಣ್ಣಿಮೆ ದಿನ ಊರಿನ ಹರಿಜನ ಕೇರಿಗೆ ಒಯ್ಯದು ರಾತ್ರಿ ಹನ್ನೆರೆಡರವರೆಗೆ ಆಡುತ್ತಾರೆ. ಕೇರಿಯ **ಕಟ್ಟಮುಳ್ಳಿ ತಿಂದಪ್ಪನ** ಮನೆಯಲ್ಲಿ ಜೋಕಪ್ಪನು ಸಾಯುವುದು. ಈತನ ಮನೆಗೆ ಹೋಗಿ ಅಲ್ಲಿಯೇ ಜೋಕಪ್ಪನನ್ನು ಆಡಿಸಿ ದಕ್ಷಿಣೆ ಕೊಟ್ಟು ನಂತರ ತಿಂದಪ್ಪನ ಮನೆಯವರು ಬಂದು ಜೋಕಪ್ಪನಿಗೆ ಇರಿಯುತ್ತಾರೆ.

ಈ ತಿಂದಪ್ಪನಮನೆಯಲ್ಲಿಯೇ ಜೋಕಪ್ಪ ಸಾಯುತ್ತಾನೆ. ಇವರು ಕೂಡ ನಾಣಿಕೇರಿಯವರು. ಇವರು ಹೇಳುವಂತೆ ಬಹಳ ಕಾಲದ ಹಿಂದೆ ತಿಂದಪ್ಪನ ವಂಶಸ್ಥರ ಹೆಣ್ಣನ್ನು ಈ ಜೋಕಪ್ಪ ಮುಟ್ಟಲು ಹೋಗಿದ್ದನಂತೆ. ಆಗ ಈ ಮನೆತನದವರು ಜೋಕಪ್ಪನನ್ನು ಚೂರಿಯಿಂದ ಇರಿದರಂತೆ, ಇದು ಹೀಗೆ ನೂರಾರು ವರ್ಷಗಳಿಂದ ಜೋಕಪ್ಪನ ಆಚರಣೆ ಸಂದರ್ಭದಲ್ಲಿ ಈಗ ಇರುವ ತಿಂದಪ್ಪನ ಮನೆಯಲ್ಲಿಯೇ ಜೋಕಪ್ಪ ಸಾಯುವುದು. ಸಾಯುವ ದಿನ ಮಾದರ ಮನೆಗೆ ಹೋಗಿ ಅವರು ಚಿಬಲಿ ಕೊಡುತ್ತಾರೆ. ಅದನ್ನು ತೆಗೆದುಕೊಂಡು ಕಾಳೆಯರ ಮನೆಗೆ ಹೋಗುತ್ತಾರೆ. ಕಾಳೆಯರು ಪೂಜೆ ಮಾಡಿದ ನಂತರ ಅಗಸರ ಮನೆಗೆ ಹೋಗಿ ಆಡುತ್ತಾರೆ. ಅವರು ಜೋಕಪ್ಪನನ್ನು ಸಾಯಿಸಿದ ನಂತರ ಮುಚ್ಚಲು ಬಟ್ಟೆ ಕೊಡುತ್ತಾರೆ. ಜೊತೆಗೆ ಜೋಳ ಇತರ ಧಾನ್ಯಕೊಡುತ್ತಾರೆ ನಂತರ ಕೇರಿಗೆ ಹೋಗುತ್ತಾರೆ.

ಎರಡನೇ ಹಳ್ಳಿಗೆ ಹೋಗುವ ಜೋಕಪ್ಪ ಸಮೀಪದ ಲೋಕಪ್ಪನ ಹೊಲದ ಕಾಳೆಯರ ಮನೆಯಲ್ಲಿ ಸಾಯುತ್ತಾನೆ. ಈ ಲೋಕಪ್ಪನ ಹೊಲದಲ್ಲಿ ವಾಸವಾಗಿರುವವರು ನಾಣಿಕೇರಿಯಿಂದ ವಲಸೆ ಬಂದವರು. ಕಾಳೆಯರ ಮನೆಯಲ್ಲಿ ಸತ್ತ ಜೋಕಪ್ಪನನ್ನು, ಬಾರಿಕರ ಮನೆಗೆ ತೆಗೆದುಕೊಂಡು ಬರುತ್ತಾರೆ. ಎರಡು ಜೋಕಪ್ಪನನ್ನು ಮನೆಯ ಹೊರಗೆ ಕುಂದಿರಿಸಿರುತ್ತಾರೆ. ಜೊತೆಗೆ ಹೋದವರು ಕೂಡ ಮನೆ ಒಳಗೆ ಹೋಗುವುದಿಲ್ಲ.

ಅಂದು ರಾತ್ರಿ ಜೋಕಪ್ಪನಿಗೆ ಕುರಿ ಬ್ಯಾಟಿ (ಬಲಿ) ಮಾಡುತ್ತಾರೆ. ಮಾಂಸದಿಂದ ಅಡುಗೆ ಮಾಡಿ ಜೊತೆಗೆ ಅನ್ನ ಶುಂಠಿ ಮುಂತಾದವುಗಳನ್ನು ಸೇರಿಸಿ ಎಡೆ (ನೈವೇದ್ಯ) ಇಡುತ್ತಾರೆ. ನಂತರ ಪೂಜೆ ಮಾಡಿ ಆ ಜೋಕಪ್ಪನನ್ನು ಬುಟ್ಟಿಯಲ್ಲಿ ಕೂಡಿಸಿಕೊಂಡು ಆ ಮನೆಯ ಪುರುಷರು ಊರಿನ ಮುಂದೆ ಇರುವ ಹಳ್ಳದಲ್ಲಿ ಆಗಸರ ಬಂಡಿ ಕೆಳಗೆ ಜೋಕಪ್ಪನನ್ನು ಬಿಟ್ಟು ಅಲ್ಲಿಯೇ ಪೂಜೆ ಮಾಡಿ, ಹಿಂತಿರುಗಿ ನೋಡದ ಹಾಗೆ ಬರುತ್ತಾರೆ. ಮರುದಿನ ಜೋಕಪ್ಪನನ್ನು ಆಡಿಸಿದ ೧೨ ಮಂದಿಯನ್ನು ಮತ್ತು ಇತರರನ್ನು ಕರೆಯಿಸಿ ಅವರಿಗೆ ಬ್ಯಾಟಿ ಮಾಡಿದ ಊಟ ಹಾಕಿಸುತ್ತಾರೆ.

ಜೋಕಪ್ಪ ಸತ್ತ ಮೂರು ದಿನದ ಕಾರ್ಯವನ್ನು ಅಗಸರು ಮಾಡುತ್ತಾರೆ. ಇವರು ಒಂಬತ್ತು ದಿನಗಳವರೆಗೆ ಬಟ್ಟೆ ಒಗೆಯುವುದಿಲ್ಲ. ಇವರು ಹೇಳುವ ಪ್ರಕಾರ ಜೋಕಪ್ಪನು ಅಗಸರ ಮಗನಾಗಿದ್ದನು.

**ನಂಬಿಕೆ ಹರಕೆಗಳು :**

ಜೋಕಪ್ಪನಿಗೆ ರೈತರು, ವ್ಯಾಪರಸ್ಥರು, ಮಹಿಳೆಯರು ಮಕ್ಕಳು ನಡೆದುಕೊಳ್ಳುತ್ತಾರೆ. ರೈತರು ತಮ್ಮ ಬೆಳೆ ಚೆನ್ನಾಗಿ ಬರಲೆಂದು ಬೇಡಿಕೊಳ್ಳುತ್ತಾರೆ. ವ್ಯಾಪಾರಸ್ಥರು ವ್ಯಾಪಾರದಲ್ಲಿ ಅಭಿವೃದ್ಧಿ ಹೊಂದಿದ್ದರೆ ಜೋಕಪ್ಪನಿಗೆ ಆಭರಣ ಮಾಡಿಸಿಕೊಡುತ್ತಾರೆ. ಮಹಿಳೆಯರು ತಮಗೆ ಮಕ್ಕಳು ಆದರೆ– ಜೋಕಪ್ಪನಿಗೆ ಬೆಳ್ಳಿಯ ಮುಖ, ಛತ್ರಿ, ಮೀಸೆ, ಕಣ್ಣು, ಹಣೆಕಟ್ಟು, ವಿಭೂತಿ ಕಟ್ಟು ಮಾಡಿಸಿಕೊಡುತ್ತಾರೆ.

**ಇನ್ನೂ ಕೆಲವರ ನಂಬಿಕೆಯಲ್ಲಿ :**

ತಾವು ಮನಸ್ಸಿನಲ್ಲಿ ಅಂದುಕೊಂಡ ಕೆಲಸ ಆಗುವುದಿದ್ದರೆ. ಜೋಕಪ್ಪನಿರುವ ಬುಟ್ಟಿಯನ್ನು ಎತ್ತಲು ಹೋಗುತ್ತಾರೆ. ಕೆಲಸ ಆಗುವುದಾದರೆ ಮೇಲಕ್ಕೆ ಏಳುತ್ತದೆ. ಇಲ್ಲದಿದ್ದರೆ ಏಳುವುದಿಲ್ಲ. ಜೋಕಪ್ಪನ ಅಂಗಾರವನ್ನು ತೆಗೆದುಕೊಂಡು ರೈತರು ಆತ ಸತ್ತ ಮರುದಿನ ಅಂಗಾರವನ್ನು ಅನ್ನದಲ್ಲಿ ಕಲಸಿ ಅಂಬಲಿ ಮಾಡಿ ಹೊಲಗಳಿಗೆ ಚರಗ ಚೆಲ್ಲುತ್ತಾರೆ. ಹೀಗೆ ಚೆಲ್ಲಿದರೆ ಬೆಳೆಯು ಹುಲುಸಾಗಿ ಬೆಳೆಯುತ್ತದೆ ಎಂಬುದು ರೈತರ ನಂಬಿಕೆ.

ಇಲ್ಲಿ ರೈತರು ಪ್ರತಿ ವರ್ಷ ಜೋಕಪ್ಪನ ಬುಟ್ಟಿಯನ್ನು ಸಲೀಸಾಗಿ ಎತ್ತಿದರೆ ಮಳೆ ಚೆನ್ನಾಗಿ ಆಗುತ್ತದೆ, ಬುಟ್ಟಿಯು ಭಾರವಾಗಿ ಎತ್ತಲು ಬಾರದ ಹಾಗೆ ಆದರೆ ಮಳೆ ಚೆನ್ನಾಗಿ ಆಗುವುದಿಲ್ಲ, ಕೆರೆಗೆ ನೀರು ಬರುವುದಿಲ್ಲ ಎಂಬ ನಂಬಿಕೆ ಇದೆ.

**೪.೨.೨. ಖೇಲ್‌ದಮ್ಮನ ಆಚರಣೆ :**

ಈ ಆಚರಣೆ ೩ ವರ್ಷಕ್ಕೊಮ್ಮೆ ನಡೆಯುತ್ತದೆ. ಇದನ್ನು ನಡೆಸುವವರು ಬಾರಿಕರ ಮನೆಯವರು. ಬಾದಾಮಿ ಅಮವಾಸ್ಯೆ ಆಗಿ ೫ ದಿವಸಕ್ಕೆ ನಡೆಯುತ್ತದೆ. ೧೫ ಡೊಳ್ಳು ಬಾರಿಸುವವರು ಈ ಬಾರಿಕರ ಮನೆಗೆ ಹೋಗುತ್ತಾರೆ. ಅವರಿಗೆ ಸಿಹಿ ಅಡುಗೆ ಮಾಡುತ್ತಾರೆ.

ಈ ಬಾರಿಕರ ಮನೆಯಲ್ಲಿನ ಕಲಶವನ್ನು ಮೆರವಣಿಗೆ ಮೂಲಕ ತೆಗೆದುಕೊಂಡು ಊರಿನ ನಾಣಿಕೇರಪ್ಪ (ಆಂಜನೇಯ) ದೇವಸ್ಥಾನಕ್ಕೆ ಹೋಗುತ್ತಾರೆ. ಅಲ್ಲಿಂದ ತಳವಾರನ ಮನೆಗೆ ಹೋಗುತ್ತಾರೆ. ತಳವಾರನು ಒಂದು ಕೊಡ ಮತ್ತು ಒಂದು ತಂಬಿಗೆ ನೀರನ್ನು ತರುತ್ತಾನೆ. ಊರಿನಲ್ಲಿ ಇರುವ ೫ ಗುಡ್ಡೆಕಲ್ಲಿಗೆ ಹೋಗಿ ತಳವಾರರು ಮತ್ತು ಬಾರಿಕರು ಪೂಜೆ ಸಲ್ಲಿಸುತ್ತಾರೆ. ನಂತರ ಊರಿನಲ್ಲಿ ಇರುವ ದೇವರುಗಳಿಗೆಲ್ಲಾ ಪೂಜೆ ಸಲ್ಲಿಸುತ್ತಾರೆ. ನಂತರ ಕುಂಬಾರ ಮನೆಗೆ ಹೋಗಿ ಕುಂಬಾರನು ಒಂದು ಖೇಲ್ (ಕುಡಿಕೆ)ನ್ನು ಮಾಡಿರುತ್ತಾರೆ. ಖೇಲ್‌ನ್ನು ಪೂಜೆ ಮಾಡಿ ತೆಗೆದುಕೊಂಡು ನಾಣಿಕೇರಪ್ಪ ದೇವಸ್ಥಾನಕ್ಕೆ ಬರುತ್ತಾರೆ. ದೇವಸ್ಥಾನದಲ್ಲಿ ಒಂದು ಗದ್ದುಗೆ ಮಾಡಿ ಅದರಲ್ಲಿ ಕಂಬಳಿ ಹಾಕಿ ಅದರ ಮೇಲೆ ಅಕ್ಕಿ ಅಡಿಕೆ ಹಾಕಿರುತ್ತಾರೆ. ಅದರ ಮೇಲೆ ಖೇಲ್‌ದಮ್ಮನ ಕೂಡಿಸುತ್ತಾರೆ. ಆ ಖೇಲ್‌ಗೆ ಕುಬಸ, ಮೂಗುಬಟ್ಟು, ಹೂವಿನಿಂದ ಅಲಂಕಾರ ಮಾಡಿ ಪೂಜೆ

ಮಾಡುತ್ತಾರೆ ಅದನ್ನು ಬಾರಿಕರು ಹೊತ್ತುಕೊಂಡು ಊರಿನ ಗ್ರಾಮ ಪಂಚಾಯಿ ಹತ್ತಿರ ಇರುವ ಗುಡ್ಡೆಕಲ್ಲಿನ ಹತ್ತಿರ ಬಂದು ಗುಡ್ಡೆಕಲ್ಲಿನ ಹತ್ತಿರ ಒಂದು ಚಪ್ಪರದ ಮಂಟಪ ಮಾಡಿ ಅದರಲ್ಲಿ ಈ ಖೇಲ್‌ದಮ್ಮನ್ನು ಕೂಡಿಸುತ್ತಾರೆ. ಊರಿನ ಜನರೆಲ್ಲರೂ ಅಂದು ಹೋಳಿಗೆ ಮಾಡಿ, ಹೋಳಿಗೆಯನ್ನು ಖೇಲ್‌ದಮ್ಮನಿಗೆ ಎಡೆ (ನೈವೇದ್ಯ) ಕೊಡುತ್ತಾರೆ.

ಹೀಗೆ ಸಂಜೆ ೫ ಗಂಟೆವರೆಗೂ ಕೂಡಿಸಿರುತ್ತಾರೆ. ಈ ಖೇಲ್‌ದಮ್ಮನನ್ನು ಮೆರವಣಿಗೆ ಮೂಲಕ ಸಮೀಪದ ಡಣಾಪುರದ ಹತ್ತಿರ ಬಿಟ್ಟು ಬರುತ್ತಾರೆ. ಇದರ ಜೊತೆಗೆ ಖೇಲ್‌ದಮ್ಮನಿಗೆ ಎಡೆ ನೀಡಿದ ಹೋಳಿಗೆಯನ್ನೆಲ್ಲಾ ಚೀಲದಲ್ಲಿ ತುಂಬಿ ಅದನ್ನು ತೆಗೆದುಕೊಂಡು ಹೋಗಿ ಅಲ್ಲಿಯೇ ಬಿಟ್ಟು ಬರುತ್ತಾರೆ.

ಈ ಆಚರಣೆ ನಡೆಯುವುದು ಮಂಗಳವಾರ ದಿನದಂದು ಹೀಗೆ ಡಣಾಪುರದ ಸಮೀಪ ಬಿಟ್ಟು ಬಂದ ಖೇಲ್‌ದಮ್ಮನನ್ನು ಡಾಣಪುರದವರು ಮುಂದಿನ ಊರಿನ ಹತ್ತಿರ ಹೋಗಿ ಬಿಟ್ಟು ಬರುತ್ತಾರೆ. ಆ ಊರಿನವರು ಮುಂದಿನ ಊರಿಗೆ ಹೀಗೆ ಕೊನೆಯಲ್ಲಿ ಖೇಲ್‌ದಮ್ಮನನ್ನು ನದಿಗೆ ಹೋಗಿ ಬಿಟ್ಟು ಬರುತ್ತಾರೆ. ಈ ಆಚರಣೆ ಹಿಂದೆ ನಾಣಿಕೇರಿಯಲ್ಲಿ ಮಾಡುತ್ತಿದ್ದರು. ಊರು ಮುಳುಗಡೆಯಾದ ನಂತರ ಮರಿಯಮ್ಮನಹಳ್ಳಿಯಲ್ಲಿ ಇಂದಿಗೂ ಆಚರಿಸಿಕೊಂಡು ಬಂದಿದ್ದಾರೆ.

### ೪.೨.೩. ರಥದಮ್ಮ :

ರಥದಮ್ಮ ಆಚರಣೆ ಖೇಲ್‌ದಮ್ಮ ಆಚರಣೆಯಾಗಿ ಮರು ವರ್ಷ ನಡೆಯುತ್ತದೆ. ಇದು ಕೂಡ ಬಾದಾಮಿ ಅಮಾವಾಸ್ಯೆ ಆಗಿ ಐದು ದಿನಕ್ಕೆ ನಡೆಯುತ್ತದೆ. ರಥದಮ್ಮ ಆಚರಣೆಯ ಪೂಜಾರಾರು ಬಾರಿಕರು. ಇವರೆ ಆಚರಣೆಯನ್ನು ಬಹಳ ಹಿಂದಿನಿಂದಲೂ ಆಚರಿಸಿಕೊಂಡು ಬಂದಿದ್ದಾರೆ. ಮೊದಲು ಬ್ರಾಹ್ಮಣರ ಹತ್ತಿರ ಹೋಗಿ ಪಂಚಾಂಗ ಕೇಳಿಸಿ ಯಾವ ದಿನ ಶುಭ ದಿನ ಎಂದು ಕೇಳಿದಾಗ ಅವರು ಹೇಳಿದ ಮಂಗಳವಾರದಂದು ಈ ಹಬ್ಬ ಮಾಡುತ್ತಾರೆ.

ಈ ಬಾರಿಕರು ಮತ್ತು ಹರಿಜನರು ಸೇರಿ ಆಲದ ಮರ ಕೊಂಬೆಗಳನ್ನು ಕಡಿದುಕೊಂಡು ಬಂದು ಆ ಕೊಂಬೆಗಳನ್ನು ತೆಗೆದುಕೊಂಡು ಹೋಗಿ ಬಡಿಗೇರರಲ್ಲಿ ರಥದಮ್ಮನ ಗೊಂಬೆ ಮಾಡಿಸುತ್ತಾರೆ. ರಥದಮ್ಮನನ್ನು ಊರಿನ ಗ್ರಾಮದೇವತೆಯಾದ ದುರುಗಮ್ಮನ ಗುಡಿಯಲ್ಲಿ ರೈತರೆಲ್ಲಾ ಸೇರಿ ಮಾಡಿಸುತ್ತಾರೆ. ಮಂಗಳವಾರ ಬೆಳಗಿನ ಜಾವ ೩ ಗಂಟೆಗೆ ರಥದಮ್ಮನಿಗೆ ಒಂದು ಕುರಿ ಬಲಿಯನ್ನು ನೀಡಿ ನಂತರ ಮೆರವಣಿಗೆ ಮೂಲಕ ಊರ ಗ್ರಾಮ ಪಂಚಾಯಿತಿ ಹತ್ತಿರ ಇರುವ ಗುಡೆಕಲ್ಲಿನ ಹತ್ತಿರ ಚಪ್ಪರದ ಮಂಟಪ ಹಾಕಿ ಅಲ್ಲಿ ರಥದಮ್ಮನ್ನು ಕೂಡಿಸುತ್ತಾರೆ. ರಥದಮ್ಮ ಹೋಗುವಾಗಲ್ಲೆಲ್ಲಾ ಊರಲ್ಲಿ ಇರುವ ಎಲ್ಲಾ ಬಂಡಿಗಳ ಚಕ್ರವನ್ನು ಬಿಚ್ಚಿ ಇಟ್ಟಿರುತ್ತಾರೆ. ಮೆರವಣಿಗೆ ಹನುಮಂತ ದೇವರ ಗುಡಿಯ ಹತ್ತಿರ ಬಂದಾಗ ಹನುಮಂತ ದೇವರಿಗೆ ಪೂಜೆ ಮಾಡಿ ನಂತರ ರಥದಮ್ಮನನ್ನು ಎಳೆದುಕೊಂಡು ಹೋಗುತ್ತಾರೆ. ಊರಿನ ಜನರೆಲ್ಲರೂ, ಹೋಳಿಗೆ, ಕಡುಬು ಮುಂತಾದ ಸಿಹಿ ಅಡುಗೆ ಮಾಡಿ ಒಂದು ಮರದಲ್ಲಿ ಹಾಕಿಕೊಂಡು ಬಂದು ರಥದಮ್ಮನಿಗೆ

ಎಡೆ (ನೈವೇದ್ಯ) ಇಡುತ್ತಾರೆ. ಸಂಜೆ ಐದುಗಂಟೆವರೆಗೆ ಊರಿನ ಜನರೆಲ್ಲರೂ ಪೂಜೆ ಮಾಡಿಸಿಕೊಳ್ಳುತ್ತಾರೆ. ನಂತರ ರಥದಮ್ಮ ಮತ್ತು ಆಕೆಗೆ ಇಟ್ಟಂತಹ ಎಡೆಯ ಜೊತೆಗೆ ತೆಗೆದುಕೊಂಡು ಹೋಗಿ ಊರ ಹೊರಗೆ ಬಿಟ್ಟು ಬರುತ್ತಾರೆ.

ಹಿಂದೆ ಈ ಆಚರಣೆ ಮಾಡುವಾಗ ಊರಿಗೆಲ್ಲಾ ಬೇಲಿ ಹಾಕುತ್ತಿದ್ದರು. ಆಗ ಊರ ಒಳಗೆ – ಹೊರಗೆ ಯಾರು ಬರುವುದು ಹೋಗುವುದು ನಿಷೇಧ್ಧವಾಗಿತ್ತು. ಈಗ ಊರು ಬೆಳೆದ ನಂತರ ಬೇಲಿ ಹಾಕುವುದನ್ನು ಬಿಟ್ಟಿದ್ದಾರೆ. ಈ ಆಚರಣೆ ಮಾಡಿದರೆ ಮಳೆ ಚೆನ್ನಾಗಿ ಬರುತ್ತದೆ. ಊರಿನ ದನಕರುಗಳಿಗೆ ಯಾವುದೇ ರೋಗಗಳು ಬರುವುದಿಲ್ಲ.

**೪.೨.೪. ಚಂಗಳೀಕಮ್ಮ ಮತ್ತು ಕ್ಯಾತಪ್ಪ :**

ಚಂಗಳೀಕಮ್ಮ ಆಚರಣೆಯನ್ನು ಬಾರಿಕರ ಮನೆತನದವರು ಮಾಡುತ್ತಾರೆ. ನಾಗರ ಪಂಚಮಿಯಲ್ಲಿ ಮಾಡುತ್ತಾರೆ. ಹಾಲು ಹಾಕಿ ಮೂರು ದಿನಕ್ಕೆ ಚಂಗಳೀಕಮ್ಮ ಆಚರಣೆ ನಡೆಯತ್ತದೆ. ಬಾರಿಕರ ಮನೆಯಿಂದ ಮೆರವಣಿಗೆ ಮೂಲಕ ಬಸ್ ಸ್ಟಾಂಡ್‌ನಲ್ಲಿ ಕೂಡಿಸುತ್ತಾರೆ. ಅಲ್ಲಿ ಡೊಳ್ಳು ಕುಣಿತ ಮುಂತಾದಗಳೊಂದಿಗೆ ಪೂಜೆ ಮಾಡಿ ಸಂಜೆ ವಡ್ನಾಳ್‌ನಲ್ಲಿ ಹೋಗಿ ಬಿಟ್ಟು ಬರುತ್ತಾರೆ. ಕ್ಯಾತಪ್ಪ ಆಚರಣೆ ಇದರ ಜೊತೆಯಲ್ಲಿಯೇ ಮಾಡುತ್ತಾರೆ.

**೪.೨.೫. ಗುಳೇದ ಲಕ್ಕಮ್ಮ :**

ಗುಳೇದ ಲಕ್ಕಮ್ಮ ಈ ದೇವತೆ ನಾಣಿಕೇರಿಯ ಗ್ರಾಮ ದೇವತೆಯಾಗಿದ್ದು, ನಾಣಿಕೇರಿ ಮುಳುಗಡೆಯಾದ ನಂತರ ಈ ಗ್ರಾಮ ದೇವತೆಯನ್ನು ಈಗಿನ ಲೋಕಪ್ಪನ ಹೊಲದಲ್ಲಿ ನೆಲೆಸಿರುವ ಉಳಿದ ನಾಣಿಕೇರಿಯ ಜನರು ತೆಗೆದುಕೊಂಡು ಹೋಗಿ ದೇವಸ್ಥಾನ ಕಟ್ಟಿಸಿ ಅಲ್ಲಿ ಪ್ರತಿಷ್ಠಾಪನೆ ಮಾಡಿದರು. ಈ ದೇವಿಯ ಜಾತ್ರೆಯು ಮೊದಲು ೯ ವರ್ಷಗಳಿಗೊಮ್ಮೆ ನಡೆಯುತ್ತಿತ್ತು. ಈಗ ೫ ವರ್ಷಗಳಿಗೊಮ್ಮೆ ನಡೆಯುತ್ತದೆ.

**ಜಾತ್ರೆ ಆಚರಣೆ :**

ಕುಂಬಾರನ ಮನೆಯಿಂದ ೫ ಗಟ್ಟಿ ಗಡಿಗೆಯನ್ನು ತಂದು ಊರಿನ ಬಾವಿಯಲ್ಲಿ ಗಂಗಮ್ಮನ ಪೂಜೆ ಮಾಡಿ ಆ ಐದು ಗಟ್ಟಿ ಗಡಿಗೆಯನ್ನು ಬಾರಿಕರು, ಗೌಡರು, ಶಾನುಭೋಗ, ತಳವಾರ, ಹರಿಜನರ ಮನೆಯಲ್ಲಿ ಕೂಡಿಸುತ್ತಾರೆ. ಆ ಗಡಿಗೆಯಲ್ಲಿ ಒಂದು ಹಿಡಿ ಜೋಳ ಹಾಕಿರುತ್ತಾರೆ. ಈ ಗಡಿಗೆಯನ್ನು ೯ ದಿವಸದವರೆಗೆ ಪೂಜೆ ಮಾಡುತ್ತಾರೆ. ಗಡಿಗಿಯ ಮುಂದೆ ೯ ದಿನಗಳವರೆಗೆ ದೀಪವನ್ನು ಆರದಂತೆ ಹಚ್ಚಿರುತ್ತಾರೆ. ದಿನಾಲು ಮೂರುಹೊತ್ತು ಪೂಜೆ ಮಾಡುತ್ತಾರೆ. ೯ ದಿವಸ ಆದ ನಂತರ ಮೆರವಣಿಗೆ ಮೂಲಕ ಆ ೫ ಗಟ್ಟಿ ಗಡಿಗೆಯನ್ನು ತೆಗೆದುಕೊಂಡು ಗುಳೇದ ಲಕ್ಕಮ್ಮನ ದೇವಸ್ಥಾನದಲ್ಲಿ ಇಟ್ಟು ಪೂಜೆ ಸಲ್ಲಿಸಿದ ನಂತರ ಈ ಗಟ್ಟಿ ಗಡಿಗೆಯನ್ನು ದೇವಸ್ಥಾನದಿಂದ ದೂರ ಇಡುತ್ತಾರೆ. ದೇವರನ್ನು ಎಬ್ಬಿಸುವಾಗ ಗುಡಿ ಪೂಜಾರಿಗೆ ದೇವಿ ಬರುತ್ತಾಳೆ. ಆಗ ಒಂದು

ಕುರಿಯನ್ನು ಬಲಿ ಕೂಡುತ್ತಾರೆ. ಬಲಿಯಾದ ನಂತರ ದೇವಿಯ ಮೆರವಣಿಗೆ ಹೋಗುತ್ತದೆ. ಊರಿನ ಪ್ರತಿ ಓಣಿ ರಸ್ತೆಯಲ್ಲೆಲ್ಲ ಮೈಮೇಲೆ ದೇವರು ಬಂದು ಪೂಜಾರಿಯು ಕುಣಿಯುತ್ತಾನೆ ಇದು ಸಂಜೆವರೆಗೆ ನಡೆಯುತ್ತದೆ. ಊರಿನ ಚೌಡಿಕೆಮನೆ ಹತ್ತಿರ ಬಂದು ದೇವಿ ಹೊತ್ತ ಪಲ್ಲಕ್ಕಿಯಲ್ಲಿ ಪೂಜಾರಿಯು ಕುಳಿತು ಕೊಳ್ಳುತ್ತಾರೆ. ಆಗ ಪಟ್ಟದ ಕೋಣವನ್ನು ಬಲಿ ಕೊಡುತ್ತಾರೆ. ಬಲಿ ಕೊಟ್ಟಂತ ಕೋಣದ ಮಾಂಸವನ್ನು ಹರಿಜನರು ತೆಗೆದುಕೊಂಡು ಹೋಗುತ್ತಾರೆ.

ಜೋಗತಿಯರನ್ನು ಕರೆಸಿ ಲಕ್ಕಮ್ಮನಿಗೆ ಪೂಜೆ ಮಾಡಿಸುತ್ತಾರೆ. ಊರಿನ ಜನರು ಪರ ಊರಿನವರು ಬಂದು ಕಾಯಿ ಕರ್ಪೂರ, ಹೂ, ಹಣ್ಣು ಮಾಡಿಸಿಕೊಂಡು ಹೋಗುತ್ತಾರೆ. ಇದ್ದ ಊರಿನವರು ಅಂದು ಬ್ಯಾಟಿ ಮಾಡುತ್ತಾರೆ. ಅವತ್ತಿನ ದಿನ ಒಂದಕ್ಕೆ ಸುಮಾರು ೩೦೦ ಕುರಿ ಬಲಿ ನೀಡಲಾಗುತ್ತದೆ.

ಚಾವಡಿ ಮನೆಯಲ್ಲಿ ಕೂತ ಲಕ್ಕಮ್ಮನನ್ನು ಪೂಜೆ ಮಾಡಿ ಊರಿನಿಂದ ಸುಮಾರು ೫ ಕಿ.ಮಿ. ದೂರದಲ್ಲಿ ಒಂದು ಮನೆ ಮಾಡಿರುತ್ತಾರೆ. ಅಲ್ಲಿಗೆ ಹೋಗಿ ಲಕ್ಕಮ್ಮನನ್ನು ಬಿಟ್ಟು ಬರುತ್ತಾರೆ. ಆ ಮನೆಯ ಮುಂದೆ ಬಲಿಕೊಟ್ಟಂತಹ ಕೋಣದ ತಲೆಯನ್ನು ಹುದುಗಿಸಿ ಇಟ್ಟಿರುತ್ತಾರೆ. ಈ ಜಾತ್ರೆ ಆಗಿ ೯ ದಿವಸಕ್ಕೆ ಗುಳೇದಲಕ್ಕಮ್ಮನನ್ನು ಹೊಸದಾಗಿ ದೇವಸ್ಥಾನದಲ್ಲಿ ಕೂಡಿಸಿ ಇಡುತ್ತಾರೆ.

ಮೊದಲೆಲ್ಲಾ ಊರು ಬಿಟ್ಟು ಗುಳೇದೇವಿ ಕರೆದುಕೊಂಡು ಹೋಗಿ ಅಲ್ಲಿಯೇ ಜಾತ್ರೆ ಮಾಡಿ ಬರುತ್ತಿದ್ದರು. ಈಗ ಊರಲ್ಲಿಯೇ ಜಾತ್ರೆ ಮಾಡುತ್ತಾರೆ. ಅಡಿಗೆ ಒಂದನ್ನು ಊರ ಹೊರಗೆ ಮಾಡಿಕೊಂಡು ಬರುತ್ತಾರೆ.

೯ ದಿವಸಕ್ಕೆ ದೇವಿಯನ್ನು ಕೂಡಿಸಿದ ನಂತರ ಪಟ್ಟದ ಕೋಣವನ್ನು ಬಿಡುತ್ತಾರೆ. ಈ ಕೋಣ ಮುಂದಿನ ೫ ವರ್ಷದವರಗೆ ಅದನ್ನು ಸಾಕಿಕೊಂಡು ಬಂದು ಬರುವ ಜಾತ್ರೆಯಲ್ಲಿ ಬಲಿಕೊಡುತ್ತಾರೆ.

### ೪.೨.೬. ಗೂಳೆ ಹೋಗುವುದು :

ಮೂಲ ಮರಿಯಮ್ಮನಹಳ್ಳಿ ಜನರು ನಾಣಿಕೇರಿ ಜನರು ಇಲ್ಲಿಗೆ ಬರುವುದಕ್ಕಿಂತ ಮುಂಚೆ ಒಂದು ದಿನದ ಮಟ್ಟಿಗೆ ಗೂಳೆ ಹೋಗುತ್ತಿದ್ದರು. ಅಂದರೆ ಇಡೀ ಊರೇ ಖಾಲಿಯಾಗುತಿತ್ತು.

ಗೂಳೆಹೋಗಲು ಕಾರಣ ತಮ್ಮ ಎತ್ತು ದನ, ಕರುಗಳಿಗೆ 'ಕಾಲುಬಾಯಿ' ಎಂಬ ರೋಗ ಬಂದಾಗ ಹೋಗುತ್ತಿದ್ದರು. ಆಗ ಮರಿಯಮ್ಮನಹಳ್ಳಿಯು ೩೦ ಮನೆಗಳಿರುವ ಗ್ರಾಮವಾಗಿತ್ತು.

ಗೂಳೆಹೋಗುವ ದಿನ, ರಾತ್ರಿಯೆಲ್ಲಾ ಅಡಿಗೆ ಮಾಡಿ, ಊರಿಗೆ ಬೇಲಿ ಹಾಕಿ ಸಮೀಪದ ವಡ್ಡಾನ್‌ಗೆ ಹೋಗಿ ೫ ಗಂಟೆಗೆ ತಂಗುತ್ತಿದ್ದರು. ಊರಿಗೆ ಬೇಲಿ ಹಾಕಿ ಅಗಸಿಬಾಗಿಲು ಹಾಕಿ ಊರನ್ನು ಕಾಯಲು ತಳವಾರ ಇರುತ್ತಿದ್ದನ್ನು. ಆತನ ಕೈಯಲ್ಲಿ ಗಂಡು ಕೊಡ್ಲಿ ಮತ್ತು ಒಂದು ಕೋವಿ ಇರುತಿತ್ತು. ಊರಿಗೆ ಯಾರಿಗೂ ಪ್ರವೇಶವಿರಲಿಲ್ಲ.

ಮನೆಯವರು ಎಲ್ಲಾ ಎತ್ತು, ದನ, ಕರು, ಕುರಿ ಬೆಕ್ಕು, ಕೋಳಿ, ಸಹಿತವಾಗಿ ಪ್ರತಿಯೊಬ್ಬರು ಊರು ಬಿಡುತ್ತಿದ್ದರು. ವಡ್ನಾಳ್‌ನಲ್ಲಿ ಎಲ್ಲರೂ ತಂಗಿದ ನಂತರ ಅಲ್ಲಿ ಚರಗ ಚೆಲ್ಲಿ ಪೂಜೆ ಮಾಡುತ್ತಿದ್ದರು. ಊರು ಕಾಯುವ ತಳವಾರನಿಗೆ ಅಲ್ಲಿಂದಲೇ ಬುತ್ತಿ ತೆಗೆದುಕೊಂಡು ಬಂದು ಕೊಡುತ್ತಿದ್ದರು.

ಸಂಜೆ ೫ಗಂಟೆ ಸುಮಾರಿಗೆ ಊರಿಗೆ ಹಿಂತಿರುಗಿ ಊರಿನ ಆಗಸಿ ಬಾಗಲು ತೆಗಸಿ ಪೂಜೆ ಮಾಡಿ ಕುರಿಯನ್ನು ಬಲಿ ಕೊಟ್ಟು ಊರ ಒಳಗಡೆ ಹೋಗುತ್ತಿದ್ದರು.

**೪.೨.೭. ಗರತಿ ದೇವರು :**

ದೇವದಾಸಿ ಸಂಪ್ರದಾಯ ಇರುವಂತಹ ಸಮುದಾಯವಾದ ವಾಲ್ಮೀಕಿ ಸಮುದಾಯದಲ್ಲಿ ಗರತಿ ದೇವರು ಆಚರಣೆ ಕಂಡು ಬರುತ್ತದೆ. ದೇವದಾಸಿ ಆದ ಮಹಿಳೆಯು ತಾನು ಧರಿಸಿದ ಮುತ್ತನ್ನು ತನ್ನ ಮುಂದಿನ ಪೀಳಿಗೆಗೆ ಹಸ್ತಾಂತರಿಸುವ ಕ್ರಿಯೆ ಆಗಿದೆ. ತನ್ನ ಹಿರಿಯ ಮಗನ ಹೆಂಡತಿ ಮುತ್ತನ್ನು ಕಟ್ಟಿಸುತ್ತಾಳೆ. ಹುಣ್ಣಿಮೆಯ ದಿನದಂದು ತನ್ನ ಮನೆಯ ದೇವರಾದ ಹುಲಿಗೆಮ್ಮ ಅಥವಾ ಎಲ್ಲಮ್ಮ ಅಥವಾ ಉಚ್ಚಂಗಮ್ಮ ದೇವಸ್ಥಾನಕ್ಕೆ ಹೋಗಿ ಗರತಿ ದೇವರ ಆಚರಣೆಯನ್ನು ಮಾಡುತ್ತಾರೆ. ಗಂಗೆಗೆ ಹೋಗಿ ಪೂಜೆ ಮಾಡಿ ಹಿರಿಯ ಜೋಗತಿಯರನ್ನು ಕರೆಸಿ ಅವರಿಂದ ಈ ಮುತ್ತನ್ನು ಕಟ್ಟಿಸುತ್ತಾರೆ. ಅಂದು ತಮ್ಮ ಎಲ್ಲಾ ಬಂದು ಬಳಗದವರನ್ನು ಕರೆದಿರುತ್ತಾರೆ. ಅಲ್ಲಿ ಸಿಹಿ ಅಡಿಗೆಯ ಊಟವನ್ನು ಮಾಡಿ ಮರುದಿನ ಊರಿಗೆ ಬರುತ್ತಾರೆ.

ಮುತ್ತನ್ನು ಕಟ್ಟಿಸಿ ಕೊಂಡಂತೆ ಸೊಸೆಯು ಪ್ರತಿ ಹುಣ್ಣಿಮೆಯ ದಿನದಂದು ಜೋಳಿಗೆಯನ್ನು ಹಿಡಿದು ಐದು ಮನೆಗೆ ಹೋಗಿ ಭಿಕ್ಷೆಯನ್ನು ಬೇಡ ಬೇಕು. ಬೇಡಿ ತಂದಂತಹ ಪದಾರ್ಥವನ್ನು ಅಡಿಗೆ ಮಾಡುತ್ತಾರೆ. ಇದೇ ರೀತಿ ಪ್ರತಿ ಹುಣ್ಣಿಮೆಯ ದಿನ ಭಿಕ್ಷೆಯನ್ನು ಬೇಡುತ್ತಾರೆ.

ಇದನ್ನು ಬೇಡ ಅನ್ನುವವರು ಬ್ರಾಹ್ಮಣರ ಹತ್ತಿರ ಹೋಗಿ ಅವರಲ್ಲಿ ಕೇಳಿಕೊಳ್ಳುತ್ತಾರೆ. ಅವರು ಈ ಆಚರಣೆಯನ್ನು ಬಿಡುವುದರಿಂದ ಆಗುವಂತಹ ಪರಿಣಾಮವನ್ನು ಹೇಳುತ್ತಾರೆ. ಒಳ್ಳೆಯದಾದರೆ ಆಚರಣೆಯನ್ನು ಬಿಡುತ್ತಾರೆ. ಇಲ್ಲಿ ಅಂದರೆ ಆ ಮುತ್ತನ್ನು ಮನೆಯಲ್ಲಿ ಇಟ್ಟು ಪೂಜಿಸುತ್ತಾರೆ. ಇನ್ನು ಕೆಲವರು ಗರತಿ ದೇವರನ್ನು ನದಿ, ಕೆರೆ, ಬಾವಿಯಲ್ಲಿ ಬಿಟ್ಟು ಬರುತ್ತಾರೆ.

ಈಗಲೂ ಇವರಲ್ಲಿ ಈ ಆಚರಣೆ ಬಿಡುವುದರಿಂದ ಆಗುವ ಪರಿಣಾಮಗಳನ್ನು ಹೇಳುತ್ತಾರೆ. ಇದರಿಂದ ಇವರ ಮನೆಗೆ ಅನಿಷ್ಟವಾಗುತ್ತದೆ.

**ಬಸವಿ ಪದ್ದತಿ :**

ಈ ಊರಿನ ಆಂಜನೇಯ ಸ್ವಾಮಿಯ ದೇವಸ್ಥಾನದಲ್ಲಿ ಹಿಂದೆ ಬಸವಿಗೆ ಬಿಡುವ ಪದ್ಧತಿಯು ಜಾರಿಯಲ್ಲಿ ಇತ್ತು. ಈ ಬಸವಿಗೆ ಬಿಡುವ ಸಂಪ್ರದಾಯವು ಈಗ ಆಗೋಚರವಾಗಿದ್ದರೂ, ಹಿಂದೆ ಈ ಪದ್ಧತಿ ಜಾರಿಯಲ್ಲಿ ಇತ್ತು. ಅಂದಿನ ಸಮಾಜಕ್ಕೆ ಈ ಅನಿಷ್ಟಪದ್ಧತಿಯು ಅಂಟಿಕೊಂಡಿರಲು

ಅನೇಕ ಕಾರಣಗಳಿದ್ದವು. ಮೊದಲನೆಯದಾಗಿ ಹಿಂದೂ ಕಾನೂನಿನ ಪ್ರಕಾರ ಹೆಣ್ಣು ಮಕ್ಕಳಿಗೆ ಆಸ್ತಿ ಪಡೆಯುವ ಅಧಿಕಾರವಿರಲಿಲ್ಲ. ಎರಡನೇಯದು ಸಂತಾನ ಇಲ್ಲದೆ ಹೋದವರು ದತ್ತು ಪಡೆಯಬೇಕಾಗಿತ್ತು. ಆದರೆ ೧೮೭೫ರಲ್ಲಿ ಮದ್ರಾಸಿನ ಶ್ರೇಷ್ಠ ನ್ಯಾಯಾಲಯವು ಇಂಡಿಯನ್ ಪೀನಲ್ ಕೋಡ್‌ನ ೩೭೨ನೇ ವಿಧಿಯಂತೆ ಈ ರೀತಿ ಬಸವಿಗೆ ಬಿಡುವ ಪದ್ದತಿಯು ಅಕ್ರಮವೆಂದು ಸಾರಿತು. ಹೀಗಾಗಿ ಅಂದಿನ ಸಾಮಾಜಿಕ ಪದ್ಧತಿಯಂತೆ ಅಣ್ಣ ಅಥವಾ ತಮ್ಮನ ಗಂಡು ಮಕ್ಕಳನ್ನು ದತ್ತು ಪಡೆಯಬೇಕಾಗಿತ್ತು. ಆಸ್ತಿಗೆ ವಾರಸುದಾರಿಕೆಯನ್ನು ಪಡೆಯಲೆಂದೇ ಈ ಪದ್ಧತಿ ಜಾರಿಯಲ್ಲಿ ಇತ್ತೆಂದು ಅಂದಿನ ಆಂಗ್ಲ ಲೇಖಕನಾದ Faweett ಎಂಬುವವನು ತಿಳಿಸಿದ್ದಾನೆ. (Vol II Journal of the Antropological Society in Bombay)

ಈ ಪದ್ಧತಿ ಕೆಳವರ್ಗದಲ್ಲಿ ಮಾತ್ರ ಪ್ರಚಾರದಲ್ಲಿತ್ತು. ಕೇವಲ ಹೆಣ್ಣು ಸಂತಾನವನ್ನು ಹೊಂದಿದವರು ತಮ್ಮ ಒಬ್ಬ ಮಗಳನ್ನು ಬಸವಿಗೆ ಬಿಡುತ್ತಿದ್ದರು. ಆಗ ಅವಳ ಆಸ್ತಿಯ ಹಕ್ಕನ್ನು ಪಡೆಯುತ್ತಿದ್ದಳು. ಅಲ್ಲದೇ ಅವಳು ಅಂದಿನ ಸಾಮಾಜಿಕ ಪದ್ದತಿಯಂತೆ ತಂದೆ ತೀರಿ ಹೋದಲ್ಲಿ ಗಂಡು ಸಂತಾನದಂತೆ ಕರ್ಮಗಳನ್ನು ಮಾಡಬಹುದಾಗಿತ್ತು. ಆ ಬಸವಿ ತನ್ನ ಪಾಲಕರೊಡನೆಯೇ ಇದ್ದು ತನ್ನ ಸಮಾನ ಇಲ್ಲವೇ ಮೇಲು ಜಾತಿಯವರೊಂದಿಗೆ ಸಂತಾನ ಸಂಪರ್ಕವನ್ನು ಹೊಂದ ಬಹುದಾಗಿತ್ತು. ಹೀಗೆ ಜನಿಸಿದ ಸಂತಾನಕ್ಕೆ ಆಸ್ತಿಯ ಹಕ್ಕು ಕೂಡ ಇದ್ದು ಇದಕ್ಕೆ ಬೆಡಗು ಪದ್ಧತಿ ಎಂದು ಹೇಳಲಾಗುತ್ತಿತ್ತು. ಆದರೆ ತೆಲುಗು ಪ್ರಾಂತ್ಯಗಳಲ್ಲಿ "ಇಲ್ಲೊತ್ತಮ್" ಅಂದರೆ ಮನೆ ಅಳಿಯ ಅಥವಾ ಅಳಿಯ ಸಂತಾನ ಪದ್ಧತಿ.

ಬಸವಿಯ ಮಗನು ಆಸ್ತಿಗೆ ಹಕ್ಕುದಾರನಾಗಿದ್ದರೆ ಅವಳ ಮಗಳು ಬಸವಿಯಾಗಿಯೇ ಇರುತ್ತಿದ್ದಳು. ಹೀಗೆ ಬಸವಿಯಾದ ಸ್ತ್ರೀಯನ್ನಾಗಲೀ ಅವಳ ಸಂತಾನವನ್ನಾಗಲೀ ಸಮಾಜ ಹೀನ ದೃಷ್ಟಿಯಿಂದ ಕಾಣುತ್ತಿದ್ದಿಲ್ಲ. ಏಕೆಂದರೆ ಬಸವಿಯನ್ನು ನಿತ್ಯ ಮುತ್ತೈದೆ ಎಂದು ಬಾವಿಸಿ ಮದುವೆ ಮನೆಗಳಲ್ಲಿ ಅತಿಗೌರವದಿಂದ ಕಾಣಲಾಗುತ್ತಿತ್ತು.

ಹಲವರು ತಮಗೆ ಸಂತಾನವಾಗದೇ ಹೋದಾಗ ಹರಕೆಯನ್ನು ಹೊತ್ತು ತಮಗೆ ಹುಟ್ಟಿದ ಹೆಣ್ಣು ಮಗುವನ್ನು ಬಸವಿಗೆ ಬಿಡುವ ಪದ್ದತಿಯೂ ಜಾರಿಯಲ್ಲಿತ್ತು. ಬಸವಿಯರು ದೇವದಾಸಿಯರಲ್ಲ. ದೇವದಾಸಿಯರು ಗುಡಿಗಳಲ್ಲಿ ಸೇವೆಗೆಂದೇ ಮೀಸಲಾದ ಜನರಾಗಿದ್ದರು. ನೃತ್ಯ, ಚಾಮರ, ಛತ್ರ, ಸೇವೆಗೆಂದು ಇರುತ್ತಿದ್ದರು. ನಾವು ಇಂದು ಪಟ್ಟಣಗಳಲ್ಲಿ ನೋಡುವ ಸೂಳೆಗಾರಿಕೆ ಜೀವನ ನಡೆಸುತ್ತಿರಲಿಲ್ಲ.

ಬಸವಿಯಾದವಳು ಊರಲ್ಲಿ ಯಾರನ್ನಾದರೂ ಒಬ್ಬರನ್ನು ಆಶ್ರಯಿಸಿ ಜೀವನ ನಡೆಸುತ್ತಿದ್ದಳು. ಹೀಗಾಗಿ ಅವರಿಗೆ ಆಶ್ರಯ ನೀಡಿದವರು ಅವರ ಸಂಸಾರದ ಹೊಣೆಯನ್ನು ಹೊರಬೇಕಾಗಿತ್ತು.

ಆಂಜನೇಯ ಸ್ವಾಮಿ ದೇವಸ್ಥಾನದಲ್ಲಿ ಬಸವಿಯರಿಗೆ ಮುದ್ರಾಧಾರಣೆ ಮಾಡುತ್ತಿದ್ದರು. ಇದರಲ್ಲಿ ಎರಡು ಪದ್ಧತಿಗಳು ಜಾರಿಯಲ್ಲಿ ಇದ್ದವು ವೈಷ್ಣವ ದೇವಸ್ಥಾನದಲ್ಲಿ ಬಸವಿಗೆ ಬಿಟ್ಟ

ಹೆಣ್ಣಿಗೆ-ಶಂಖ ಹಾಗೂ ಚಕ್ರದ ಮುದ್ರಾಧಾರಣೆಯನ್ನು ಎರಡು ಮುಂಗೈಗಳಿಗೆ ಹಾಕಲಾಗುತಿತ್ತು. ಅಲ್ಲದೆ ಅವಳ ಬಲಗಡೆ ಎದೆಯ ಮೇಲೆ ಮುದ್ರೆಯನ್ನು ಹಾಕಲಾಗುತಿತ್ತು.

ಯಾವುದಾದರು ದೇವತೆಯ ಗುಡಿಯಲ್ಲಿ ಬಸವಿಗೆ ಬಿಟ್ಟರೆ ಆ ಸಂಪ್ರದಾಯಗಳೇ ಬೇರೆಯಾಗಿದ್ದವು. ಬಸವಿ ಪದ್ದತಿಗೆ ಬಿಡುವ ದಿನ, ಆ ಹುಡುಗಿಯ ಜೊತೆ ತಂದೆ-ತಾಯಿ ಬಂಧುಗಳೊಂದಿಗೆ ಗುಡಿಗೆ ಕಲಶದೊಂದಿಗೆ ಮೆರವಣಿಗೆ ಮೂಲಕ ದೇವಸ್ಥಾನಕ್ಕೆ ಕರೆತರುತ್ತಿದ್ದರು. ಆಂಜನೇಯ ದೇವರ ಎದುರಿಗೆ ಒಂದು ಕಂಬಳಿ ಹಾಸಿ ಅದರ ಮೇಲೆ ಹುಡುಗಿಯನ್ನು ಕುಳ್ಳಿರಿಸಿ ಮುದ್ರಾಧಾರಣೆಯನ್ನು ಮಾಡಲಾಗುತಿತ್ತು. ಮುದ್ರಾಧಾರಣೆ ಮಾಡುವವರು ಪೂಜಾರಿಗಳಾಗಿರುತ್ತಿದ್ದರು. ಅವರಿಗೆ ಒಂದೂ ಕಾಲು ರೂಪಾಯಿ ದಕ್ಷಿಣೆ ನೀಡುತ್ತಿದ್ದರು.

ಬಸವಿಯಾದಂತವರು ನಾಟಕ, ಕಲೆ, ಸಂಗೀತಗಳನ್ನು ಮಾಡುತ್ತ ಜೀವನ ಸಾಗಿಸುತ್ತಿದ್ದರು. ದೇವದಾಸಿಯರು ದೇವಸ್ಥಾನದ ಸೇವೆಗೆ ಮೀಸಲಾಗಿದ್ದರು. ಇಂದು ಬಸವಿಗೆ ಬಿಡುವ ಪದ್ಧತಿ ಕಣ್ಮರೆಯಾಗಿದೆ.

### ೪.೨.೮. ಯುಗಾದಿ :

ಯುಗಾದಿ ಹಬ್ಬವು ಹಿಂದೂಗಳಿಗೆ ವರ್ಷದ ಮೊದಲ ದಿನ. ಮೊದಲ ಹಬ್ಬವಾಗಿದೆ. ಹಿಂದೂಗಳ ಪಂಚಾಂಗದಂತೆ ಚೈತ್ರ ಮಾಸದಲ್ಲಿ ಬರುವ ಈ ಹಬ್ಬವನ್ನು ಇಲ್ಲಿನ ಜನರು ಸಂತೋಷ ಸಡಗರ ದಿಂದ ಆಚರಿಸುತ್ತಾರೆ.

ಯುಗಾದಿ ಪಾಡ್ಯದಂದು ಜನರೆಲ್ಲಾ ಸ್ನಾನ ಮಡುವಾಗ ನೀರಿನಲ್ಲಿ ಬೇವಿನ ಹೂ, ಎಲೆ ಹಾಕಿಕೊಂಡು ಸ್ನಾನ ಮಾಡುತ್ತಾರೆ. ದೇವರಿಗೆ ಕೈ ಮುಗಿದು ಹೊಸ ಬಟ್ಟೆಧರಿಸಿ ಸಮೀಪದ ದೇವಸ್ಥಾನಗಳಿಗೆ ಹೋಗಿ ಪೂಜೆ ಮಾಡಿಸಿಕೊಂಡು ಬರುತ್ತಾರೆ ಅಂದು ದೇವರಿಗೆ, ಬೇವು-ಬೆಲ್ಲ, ಹೋಳಿಗೆ ಎಡೆ ನೀಡುತ್ತಾರೆ.

ಬೇವಿಗೆ, ಕಡ್ಲೆಹಿಟ್ಟು, ಬೆಲ್ಲ, ಹುಣಸೇಹಣ್ಣಿನ ಹುಳಿಯನ್ನು, ಒಣದ್ರಾಕ್ಷಿ, ಗಸಗಸೆ, ಒಣಕೊಬ್ಬರಿ, ಬೇವಿನ ಹೂ, ಕಲ್ಲು ಸಕ್ಕರೆ, ಇದನ್ನೆಲ್ಲಾವನ್ನು ಪಾತ್ರೆಯಲ್ಲಿ ಕಲಸಿ ಬೇವನ್ನು ಮಾಡುತ್ತಾರೆ. ಅತಿಥಿಗಳಿಗೆ, ಮನೆಯವರಿಗೆ ನೀಡುತ್ತಾರೆ. ಬೇವು ಕುಡಿಯುವುದರಿಂದ ದೇಹದಲ್ಲಿನ ರೋಗಾಣುಗಳು ನಾಶವಾಗುತ್ತವೆ.

ಲಿಂಗಾಯಿತರು, ವೀರಶೈವರು, ಬ್ರಾಹ್ಮಣರು, ವೈಶ್ಯರ ಮನೆಗಳಲ್ಲಿ ಹೊಸ ಪಂಚಾಂಗ ಇಟ್ಟು ಪೂಜೆಮಾಡಿ ಓದುತ್ತಾರೆ. ಇಲ್ಲಿನ ನಾಯಕ ಸಮುದಾಯದವರು ಯುಗಾದಿಯಲ್ಲಿ ಬೇಟೆಗೆ ಹೋಗುತ್ತಾರೆ. ವಲಸೆ ಬಂದಂತಹ ಜನರಾದ ನಾಯಕರು ಬೇಟೆಗೆ ಹೋಗುವುದಿಲ್ಲ, ಮರಿಯಮ್ಮನಹಳ್ಳಿಯ ಮೂಲ ನಿವಾಸಿಗಳಾದ ನಾಯಕರು ಸಮೀಪದ ಗುಂಡಾ ಅಡವಿಗೆ ಹೋಗಿ ಬೇಟೆ ಆಡಿ ಬರುತ್ತಾರೆ. ನಾಣಿಕೇರಿ, ಹಂಪನ ಕಟ್ಟೆ, ಗೌರಿಪುರ, ಬಸಪುರ, ತಾರಿಹಳ್ಳಿಯ ನಾಯಕ ಸಮುದಾಯದಲ್ಲಿ ಯುಗಾದಿ ಸಂದರ್ಭದಲ್ಲಿ ಬೇಟೆಗೆ ಹೋಗುವ ಪದ್ಧತಿ ಇಲ್ಲ.

ಬೇಟೆಗೆ ಹೋಗಿ ಬಂದ ನಾಯಕರು ಊರಿನಲ್ಲಿ ಮೆರವಣಿಗೆ ಮೂಲಕ ಗ್ರಾಮ ದೇವತೆಯಾದ ದುರ್ಗಮ್ಮ ದೇವಿ ದೇವಸ್ಥಾನಕ್ಕೆ ಹೋಗಿ ಪೂಜೆ ಸಲ್ಲಿಸಿ ಬರುತ್ತಾರೆ.

ಊರಿನ ಪ್ರಮುಖ ದೇವರುಗಳಾದ ಶ್ರೀ ಲಕ್ಷ್ಮಿನಾರಾಯಣ ಮತ್ತು ಆಂಜನೇಯ ಸ್ವಾಮಿಯ ದೇವಸ್ಥಾನದಲ್ಲಿ ಯುಗಾದಿ ಪಾಡ್ಯದಿಂದ ಚೈತ್ರ ಶುದ್ಧ ದ್ವಾದಶಿಯವರೆಗೂ ಉತ್ಸವ ಪೂಜೆ ರಥೋತ್ಸವ ನಡೆಯುತ್ತದೆ.

ಯುಗಾದಿಯಾದ ಮಾರನೇ ದಿನ ನಾಯಕರು, ಹರಿಜನರು, ಬಾರಿಕರು, ವಡ್ಡರು ಮುಂತಾದ ಸಮುದಾಯದವರು ಕರಿಯನ್ನು ಆಚರಿಸುತ್ತಾರೆ. ಅಂದು ಮಾಂಸವನ್ನು ತಂದು, ಅಡುಗೆ ಮಾಡಿ ದೇವರಿಗೆ ಎಡೆ ಇಟ್ಟು ನಂತರ ಊಟ ಮಾಡುತ್ತಾರೆ. ಯುಗಾದಿಯನ್ನು ಹರಿಜನರಲ್ಲಿ ಕುರಿಯರು ಎಂಬ ಬೆಡಗಿನವರು ಆಚರಣೆ ಮಾಡುವುದಿಲ್ಲ. ಹಿಂದಿನಿಂದಲೂ ಹಬ್ಬವನ್ನು ಮಾಡುತ್ತಾ ಬಂದಿಲ್ಲ.

**೪.೨.೯. ನಾಗರ ಪಂಚಮಿ :**

ಶ್ರಾವಣ ಮಾಸದಲ್ಲಿ ಬರವ ನಾಗರ ಪಂಚಮಿ ಹಬ್ಬವನ್ನು ಈ ಊರಿನ ಜನರೆಲ್ಲರು ಆಚರಿಸುತ್ತಾರೆ.

ನಾಗರ ಚೌತಿ, ಪಂಚಮಿಯಂದು ಹಾಲೆರೆದರೆ,ಇನ್ನು ಕೆಲವರು ತಮ್ಮ ಮನೆ ದೇವರ ದಿನಗಳಂದು ನಾಗಪ್ಪನಿಗೆ ಹಾಲೆರೆಯುತ್ತಾರೆ. ಕೆಲವರು ಚೌತಿಯಂದು ಹೊರಗಡೆ ಪಂಚಮಿಯಂದು ಮನೆಯಲ್ಲಿ ಹಾಲೆರೆಯುತ್ತಾರೆ. ಇನ್ನೂ ಕೆಲವರು ಒಂದು ದಿನ ಮಾತ್ರ ಹಾಲೆರೆಯುತ್ತಾರೆ.

ಶೇಂಗಾ, ಎಳ್ಳು, ತಂಬಿಟ್ಟು, ಅಳ್ಳಿಟು, ಗೋಧಿ, ಬೇಸನ್ ಉಂಡಿಗಳನ್ನು ಮಾಡುತ್ತಾರೆ. ಮಡಿಯಿಂದ ಮಾಡಿದ ಉಂಡಿಗಳನ್ನು ಮತ್ತು ಹಾಲನ್ನು ಸಮಿಪದ ಹುತ್ತ ಅಥವಾ ಕಲ್ಲಿನ ನಾಗರ ಮೂರ್ತಿಗೆ ಎರೆಯುತ್ತಾರೆ. ಉಂಡಿಯ ಜೊತೆಗೆ ಎಲೆ, ಅಡಿಕೆ, ಎಳ್ಳು, ಚಿಗಳಿ, ತಂಬಿಟ್ಟು, ಕವಳೆಹಣ್ಣು, ಹುಣಸೇ ಕಾಯಿ, ಸಜ್ಜೆಗಳನ್ನು ನಾಗಪ್ಪನಮುಂದೆ ಇಟ್ಟು, ಹಾಲೆರೆಯುತ್ತಾರೆ. ಮನೆಯ ಪ್ರತಿಯೊಬ್ಬರು ನಾಗಪ್ಪನಿಗೆ ಹಾಲು ಹಾಕುತ್ತಾರೆ.

ಬ್ರಾಹ್ಮಣರು, ವೈಶ್ಯರು, ಲಿಂಗಾಯಿತರು ಅನ್ನ ಊಟ ಮಾಡುವುದಿಲ್ಲ. ಬರೀ ತಿಂಡಿ, ಉಂಡಿಗಳನ್ನು ತಿನ್ನುತ್ತಾರೆ. ಪಂಚಮಿ ದಿನ ಬೆಳ್ಳಿನಾಗಪ್ಪ ಇದ್ದವರು ಸಿಹಿ ಮಾಡಿ ಹಾಲು ಎರೆಯುತ್ತಾರೆ. ಇನ್ನುಳಿದವರು ಮಣ್ಣಿನ ನಾಗಪ್ಪನನ್ನು ಮಾಡಿ ಹಾಲೆರೆಯುತ್ತಾರೆ. ಉಂಡಿಗಳನ್ನು ತಮ್ಮ ಸಂಬಂಧಿಕರಿಗೆ, ಸ್ನೇಹಿತರಿಗೆ ಕಳುಹಿಸಿಕೊಡುತ್ತಾರೆ. ನಾಗರ ಪಂಚಮಿ ಮಹಿಳೆಯರೇ ಪ್ರಮುಖವಾಗಿ ಆಚರಿಸುವ ಹಬ್ಬವಾಗಿದೆ. ಗಂಡನ ಮನೆಗೆ ಹೋದ ಹೆಣ್ಣು, ಈ ಹಬ್ಬಕ್ಕೆ ತವರು ಮನೆಗೆ ಬರುತ್ತಾಳೆ. ಮಕ್ಕಳು ಇಲ್ಲದ ಕೆಲವರು ಮಕ್ಕಳು ಆಗಲೆಂದು ನಾಗಪ್ಪನ ಪೂಜೆ ಮಾಡುತ್ತಾರೆ. ನಾಗಪ್ಪನ ಹುತ್ತಿನ ಪೂಜೆ ಮಾಡುವುದರಿಂದ ಸಂತಾನ ಆಗುತ್ತದೆ ಎನ್ನುವುದು ನಂಬಿಕೆ ಇದೆ.

ಜೋಕಾಲಿ ಆಡುವುದು, ಗುಂಡು ಎಸೆಯುವುದು, ನಿಂಬೆಹಣ್ಣಿನ ಆಟ, ಕೊಬ್ಬರಿ ಆಡಿಸುವುದು ಮುಂತಾದ ಆಟಗಳನ್ನು ಆಡುತ್ತಾರೆ. ನಾಗರ ಪಂಚಮಿಯಾಗಿ ಮೂರನೇ ದಿನ ಈ ಊರಿನ

ಸಮೀಪ ಗುಡ್ಡದಲ್ಲಿ ಇರುವ ತಿಮ್ಮಪ್ಪನ ಜಾತ್ರೆ ನಡೆಯುತ್ತದೆ. ಈ ಜಾತ್ರೆಗೆ ಊರಿನ ಜನರೆಲ್ಲಾ ಭಾಗವಹಿಸುತ್ತಾರೆ. ರೈತರು ತಮ್ಮ ಹೊಲದಲ್ಲಿ ಹುತ್ತ, ಕಲ್ಲಿನ ಮೂರ್ತಿಗಳಿಗೆ ಹಾಲೆರೆಯುತ್ತಾರೆ.

**೪.೨.೧೦. ಗೋಕುಲಾಷ್ಟಮಿ :**

ಕೃಷ್ಣನು ಹುಟ್ಟಿದ ದಿನವೇ ಗೋಕುಲಾಷ್ಟಮಿ ಅಂದು ವಿಶೇಷ ಪೂಜೆಯನ್ನು ಮನೆಯಲ್ಲಿ ಮಾಡುತ್ತಾರೆ. ಬ್ರಾಹ್ಮಣರು, ವೈಶ್ಯೆಯರು ಅಂದಿನ ದಿನ ಅಡುಗೆ ಮಾಡುವುದಿಲ್ಲ. ಉಳಿದ ವರ್ಗದವರು ಹಬ್ಬದ ಅಡುಗೆ ಮಾಡುತ್ತಾರೆ. ಅಂದು ಮಣ್ಣಿನಿಂದ ಕೃಷ್ಣನ ಮೂರ್ತಿಯನ್ನು ಮಾಡಿ ಪೂಜೆ ಮಾಡುತ್ತಾರೆ.

ಸಂಜೆ ತೇರುಗಳು ನಿಂತಿರುವ ಸ್ಥಳದಲ್ಲಿ ಅಂದರೆ ರಥಗಳ ಮಧ್ಯೆ ಅತಿ ಎತ್ತರವಾದ ಅಂದರೆ ಸುಮಾರು ೨೦ರಿಂದ ೩೦ ಅಡಿ ಎತ್ತರ ಕಟ್ಟಿಗೆಯ ನುಣುಪಾದ ಕಂಭವನ್ನ ನಿಲ್ಲಿಸಿ ಅದರ ಮೇಲ್ತುದಿಯಲ್ಲಿ ಚಕ್ರಾಕೃತಿಯಲ್ಲಿ ಹಾಲು, ಮೊಸರು, ಬೆಣ್ಣೆಯ ಗಡಿಗೆಗಳನ್ನು ಕಟ್ಟುತ್ತಾರೆ. ಈ ರೀತಿ ನಿರ್ಮಿಸಿದ ಕಂಭವು ತೀರ ನುಣುಪಾಗಿದ್ದು ಏರಲು ಕಷ್ಟ ಸಾಧ್ಯವಾಗುತ್ತದೆ. ಈ ಕಂಬವನ್ನು ಏರುವವರು ದಾಸರ ಮನೆತನದವರು. ಏರುವಾಗ ನಾಲ್ಕು ಕಡೆಯಿಂದ ಬಣ್ಣದ ನೀರನ್ನು ಎರೆಚುತ್ತಾರೆ. ಏರುವವರು ಈ ಬಣ್ಣದ ನೀರಿನಿಂದ ತಪ್ಪಿಸಿಕೊಂಡು ಕಂಭವನ್ನೇರಿ ಚಕ್ರಾಕೃತಿಯಲ್ಲಿ ಕಟ್ಟಲಾಗಿದ್ದ, ಹಾಲು, ಮೊಸರು, ಬೆಣ್ಣೆಗಳ ಗಡಿಗೆಗಳನ್ನು ಪಟ ಪಟನೆ ಒಡೆದು ಹಾಕಿ, ಅದರ ಜೊತೆ ಇದ್ದ ಚಕ್ಕುಲಿ, ವಡೆಗಳನ್ನು ತಿನ್ನುತ್ತಾರೆ. ಕೃಷ್ಣಜನ್ಮಾಷ್ಟಮಿಯ ಪ್ರಯುಕ್ತ ಈ ಊರಿನಲ್ಲಿ ಹಿಂದಿನಿಂದಲೂ ಈ ಆಚರಣೆ ನಡೆದುಕೊಂಡು ಬಂದಿದೆ.

**೪.೨.೧೧. ಗಣೇಶ ಚತುರ್ಥಿ :**

ಭಾದ್ರಪದ ಮಾಸದಲ್ಲಿ ಚತುರ್ಥಿಯ ದಿನ ಬರುವ ಹಬ್ಬವಾಗಿದೆ. ಗಣೇಶನ ಜೊತೆಗೆ ಗೌರಿಯನ್ನು ಪೂಜೆ ಮಾಡುತ್ತಾರೆ. ಗೌರಿಗಣೇಶನನ್ನು ಒಟ್ಟಿಗೆ ಕೂರಿಸಿ ಪೂಜೆ ಮಾಡುತ್ತಾರೆ. ಊರಿನ ಜಿನಗಾರ ರಾಮಾಂಜನಿಯ ಮನೆಯಿಂದ ಗಣೇಶ ವಿಗ್ರಹವನ್ನು ಮೆರವಣಿಗೆ ಮೂಲಕ ತರುತ್ತಾರೆ. ಮನೆಯಲ್ಲಿ ಗಣಪನನ್ನು ಕುಂದರಿಸುವರು ಚತುರ್ಥಿ ಹಿಂದಿನ, ದಿನವೇ ಹೋಗಿ ತಟ್ಟೆಯಲ್ಲಿ ಅಕ್ಕಿ ಅಡಿಕೆ ದಕ್ಷಿಣೆಗಳನ್ನು ಇಟ್ಟು ಅದರ ಮೇಲೆ ಗಣಪನನ್ನು ಕೂಡಿಸಿಕೊಂಡು ಮನೆಗೆ ಬರುತ್ತಾರೆ. ಹೊಸ್ತಿಲಿನ ಮುಂದೆ ಗಣಪನಿಗೆ ಆರತಿ, ಬೆಳಗಿ ಮನೆಯ ಒಳಕ್ಕೆ ತರುತ್ತಾರೆ. ವಿಶೇಷ ಅಲಂಕಾರದಿಂದ ಮಾಡಿದ ಮಂಟಪದಲ್ಲಿ ಗಣಪನನ್ನೂ ಕೂಡಿಸುತ್ತಾರೆ. ಚತುರ್ಥಿ ದಿನ ಗಣೇಶನಿಗೆ ೨೧ ಕಡುಬಿನ ಎಡೆ ಇಡುತ್ತಾರೆ.

ಕೆಲವರು ಒಂದು ದಿನ, ಮೂರು ದಿನ, ಐದು ದಿನ, ವರ್ಷದವರೆಗೆ ಮನೆಯಲ್ಲಿ ಕೂರಿಸಿ ಕಳುಹಿಸುವರು. ಅಂದು ರಾತ್ರಿ ಮೊಸರು ಬುತ್ತಿಯನ್ನು ಮಾಡಿ ಸಮೀಪಿದ ಬಾವಿ ಇಲ್ಲವೇ ಊರ ಹೊರಗಿನ ಹಳ್ಳದಲ್ಲಿ ಬಿಟ್ಟು ಬರುತ್ತಾರೆ. ಒಂದು ವರ್ಷದವರೆಗೆ ಕೂಡಿಸುವವರು ಪ್ರತಿನಿತ್ಯ ಗಣಪನಿಗೆ ಎಡೆ ಇಡುತ್ತಾರೆ.

ಊರಿನಲ್ಲಿ ಸಾಮೂಹಿಕವಾಗಿ ಸಂಘ ಸಂಸ್ಥೆಗಳೂ ಕೂಡಿಸುತ್ತಾರೆ. ವಾಲ್ಮೀಕಿ ಯುವಕ ಸಂಘ, ವಿದ್ಯಾರ್ಥಿ ವೃಂದ, ವಾಸವಿ ಸಂಘ, ಮುಂತಾದ ಸಂಘಗಳು ಗಣೇಶನನ್ನು ಕೂಡಿಸುತ್ತಾರೆ. ಅಲ್ಲದೇ ಶಾಲಾ ಕಾಲೇಜುಗಳಲ್ಲಿ ಮೂರು ದಿನದವರೆಗೆ ಕೂಡಿಸುತ್ತಾರೆ. ಗಣೇಶನ ವಿಸರ್ಜನೆ ದಿನ ಮೆರವಣಿಗೆ ಮೂಲಕ ತುಂಗಾ ಭದ್ರಾ ನದಿಗೆ ವಿಸರ್ಜಿಸಿ ಬರುತ್ತಾರೆ.

### ೪.೨.೧೨. ನೂಲು ಹುಣ್ಣಿಮೆ :

ನೂಲು ಹುಣ್ಣಿಮೆಗೆ ಇನ್ನೊಂದು ಹೆಸರು ರಾಖಿ ಹಬ್ಬ, ಈ ಹಬ್ಬವು ಹಿಂದೂಗಳಿಗೆ ವಿಶೇಷವಾದ ಹಬ್ಬ, ಅದರಲ್ಲಿಯೂ ಜೈನರು ಹೆಚ್ಚು ಸಂಭ್ರಮದಿಂದ ಆಚರಿಸುತ್ತಾರೆ.

ಮಹಿಳೆಯರು ತಮ್ಮ ಅಣ್ಣ-ತಮ್ಮಂದಿರಿಗೆ ರಾಖಿ ಕಟ್ಟಿ ಆರತಿ ಮಾಡುತ್ತಾರೆ. ಅಂದು ಎಲ್ಲರೂ ತಲೆ ಸ್ನಾನ ಮಾಡಿ ಹೊಸ ಬಟ್ಟೆ ಧರಿಸಿಕೊಂಡು ಸಹೋದರಿಯರಿಂದ ರಾಖಿ ಕಟ್ಟಿಸಿಕೊಂಡು ಆರತಿ ಮಾಡಿಸಿಕೊಳ್ಳುತ್ತಾರೆ. ಆರತಿ ಮಾಡಿದಾಗ ಅವರಿಗೆ ತಾವು ತಂದಂತಹ ಉಡುಗೊರೆಕೊಟ್ಟು ಸಿಹಿ ತಿನ್ನುತ್ತಾರೆ. ಈ ಹಬ್ಬದಿಂದಾಗಿ ಅಣ್ಣ-ತಂಗಿಯರ ಬಾಂಧವ್ಯ ಗಟ್ಟಿಗೊಳ್ಳುತ್ತದೆ ಎಂಬುದು ಜನಪದ ನಂಬಿಕೆ.

### ೪.೨.೧೩. ಚೋಮಾಸ :

ಜೈನರು ಮಾಡುವಂತಹ ಹಬ್ಬ. ಈ ಹಬ್ಬವು ಆಷಾಡ ಮಾಸದಲ್ಲಿ ಪ್ರಾರಂಭವಾಗುತ್ತದೆ. ಸುಮಾರು ನಾಲ್ಕು ತಿಂಗಳುಗಳವರೆಗೆ ಆಚರಿಸುವ ಈ ಹಬ್ಬ ಬರಿ ಉಪವಾಸದಿಂದಲೇ ಈ ಹಬ್ಬ ಮಾಡುತ್ತಾರೆ. ಕೆಲವರು ಒಂದು ತಿಂಗಳು, ಎರಡು ತಿಂಗಳು, ಹದಿನೈದು ದಿವಸ ಮತ್ತು ಮಕ್ಕಳು ಒಂದು ದಿನ ಮಾತ್ರ ಉಪವಾಸ ಮಾಡುತ್ತಾರೆ. ಈ ಸಮುದಾಯದಲ್ಲಿ ಉಪವಾಸ ಮಾಡುವಾಗ ಬರೀ ಬಿಸಿನೀರನ್ನು ಆಗಾಗ್ಗೆ ಕುಡಿಯುತ್ತಾರೆ. ಹೊರತು ಏನನ್ನೂ ತಿನ್ನುವುದಿಲ್ಲ ದೇವರ ಜಪವನ್ನು ಗುಡಿಗೆ ಹೋಗಿ ಮಾಡುತ್ತಾರೆ.

ಒಂದು ದಿನ ಉಪವಾಸ ಮಾಡುವವರು ಉಪವಾಸ ಬಿಡುವ ದಿನ ಬೆಳಿಗ್ಗೆ ೯.೩೦ರೊಳಗೆ ಗುಡಿಗೆ ಹೋಗಿ ಬರುತ್ತಾರೆ. ಅವರಿಗೆ ತಿನ್ನಲು ಹೆಸರುನ್ನಬೇಳೆ ಬಿಸಿ ಮಾಡಿದ ಪಲ್ಲೆ ಮಾಡಿರುತ್ತಾರೆ. ಒಂದು ತಿಂಗಳು ಉಪವಾಸ ಮಾಡುವವರು ಉಪವಾಸ ಬಿಡುವ ದಿನ ನೆಂಟರೆಲ್ಲಾ ಬಂದಿರುತ್ತಾರೆ. ಅಂದು ಆತ ಅಥವಾ ಆಕೆ ಪಲ್ಲಕ್ಕಿಯಲ್ಲಿ ಕೂಡಿಸಿ ಮೆರವಣಿಗೆ ಮಾಡುತ್ತಾ ಜೈನದೇವಾಲಯಕ್ಕೆ ಹೋಗುತ್ತಾರೆ. ಆಕೆ ತವರಿನವರು ತೆಂಗಿನ ಕಾಯಿ, ಬೆಲ್ಲ, ಬೆಳ್ಳಿ, ಬಂಗಾರ ತಂದು ಕೆಂಪು ಅಥವಾ ಹಳದಿ ಬಣ್ಣದ ಸೀರೆ ಕುಪ್ಪಸ ತಂದು ಉಡಿ ತುಂಬುತ್ತಾರೆ. ಸಂಬಂಧಿಕರೆಲ್ಲಾ ಆಕೆಗೆ ಉಡುಗೊರೆ ಕೊಡುತ್ತಾರೆ. ಗಂಡಸರಿಗೆ ಹೆಣ್ಣು ಕೊಟ್ಟ ಮಾವ ಬಂಗಾರವನ್ನು ಉಡುಗೊರೆ ಕೊಡುತ್ತಾನೆ. ದೇವಸ್ಥಾನಕ್ಕೆ ಹೋಗಿ ಬಂದ ನಂತರ ಸಿಹಿ ಅಡುಗೆ ಮಾಡಿ ತಿನ್ನುತ್ತಾರೆ.

### ೪.೨.೧೪. ಕ್ರಿಸ್‌ಮಸ್ :

ಕ್ರಿಶ್ಚಿಯನ್ನರ ಪ್ರಮುಖ ಹಬ್ಬವೇ ಕ್ರಿಸ್‌ಮಸ್ ಹಬ್ಬ. ಮರಿಯಮ್ಮನಹಳ್ಳಿಯಲ್ಲಿ ಕೆಲ ಕ್ರಿಶ್ಚಿಯನ್ ಕುಟುಂಬಗಳು ವಾಸ ಮಾಡುತ್ತಿವೆ. ಈ ಹಬ್ಬವನ್ನು ಡಿಸೆಂಬರ್ ೨೫ರಂದು ಪ್ರಪಂಚದಾದ್ಯಂತ ಆಚರಿಸುತ್ತಾರೆ. ಏಸುಕ್ರಿಸ್ತನ ಜನ್ಮದಿನವಾಗಿದೆ. ಅಂದು ಕ್ರಿಶ್ಚಿಯನ್ ಬಾಂಧವರೆಲ್ಲಾ ಹೊಸ ಬಟ್ಟೆ ಧರಿಸಿ ಚರ್ಚ್‌ಗೆ ಹೋಗಿ ಪ್ರಾರ್ಥನೆ ಸಲ್ಲಿಸಿ ಮೇಣದ ದೀಪವನ್ನು ಹೊತ್ತಿಸುತ್ತಾರೆ. ಪಾದ್ರಿಗಳು ಏಸುವಿನ ಸಂದೇಶ ಹೇಳುತ್ತಾರೆ. ಪರಸ್ಪರ ಶುಭಾಷಯ ಹೇಳುತ್ತಾರೆ. ಮನೆಯಲ್ಲಿ ಸಿಹಿ, ಮಾಂಸದೂಟವನ್ನು ಮಾಡುತ್ತಾರೆ.

### ೪.೨.೧೫. ದೀಪಾವಳಿ :

ಈ ಹಬ್ಬವನ್ನು ಮೂರು ದಿನಗಳೆಂದು ಆಚರಿಸುತ್ತಾರೆ. ನರಕ ಚತುದರ್ಶಿ, ಅಮವಾಸ್ಯೆ ಹಾಗೂ ಬಲಿ ಪಾಡ್ಯ. ಊರಿನಲ್ಲಿ ಜನರೆಲ್ಲಾ ಅತಿ ಸಂಭ್ರಮದಿಂದ ಸಡಗರದಿಂದ ದೀಪಾವಳಿಯನ್ನು ಆಚರಿಸುತ್ತಾರೆ.

ಹೊಸದಾಗಿ ಮದುವೆಯಾದವರ ಮನೆಯಲ್ಲಿ ಅಳಿಯನನ್ನು ಬರಮಾಡಿಕೊಂಡು ಸಂಭ್ರಮದಿಂದ ಹಬ್ಬವನ್ನು ಆಚರಿಸುತ್ತಾರೆ.

ಎಲ್ಲಾ ಹಬ್ಬದಂತೆ ಈ ಹಬ್ಬದಲ್ಲಿ ಮನೆಗಳಿಗೆ ಸುಣ್ಣ ಬಣ್ಣ ಬಳಸುತ್ತಾರೆ. ನರಕ ಚತುರ್ದರ್ಶಿ ದಿನ ಎಣ್ಣೆ ಸ್ನಾನ ಮಾಡಿ ಹೊಸ ಬಟ್ಟೆಧರಿಸುತ್ತಾರೆ. ಅಂದಿನಿಂದ ಸಂಜೆ ಮನೆ ಒಳಗೂ ಹೊರಗೂ ದೀಪಗಳನ್ನು ಹಚ್ಚಿಡುತ್ತಾರೆ. ಮಕ್ಕಳು ಪಟಾಕಿ ಸಿಡಿಸುತ್ತಾ ಸಂಭ್ರಮಿಸಿದರೆ, ಹೆಣ್ಣು ಮಕ್ಕಳು ದೀಪಗಳನ್ನು ಹಚ್ಚುತ್ತಾ ಸಂಭ್ರಮಿಸುತ್ತಾರೆ. ಮನೆ ಮುಂದೆ ಸೆಗಣಿಯಿಂದ ಮಾಡಿದ ಪಾಂಡವರನ್ನು ಇಟ್ಟು ಪೂಜಿಸುತ್ತಾರೆ.

ವ್ಯಾಪಾರಸ್ಥರು ಅಮವಾಸ್ಯೆ ದಿನ ಅಂಗಡಿಯಲ್ಲಿ ಲಕ್ಷ್ಮಿ ಪೂಜೆಯನ್ನು ಮಾಡುತ್ತಾರೆ. ಬ್ರಾಹ್ಮಣರನ್ನು ಕರೆಯಿಸಿ ಲಕ್ಷ್ಮಿ, ಸರಸ್ವತಿಯ ಪೂಜೆ ಮಾಡಿಸುತ್ತಾರೆ. ಅಂಗಡಿ ಇಲ್ಲದವರು ಮನೆಯಲ್ಲಿ ಲಕ್ಷ್ಮಿಪೂಜೆ ಮಾಡುತ್ತಾರೆ. ಹೋಳಿಗೆಯ ಸಿಹಿ ಅಡುಗೆ ಮಾಡಿ ನೈವೇಧ್ಯ ಇಡುತ್ತಾರೆ. ಪೂಜೆಗೆ ಬಂದವರಿಗೆ ತಾಂಬೂಲ ನೀಡುತ್ತಾರೆ.

### ೪.೨.೧೬. ದಸರಾ :

ಈ ಹಬ್ಬಕ್ಕೆ ನವರಾತ್ರಿ ಮಹಾನವಮಿ, ವಿಜಯದಶಮಿ ಎಂದು ಕರೆಯುತ್ತಾರೆ. ಇದು ನಾಡಹಬ್ಬವಾಗಿದೆ. ಈ ಹಬ್ಬದಲ್ಲಿ ದುರ್ಗೆ, ಚಾಮುಂಡಿ, ಮಹಾಕಾಳಿಯಂತಹ ಶಕ್ತಿ ದೇವತೆಯ ಆರಾಧನೆ ಮಾಡುತ್ತಾರೆ. ಈ ಹಬ್ಬಕ್ಕೆ ತನ್ನದೇ ಆದ ಇತಿಹಾಸವಿದೆ. ಹಿಂದೆ ಮಹಾಭಾರತದಲ್ಲಿ ಪಾಂಡವರು ವನವಾಸದಲ್ಲಿ ಇದ್ದಾಗ ತಮ್ಮ ಆಯುಧಗಳನ್ನು ಬನ್ನಿ ಮರದಲ್ಲಿ ಬಚ್ಚಿಟ್ಟಿದ್ದರು. ಹೀಗಾಗಿ ಮಹಾನವಮಿಯಲ್ಲಿ ಒಂಬತ್ತು ದಿನಗಳವರೆಗೆ ಬನ್ನಿ ಗಿಡವನ್ನು ಪೂಜಿಸಿ ದಶಮಿಯಂದು ಬನ್ನಿಯನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುತ್ತಾರೆ.

ಮಹಾಲಯ ಅಮವಾಸೆಗೆ ಮುಂಚೆ ತಮ್ಮ ತಮ್ಮ ಮನೆಗಳಿಗೆ ಸುಣ್ಣ ಬಣ್ಣಗಳನ್ನು ಹಚ್ಚಿ ಶುಚಿಗೊಳಿಸುತ್ತಾರೆ. ಅಮವಾಸೆಯ ಮಾರನೆದಿನ ಅಲ್ಲಿಂದ ಪ್ರಾರಂಭವಾಗಿ ಒಂಬತ್ತು ದಿನಗಳವರೆಗೆ ನಡೆಯುತ್ತದೆ. ಹತ್ತನೇ ದಿನ ಬನ್ನಿ ಮುಡಿಯುತ್ತಾರೆ. ಮರಿಯಮ್ಮನಹಳ್ಳಿಯಲ್ಲಿ ಎಲ್ಲಾ ಹಿಂದುಗಳು ಈ ಹಬ್ಬವನ್ನು ಆಚರಿಸುತ್ತಾರೆ. ಅತೀ ವಿಜೃಂಭಣೆಯಿಂದ ಆಚರಿಸುತ್ತಾರೆ., ಊರಿನ ಪ್ರಮುಖ ದೇವರುಗಳಾದ ಲಕ್ಷ್ಮೀನಾರಾಯಣ, ಆಂಜನೇಯ, ನಾಗರೇಶ್ವರ, ಬನ್ನಿ ಕಾಳಿ ದೇವಸ್ಥಾನದಲ್ಲಿ ವಿಶೇಷ ಪೂಜೆ, ದೇವಿ ಪುರಾಣ ಪ್ರವಚನ ಇರುತ್ತದೆ. ದಿನಕ್ಕೊಂದರಂತೆ ವಿವಿಧ ವೇಷ ಹಾಕುತ್ತಾರೆ.

ಮಹಿಳೆಯರು ಹತ್ತು ದಿನಗಳವರೆಗೆ ಊರಿನ ಬನ್ನಿಗಿಡಕ್ಕೆ ಹೋಗಿ ಪೂಜೆ ಸಲ್ಲಿಸಿ ಬರುತ್ತಾರೆ. ಪ್ರತಿ ದಿನ ಬೆಳಗಿನ ಜಾವ ೪ ಗಂಟೆಗೆ ಹೋಗಿ ಪೂಜೆ ಸಲ್ಲಿಸುತ್ತಾರೆ. ಬಹಳಷ್ಟು ಜನ ಮೌನ ವ್ರತವನ್ನು ಕೈಗೊಂಡು ಪೂಜೆ ನಡೆಸುತ್ತಾರೆ. ನವಮಿಯಂದು ಖಂಡಾ ಪೂಜೆ, ಅಂದು ಪ್ರತಿಯೊಂದು ಅಂಗಡಿ, ಮನೆಗಳಲ್ಲಿ ತಮ್ಮ ವೃತ್ತಿಗೆ ಸಂಬಂಧಿಸಿದ ಸಾಮಾನನ್ನು ಪೂಜೆ ಮಾಡುತ್ತಾರೆ. ಪೊಲೀಸ್‌ಠಾಣೆಯಲ್ಲಿ ಆಯುಧವನ್ನು ಪೂಜೆ ಮಾಡುತ್ತಾರೆ.

ಊರಿನ ಕೆಲವು ನಾಯಕರು, ಹರಿಜನರು, ಬಾರಿಕರು, ನೇಕಾರರು, ದಸರಾ ಹಬ್ಬದ ಸಂದರ್ಭದಲ್ಲಿ ಹಿರಿಯರ ಪೂಜೆ ಮಾಡುತ್ತಾರೆ. ಅಂದು ತಮ್ಮ ಕುಟುಂಬದಲ್ಲಿ ಸತ್ತಂತಹ ವ್ಯಕ್ತಿಗಳಿಗೆ ಬಟ್ಟೆ ಏರಿಸಿ, ಚರಿಗೆ, ಕಾಯಿ ತಂಬಿಟ್ಟು ಅವರಿಗೆ ಇಷ್ಟವಾದ ಅಡುಗೆ ಮಾಡಿ ಎಡೆ ಇಟ್ಟು ಪೂಜೆ ಮಾಡುತ್ತಾರೆ.

ದಶಮಿಯಂದು ಬನ್ನಿ ಪೂಜೆ ಮಾಡಿದ ಮಹಿಳೆಯರು ಬನ್ನಿ ಮರಕ್ಕೆ ಸೀರೆ, ಕುಪ್ಪಸ ಏರಿಸಿ ಹೋಳಿಗೆಯ ಎಡೆ ಇಟ್ಟು ಪೂಜೆ ಮಾಡುತ್ತಾರೆ.

ಸಂಜೆ ಲಕ್ಷ್ಮೀನಾರಾಯಣ ಆಂಜನೇಯ ಸ್ವಾಮಿಯ ಉತ್ಸವ ಮೂರ್ತಿಯ ಪಲ್ಲಕ್ಕಿಯೂ ಪಾದಗಟ್ಟೆ ಆಂಜನೇಯ ಸ್ವಾಮಿಗೆ ದೇವಸ್ಥಾನಕ್ಕೆ ಹೋಗಿ ಬಂದ ನಂತರ ದೇವರ ಬನ್ನಿ ಮುಡಿದ ಮೇಲೆ ಜನರು ಪರಸ್ಪರ ಬನ್ನಿಯನ್ನು ವಿನಿಯಮ ಮಾಡಿಕೊಳ್ಳುತ್ತಾರೆ. ಜಂಗಮರಿಗೆ ಹಿರಿಯರಿಗೆ, ಕಿರಿಯರು ಪಾದಗಳಿಗೆ ನಮಸ್ಕಾರ ಮಾಡಿ ದಕ್ಷಿಣೆಕೊಟ್ಟು ಬನ್ನಿ ತೆಗೆದುಕೊಂಡು ಬಂಗಾರದಂತೆ ಇರಿ ಎಂದು ಹೇಳಿ ಕೊಡುತ್ತಾರೆ.

### ೪.೨.೧೭. ಹೋಳಿ ಹಬ್ಬ :

ಕಾಮದಹನ ಎಂದರೆ ಶಿವನು ಮನ್ಮಥನನ್ನು ಸುಟ್ಟು ಹಾಕಿದ ದಿನ. ದಕ್ಷಯಜ್ಞದಲ್ಲಿ ದಾಕ್ಷಾಯಿಣಿಯು ದೇಹ ತ್ಯಾಗ ಮಾಡಿದಳು ಶಿವನು ದಾಕ್ಷಾಯಿಣಿಯ ಆಗಲಿಕೆಯಿಂದ ವಿರಹಿಯಾಗಿ ತಪಸ್ಸಿಗೆ ಕುಳಿತನು. ಇವನ ತಪಸ್ಸಿನ ಫಲವಾಗಿ ಲೋಕಗಳು ಪರಿತಪಿಸಿದವು. ಇದನ್ನು ತಪ್ಪಿಸ ಬೇಕೆಂದು ದೇವತೆಗಳು ಮನ್ಮಥನಿಗೆ ಮೊರೆಹೊಕ್ಕು ಶಿವನ ತಪೋಭಂಗ ಮಾಡುವಂತೆ ಬೇಡಿಕೊಳ್ಳುತ್ತಾರೆ. ಪಾರ್ವತಿಯ ಕಲ್ಯಾಣಕ್ಕಾಗಿ ಮನ್ಮಥನು ತನ್ನನ್ನು ತಾನೆ ಬಲಿಗೊಡುತ್ತಾನೆ. ಪರರ ಹಿತಕ್ಕಾಗಿ ಮನ್ಮಥನ ದೇಹ ತ್ಯಾಗ ಮಾಡಿದ ಸವಿನೆನಪಿಗಾಗಿ ಕಾಮದಹನವನ್ನು ಆಚರಿಸಲಾಗುವುದು.

ಮರಿಯಮ್ಮನಹಳ್ಳಿಯಲ್ಲಿ ಈ ಹಬ್ಬವನ್ನು ಹಿರಿಯರು ಕಿರಿಯರು ಎನ್ನದೆ ಎಲ್ಲರೂ ಭಾಗವಹಿಸುತ್ತಾರೆ. ಊರಿನಲ್ಲಿ ಮೂರು ಕಡೆ ಕಾಮಣ್ಣನನ್ನು ಕೂಡಿಸುತ್ತಾರೆ ಬ್ರಾಹ್ಮಣರ ಓಣಿಯಲ್ಲಿ, ಬಸ್‌ನಿಲ್ದಾಣದ ಹತ್ತಿರ, ಛತ್ರದ ಹತ್ತಿರ ಕೂಡಿಸುತ್ತಾರೆ.

ಕಾಮದಹನಕ್ಕಾಗಿ ಮನೆಗಳ ಹೊರಗಡೆ ಇರುವ ಕಟ್ಟಿಗೆಗಳನ್ನು ಕಳ್ಳತನ ಮಾಡುತ್ತಾರೆ. ಈ ದಹನಕ್ಕಾಗಿ ಮನೆ, ಅಂಗಡಿಗಳಿಂದ ಪಟ್ಟಿ ಎತ್ತುತ್ತಾರೆ. ಮಕ್ಕಳು ಪಟ್ಟಿ ಕೇಳುವಾಗ 'ಕಾಮಣ್ಣ ಮಕ್ಕಳು ಕಳ್ಳಸುಳೇ ಮಕ್ಕಳು ಎಂದು ಲಭೋ ಲಭೋ' ಎಂದು ಬಾಯಿ ಬಡಿದುಕೊಳ್ಳುತ್ತಾರೆ. ಯಾರಾದರೂ ಮನೆ ಮುಂದೆ ಕಟ್ಟಿಗೆ ಇಟ್ಟಿದ್ದರೆ ಅವುಗಳನ್ನು ಕಳ್ಳತನ ಮಾಡುತ್ತಾರೆ.

ಹುಣ್ಣಿಮೆ ರಾತ್ರಿ ದಿನದಂದು ಕಾಮ ದಹನ ಮಾಡುತ್ತಾರೆ. ಕಾಮದಹನದ ಮೂರನೇ ದಿನ ಬೆಳ್ಳಿಗ್ಗೆ ಓಕುಳಿಯಾಡುತ್ತಾರೆ. ಪರಸ್ಪರ ಬಣ್ಣವನು ಎರೆಚುತ್ತಾ ಓಕುಳಿಯಾಡುತ್ತಾರೆ. ಇಲ್ಲಿ ಎಲ್ಲರು ಜಾತಿ ಭೇದ ಮರೆತು ಮುಕ್ತ ಮನಸ್ಸಿನಿಂದ ಆಡುತ್ತಾರೆ. ಮಧ್ಯಾಹ್ನದವರೆಗೆ ಆಡಿದ ನಂತರ ತುಂಗಾಭದ್ರಾ ನದಿಗೆ ಹೋಗಿ ಸ್ನಾನ ಮಾಡುತ್ತಾರೆ.

ಆಧುನಿಕತೆಯಿಂದಾಗಿ ಬಣ್ಣವಾಡುವಾಗ, ಪೇಂಟ್‌ಗಳನ್ನು, ಕೀಲ್ ಎಣ್ಣೆಗಳನ್ನು ಬಳಸುತ್ತಾರೆ. ಇನ್ನು ಕೆಲವರು ಮೊಟ್ಟೆ, ಟೊಮೇಟೋ, ತಲೆಗೆ ಒಡೆಯುತ್ತಾರೆ. ಸಾಮಾನ್ಯ ಬಣ್ಣಗಳನ್ನು ಬಳಸುತ್ತಿದ್ದವರು ಇಂದು ಈ ತೆರೆನಾದ ವಸ್ತುಗಳನ್ನು ಬಳಸುತ್ತಾರೆ.

### ೪.೨.೧೮. ಬಕ್ರೀದ್ :

ಈ ಹಬ್ಬದಂದು ಮರಿಯಮ್ಮನಹಳ್ಳಿ ಮತ್ತು ಸುತ್ತಮುತ್ತಲಿನ ಹಳ್ಳಿಯ ಮುಸ್ಲಿಂ ಬಾಂಧವರು ಸೇರಿ ಹಬ್ಬ ಆಚರಿಸುತ್ತರೆ.

ಪೈಗಂಬರ್ ಇಬ್ರಾಹಿಂ ಕಲೀಲುಲ್ಲಾ ಈತನ ಮಗ ಇಸ್ಮಾಯಿಲ್ ಜಲಾಲ್ಲನನ್ನು ದೇವರು ಪರೀಕ್ಷಿಸಲು ನಿನ್ನ ಮಗನನ್ನು ಬಲಿಕೊಡು ಎಂದು ಕೇಳಲು, ಆಗ ಮರು ಮಾತ್ಹಿಲ್ಲದೆ ಒಪ್ಪಿಕೊಂಡು ಸಿದ್ಧನಾಗುತ್ತಾನೆ. ಬಲಿಕೊಡಲು ಹೋದಾಗ ದೇವರು ಬಲಿ ಕೊಡುವುದನ್ನು ನಿಲ್ಲಿಸಿ, ಈ ದಿನ ಒಂದು ಕುರಿಯನ್ನು ಬಲಿ ಕೊಡು ಎಂದು ಹೇಳುತ್ತಾನೆ. ಅಂದಿನಿಂದ ಈ ದಿನವಂದು ಕುರಿ ಬಲಿಕೊಟ್ಟು ಬಕ್ರೀದ್ ಹಬ್ಬವನ್ನು ಆಚರಿಸುತ್ತಾರೆ.

ಬಕ್ರೀದ್ ದಿನದಂದು ಮುಸ್ಲಿಂ ಬಾಂಧವರು ಒಬ್ಬರಿಗೊಬ್ಬರು ಶುಭಾಷಯ ಹೇಳುತ್ತಾ ಆಲಂಗಿಸಿಕೊಳ್ಳುತ್ತಾರೆ. ಬಡವರಿಗೆ ತಮ್ಮ ಕೈಲಾದಷ್ಟು ದಾನವನ್ನು ಮಾಡುತ್ತಾರೆ.

### ೪.೨.೧೯. ರಂಜಾನ್ :

ರಂಜಾನ್‌ನನ್ನು ಈ ಊರಿನ ಮುಸ್ಲಿಂ ಬಾಂಧವರು ಬಹು ಶ್ರದ್ಧೆಯಿಂದ ಮಾಡಿಕೊಂಡು ಬರುತ್ತಿದ್ದಾರೆ. ರಂಜಾನ್ ಸಂದರ್ಭದಲ್ಲಿ ಮುಸ್ಲಿಂರು ಒಂದು ತಿಂಗಳು ಉಪವಾಸ ಮಾಡುತ್ತಾರೆ. ಅಮವಾಸೆಯಾದ ಮಾರನೇ ದಿನ ಚಂದ್ರ ದರ್ಶನ ಮಾಡಿಕೊಂಡು ರೋಜಾ (ಉಪವಾಸ) ಮಾಡುತ್ತಾರೆ.

ರೋಜಾ ಮಾಡುವ ಸಂದರ್ಭದಲ್ಲಿ ಪ್ರತಿದಿನ ಬೆಳಿಗ್ಗೆ ೫.೩೦ರ ಒಳಗಾಗಿ ನಮಾಜ್ ಮಾಡಿ, ಊಟ ಮಾಡಿ ನಂತರ ದಿನ ಪೂರ್ತಿ ಉಗುಳು ಕೂಡ ನುಂಗದೇ ಉಪವಾಸ ಮಾಡುತ್ತಾರೆ, ಉಪವಾಸ ಬಿಡುವುದು ಸಂಜೆ ೬ಗಂಟೆಗೆ. ಸ್ನಾನ ಮಾಡಿ ಮಸೀದಿಗೆ ತೆರಳಿ ನಮಾಜ್ ಮಾಡಿದ ನಂತರ ಊಟ ಮಾಡುತ್ತಾರೆ. ಇದೇ ರೀತಿ ಒಂದು ತಿಂಗಳವರೆಗೆ ಉಪವಾಸವನ್ನು ಮಾಡುತ್ತಾರೆ. ಉಪವಾಸ ವೃತ ಮುಗಿದ ಮಾರನೇ ದಿನ ರಂಜಾನ್ ಹಬ್ಬವನ್ನು ಆಚರಿಸುತ್ತಾರೆ. ಆ ದಿನ ಎಲ್ಲರೂ ಹೊಸಬಟ್ಟೆ ಧರಿಸಿ, ಪುರುಷರು ನಮಾಜ್‌ಗೆ ತೆರಳುತ್ತಾರೆ. ಮಹಿಳೆಯರು ಮನೆಯಲ್ಲಿ ಪ್ರಾರ್ಥನೆ ಮಾಡಿ ಹಬ್ಬದ ಅಡಿಗೆಯಾದ ಶ್ಯಾವಿಗೆ, ಬಿರಿಯಾನಿ, ಮಟನ್ ಮಾಡುತ್ತಾರೆ. ಕೆಲವು ಮುಸ್ಲಿಂ ಕುಟುಂಬದವರು ತುಂಗಾಭದ್ರ ಆಣೆಕಟ್ಟನ್ನು ನೋಡಲು ಹೋದರೆ ಇನ್ನೂ ಕೆಲವರು ಸಿನಿಮಾ ನೋಡಲು ಚಿತ್ರಮಂದಿರಕ್ಕೆ ಹೋಗುತ್ತಾರೆ.

### ೪.೨.೨೦. ಈದ್-ಮಿಲಾದ್ :

ಈದ್ ಮಿಲಾದ್ ಹಬ್ಬ ಮುಸ್ಲಿಂರಿಗೆ ಪವಿತ್ರವಾದ ಹಬ್ಬವಾಗಿದೆ. ಅಂದು ಮುಸ್ಲಿಂರ ಪ್ರವಾದಿ ಮಹಮ್ಮದ್ ಪೈಗಂಬರರ ಹುಟ್ಟಿದ ದಿನವಾಗಿದೆ. ಮರಿಯಮ್ಮನಹಳ್ಳಿಯ ಮುಸ್ಲಿಂ ಬಾಂಧವರು ಈ ದಿನ ವಿಶೇಷ ರೀತಿಯಲ್ಲಿ ಹಬ್ಬ ಆಚರಿಸುತ್ತಾರೆ. ಎಲ್ಲರೂ ಹೊಸ ಬಟ್ಟೆ ಧರಿಸಿ, ನಮಾಜ್ ಮಾಡುತ್ತಾರೆ. ಊರಿನ ಇತರ ದರ್ಮದವರು ಮುಸ್ಲಿಂ ಬಾಂಧವರಿಗೆ ಹಬ್ಬದ ಶುಭಾಷಯ ಹೇಳುತ್ತಾರೆ. ವಿಶೇಷವಾದ ಹಬ್ಬದ ಅಡುಗೆ ಮಾಡುತ್ತಾರೆ.

### ೪.೨.೨೧. ಮೊಹರಂ (ಪೀರಲ್ ಹಬ್ಬ) :

ಹಿಂದೂ ಮುಸ್ಲಿಂರು ಕೂಡಿ ಆಚರಿಸುವ ಹಬ್ಬವಾಗಿದೆ. ಈ ಮೊಹರಂ ಹಬ್ಬ ಹಿಂದೂ ಮುಸ್ಲಿಂರ ಐಕ್ಯತೆಯ ಸೂಚನೆಯಾಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ದೇಶದ ಸಾಮರಸ್ಯ ಜೀವನದ ಸಂಕೇತವಾಗಿತ್ತು.

ಈ ಊರಿನ ಮುಸ್ಲಿಂ ಜನಾಂಗದವರು ಪೀರಲ್ ದೇವರನ್ನು ಕೂಡುವ ಮುಂಚೆ ಮೊಹರಂ ಮಸೀದಿಗಳಿಗೆಲ್ಲಾ ಸುಣ್ಣ ಬಳಸುತ್ತಾರೆ. ಚಂದ್ರ ಕಂಡ ದಿನ ಮೊಹರಂ ಮೊದಲ ದಿನದಂದು ಪಶ್ಚಿಮಕ್ಕೆ ಮುಖ ಮಾಡಿ ನಿಂತು ಮುಲ್ಲಾ ಪಾತ್ರೆ ಕೊಡುತ್ತಾನೆ ಒಬ್ಬರು ಗುದ್ದಲಿಯಿಂದ ಐದಾರು ಕಚ್ಚು ಹಾಕುತ್ತಾರೆ. ಇದನ್ನು ಹಾಕಿದ ನಂತರ ಮರುದಿನ ಮಸೀದಿ ಮುಂದೆ ದೊಡ್ಡ ಕುಣಿತೋಡುತ್ತಾರೆ. ಈ ಕುಣಿಯನ್ನು ಅಲಾಯ ಕುಣಿ ಎಂದು ಕರೆಯುತ್ತಾರೆ. ಮುಸ್ಲಿಂರ ಪೀರ್ ದೇವರುಗಳಾದ - ಹುಸೇನ, ಅಬ್ಬಾಸಲಿ, ಕಾಸಿಂ, ಅವರುಗಳು ಯುದ್ಧದಲ್ಲಿ ವೀರ ಸಾವನ್ನು ಹೊಂದಿದಕ್ಕೋಸ್ಕರ ಅವರುಗಳನ್ನು ಯುದ್ಧದ ನೆನಪಲ್ಲಿ ದೇವರುಗಳಾಗಿ ಕೂಡಿಸುತ್ತಾರೆ.

ಈ ಹಬ್ಬವು ಹತ್ತು ದಿನಗಳವರೆಗೆ ನಡೆಯುತ್ತದೆ. ಈ ಊರಿನಲ್ಲಿ ನಾಲ್ಕು ಮೊಹರಂ ಮಸೀದಿಗಳಿವೆ.

## ಕತ್ತಲ್ ರಾತ್ರಿ

ಕತ್ತಲ್ ರಾತ್ರಿಯು ಮೊಹರಂನ ಒಂಬತ್ತನೆ ದಿನವಾಗಿದೆ. ಈ ದಿನ ದೇವರುಗಳು ಏಳುತ್ತವೆ. ಇಮಾಮ್ ಹುಸೇನ್‌ರು ತೀರಿಕೊಂಡ ದಿನವಾಗಿದೆ. ಈ ಕಾರಣದಿಂದಾಗಿ ಕತ್ತಲ್ ರಾತ್ರಿಯಾಗಿದೆ.

ಮರುದಿನ ಮೊಹರಂ ಕೊನೆ ದಿನ ಅಂದು ದೇವರುಗಳು ಸಾಯುತ್ತವೆ. ಅಂದು ಸಂಜೆ ಮಸೀದಿಯಲ್ಲಿ ಕೂತ ದೇವರುಗಳನ್ನು ತೆಗೆದು ಕೊಂಡು ಅಲಾಯಿ ಕುಣಿಯ ಸುತ್ತ ಐದು ಸುತ್ತು ಹಾಕಿ ಊರಲ್ಲಿ ಮೆರವಣಿಗೆಗೆ ಹೋಗುತ್ತದೆ. ಆಗ ಆಲಾಯಿ ಕುಣಿಯನ್ನು ಮುಚ್ಚುತ್ತಾರೆ. ರಾತ್ರಿ ೮ ಗಂಟೆಗೆ ಮೆರವಣಿಗೆಯಿಂದ ಊರ ಹೊರಗೆ ದೇವರುಗಳನ್ನು ಧಪನ್ ಮಾಡುತ್ತಾರೆ. ಮೂರು ದಿನಗಳ ನಂತರ ಕವಡೆ ಪೀರರು (ಸಣ್ಣ) ದೇವರನ್ನು ಕೂಡಿಸಿ ಮರುದಿನ ಇವುಗಳನ್ನು ದಫನ್ ಮಾಡಿ ಬರುತ್ತಾರೆ.

ಈ ಹಬ್ಬದ ವಿಶೇಷತೆ ಅಂದರೆ ದೇವರಿಗೆ ಸಕ್ಕರೆ ಓದಿಸುವುದು ಮತ್ತು ಕೆಂಪು ದಾರ (ಲಾಡಿ) ಕಟ್ಟಿಕೊಳ್ಳುವುದು. ಇಲ್ಲಿಯ ಹಿಂದೂಗಳು ಈ ದೇವರುಗಳಿಗೆ ಹರಕೆ ಹೊತ್ತು ಕೊಳ್ಳುತ್ತಾರೆ. ತಮ್ಮ ಹರಕೆಗಳು ಫಲಿಸಿದರೆ ಕತ್ತಲೆ ರಾತ್ರಿಯಂದು ದೇವರ ಅಲಾಯಿ ಕುಣಿಯಲ್ಲಿ ಕೆಂಡ ತುಳಿಯುತ್ತಾರೆ. ಕೆಲವರು ಅನೇಕ ತರಹದ ವೇಷವನ್ನು ಹಾಕುತ್ತಾರೆ, ಮಕ್ಕಳು ದೊಡ್ಡವರು ಎನ್ನದೆ ವೇಷ ಹಾಕುತ್ತಾರೆ. ಕುರೂಪವಾದಂತಹ ವೇಷ ಧರಿಸಿ ಮನೆ ಮನೆಗಳಿಗೆ ಹೋಗಿ ಬಿಕ್ಷೆ ಬೇಡುತ್ತಾರೆ. ಬೇಡುವಾಗ 'ಇಲಾಯಿಮೋವ್ ಧೂಲೋ' ಎನ್ನುತ್ತಾರೆ ಇವರನ್ನು 'ಅಜ್ಜಳ್ಳಿ ಬಿಜ್ಜಳಿ' ಎಂದು ಕರೆಯುತ್ತಾರೆ.

ಊರಿನ ಈ ಹಬ್ಬದ ವಿಶೇಷತೆ ಎಂದರೆ ಮರಿಯಮ್ಮನ ಹಳ್ಳಿಗೆ ವಲಸೆ ಬಂದಂತಹ ಹಂಪನಕಟ್ಟೆ ಗ್ರಾಮದ ೧೨ ಕುಟುಂಬದವರು ಇಲ್ಲಿನ ಮೊಹರಂ ದೇವರುಗಳಿಗೆ ನೆಡೆದುಕೊಳ್ಳುವುದಿಲ್ಲ, ಅದರಲ್ಲಿ ಮುಳುಗಡೆಯಿಂದ ಹಂಪನಕಟ್ಟೆ ಗ್ರಾಮದ ಹಿಂದೂಗಳು ಈ ದೇವರುಗಳಿಗೆ ಸಕ್ಕರೆ ಓದಿಸುವುದಿಲ್ಲ. ಇವರುಗಳು ಪಕ್ಕದ ಹಳ್ಳಿಯಾದ ಹಂಪನ ಕಟ್ಟೆಗೆ ಹೋಗಿ ಅಲ್ಲಿನ 'ಪೀರ್ ದೇವರುಗಳಿಗೆ ಸಕ್ಕರೆ ಓದಿಸಿ, ಲೋಬಾನ ಹಾಕಿ, ಮೊಸರು ಬುತ್ತಿ ಕೊಟ್ಟ ಬಂದ ನಂತರ ಮನೆಗೆ ತೆರಳಿ ಊಟ ಮಾಡುತ್ತಾರೆ. ನಾಣಿ ಕೇರಿಯಿಂದ ವಲಸೆ ಬಂದಂತಹವರಲ್ಲಿ ಹಿರಿಯರು ತಾವು ಯಾವ ರೀತಿ ಮೊಹರಂ ಹಬ್ಬವನ್ನು ಆಚರಿಸುತ್ತಿದ್ದೆವು ಎಂಬುದನ್ನು ಹೇಳುತ್ತಾರೆ.

ಮೊಹರಂ ಹಬ್ಬವನ್ನು ನಾವೆಲ್ಲರು ಕೂಡಿಯೇ ಆಚರಿಸುತ್ತಿದ್ದೆವು. ನಾಣಿಕೇರಿಯಲ್ಲಿ ಶೆಟ್ರು ರಂಗಯ್ಯನವರ ಮನೆ ಹತ್ತಿರವಿದ್ದ ಮಸೀದಿಯಲ್ಲಿ ಪೀರಲು ದೇವರನ್ನು ಕೂಡಿಸುತ್ತಿದ್ದರು. ಅಲ್ಲದೇ ಹೀರೆ ಮಸೀದಿ ಹಾಗೂ ಈಡಿಗರ ಓಣಿಯಲ್ಲಿ ಪೀರಲು ದೇವರನ್ನು ಕೂಡಿಸುತ್ತಿದ್ದರು. ಹಿಂದೂ ಮುಸ್ಲಿಂರು ಹರಕೆ ಹೊತ್ತು ದೇವರಿಗೆ ನಡೆದು ಕೊಳ್ಳುತ್ತಿದ್ದರು, ಕತ್ತಲ್‌ರಾತ್ರಿಯಂದು ವೇಷ ಹಾಕುತ್ತಿದ್ದರು ಅದರಲ್ಲಿ ಹುಲಿ ವೇಷ ಅತಿ ಪ್ರಸಿದ್ದಿಯಾದುದು ಇದಲ್ಲದೇ, ಕರಡಿ, ಕಳ್ಳನ ವೇಷ ಹಾಕುತ್ತಿದ್ದರು. ದೇವರ ಕುಣಿಯಲ್ಲಿ ಬೆಂಕಿ ಹಾಕಿ ಅದರ ಮಧ್ಯೆ ಹಾದು ಹೋಗುತ್ತಿದ್ದರು 'ದೀರಪ್ಪ'

ಎಂಬಾತನು ಈ ಕಾರ್ಯವನ್ನು ನಡೆಸಿಕೊಡುವುದರಲ್ಲಿ ಪ್ರಖ್ಯಾತನಾಗಿದ್ದನು. ದೀರಪ್ಪನ ಮೈ ಮೇಲೆ ದೇವರು ಕಾಣಿಸಿಕೊಂಡು ಭವಿಷ್ಯವನ್ನು ಹೇಳುತ್ತಿದ್ದ, ಮರುದಿನ ಎಲ್ಲ ಪೀರಲುಗಳನ್ನು ವಿಜೃಂಭಣೆಯಿಂದ ಕೆರೆಯಲ್ಲಿದ್ದ ಶಂಕರ ದೇವರ ಬಂಡೆಯಲ್ಲಿ ವಿಸರ್ಜಿಸಲಾಗುತಿತ್ತು, ಈಡಿಗರ ಓಣಿಯ ಪಿಂಜಾರ ಪೀರಲು ತುಂಬಾ ಪ್ರಭಾವಿಯಾಗಿತ್ತು. ಈ ದೇವರು ಊರ ಈಡಿಗರು ಮಸೀದಿಯನ್ನು ಕಟ್ಟಿಸಿದರೆ ಮಾತ್ರ ಬರುವನೆಂದು ಹೇಳಿತ್ತು. ಅದರಂತೆ ಗೌಳೇರಗೇರಿಯ ಆಚೆ ಈಡಿಗರು ಮಸೀದಿಯನ್ನು ಕಟ್ಟಿದ ಮೇಲೆಯೇ ಈ ಪೀರಲು ದೇವರನ್ನು ಹೊರಡಿಸಲಾಗುತ್ತಿತ್ತು ಎಂದು ಹೇಳುತ್ತಾರೆ.

**೪.೨.೨೨. ಕಾರ ಹುಣ್ಣಿಮೆ :**

ರೈತ ಸಮುದಾಯಕ್ಕೆ ಸಡಗರದ ಹಬ್ಬವೆಂದರೆ ಕಾರಹುಣ್ಣಿಮೆ ಅಂದು ಹೋರಿಗಳನ್ನು ಕರಿ ಹಾರಿಸುವುದು ಅನಾದಿ ಕಾಲದಿಂದಲೂ ನಡೆದು ಬಂದ ಪದ್ಧತಿ. ಕಾರ ಹುಣ್ಣಿಮೆಗೆ ಹೊಲಗಳಲ್ಲಿಯು ಬಿತ್ತನೆ ಕಾರ್ಯ ಪೂರ್ಣಗೊಂಡಿದ್ದು, ರೈತರಿಗೂ ಹಾಗೂ ಎತ್ತುಗಳಿಗೂ ಬಿಡುವಿರುತ್ತದೆ. ಅಲ್ಲದೆ ಪೈರುಗಳು ಮೊಳಕೆಯೊಡೆದು ರೈತರ ಮನಸ್ಸಿಗೆ ಉಲ್ಲಾಸವನ್ನು ನೀಡಿರುತ್ತದೆ. ಹೀಗಾಗಿ ಕಾರ ಹುಣ್ಣಿಮೆಯ ದಿನದಂದು ಹೋರಿಗಳಿಗೆಲ್ಲಾ ಮೈ ತೊಳೆದು ಬಣ್ಣಹಚ್ಚಿ, ಶೃಂಗಾರ ಮಾಡಿ ಸಾಯಂಕಾಲ ಸಮಯದಲ್ಲಿ ಕರಿಹರಿಸುತ್ತಾರೆ.

ಕರಿ ಹರಿಯುವುದೆಂದರೆ ಒಂದೊಂದು ಓಣಿಯ ಎತ್ತುಗಳಿಗೆ ನಿಗದಿ ಪಡಿಸಿದ ಸ್ಥಳದಲ್ಲಿ ನಿಲ್ಲಿಸಿ ಓಟದ ಸ್ಪರ್ಧೆಯನ್ನು ಏರ್ಪಡಿಸುವುದು. ಈ ಸ್ಪರ್ಧೆಯಲ್ಲಿ ಮೊದಲು ಬಂದ ಹೋರಿಯನ್ನು ಊರಿನಲ್ಲಿ ಮೆರವಣಿಗೆ ಮಾಡುತ್ತಾರೆ. ಇದು ಆ ರೈತರಿಗೆ ಗೌರವದ ಸಂಗತಿಯಾಗಿತ್ತು.

ಈ ಹಬ್ಬಕ್ಕೆ ಸಂಬಂಧಿಸಿದಂತೆ ಒಂದು ಕತೆ ಇದೆ. ಬಹಳ ಕಾಲದ ಹಿಂದೆ, ಮೂವರು ರಾಕ್ಷಸರು, ಶಿವನಿಂದ ವರ ಪಡೆದು ಅಂತರಿಕ್ಷದಲ್ಲಿಯೇ ಮೂರು ನಗರವನ್ನು ನಿರ್ಮಿಸಿಕೊಂಡು ರಾಜ್ಯಭಾರ ಮಾಡುತ್ತಿದ್ದರಂತೆ. ದೇವಮಾನದ ಒಂದು ವರ್ಷಕ್ಕೆ ಈ ಮೂರು ನಗರಗಳೂ ಒಂದೆಡೆ ಸೇರುತ್ತಿದ್ದವಂತೆ ಈ ನಗರಗಳನ್ನು ಹೊತ್ತ ಚಕ್ರವು ಸದಾ ಸಂಚರಿಸುತ್ತಲೇ ಇತ್ತಂತೆ. ಕಾಲ ಕ್ರಮೇಣ ಈ ನಗರದ, ರಾಕ್ಷಸರ ಹಾವಳಿಯು ಹೆಚ್ಚಾಗಲು, ದೇವತೆಗಳು, ಶಿವನಲ್ಲಿ ಮೊರೆ ಇಟ್ಟರಂತೆ ಆಗ ಶಿವನು ಈ ರಾಕ್ಷಸರನ್ನು ಸಂಹಾರ ಮಾಡಲು ನಂದಿಗೆ ಅಪ್ಪಣೆ ಮಾಡಿದನಂತೆ ನಂದಿಯು ಮಹಾ ನಂದಿಯ ರೂಪತಾಳಿ, ಶಿಶು ಮಾರನೆಂಬ ರಾಕ್ಷಸನನ್ನು ಸಂಹರಿಸಿ ತನ್ನ ಕೋಡುಗಳ ಬಲದಿಂದ ಈ ಮೂರು ನಗರಗಳನ್ನು ನಾಶ ಪಡಿಸಿದನು. ಶಿಶು ಮಾರ ರಾಕ್ಷಸನು ಕತ್ತಲೆಯಂತೆ ಕಪ್ಪು ದೇಹವನ್ನು ಹೊಂದಿದ್ದನು. ಅವನನ್ನು ಕಾರಾರಕ್ಷಸ ಎಂದುಕರೆಯುತ್ತಿದ್ದರು, ಮಹಾ ನಂದಿಯು ಹುಣ್ಣಿಮೆ ದಿನದಂದು ಸಂಹರಿಸಿದ್ದರಿಂದ ಈ ಹುಣ್ಣಿಮೆಗೆ ಕಾರ ಹುಣ್ಣಿಮೆ ಎಂದು ಹೆಸರು ಬಂದಿತು. ನಂದೀಶ್ವರನು ಮಹಾನಂದಿಯ ರೂಪವನ್ನು ದರಿಸಿದ್ದಕ್ಕಾಗಿ, ಬಸವನ ಭಕ್ತರಾದ ರೈತರು ತಮ್ಮ ಎತ್ತುಗಳಿಗೆ ಮೈ ತೊಳೆದು ಬಣ್ಣ ಹಚ್ಚಿ ಶೃಂಗಾರ ಮಾಡಿ ತನ್ಮೂಲಕ ತಮ್ಮ ಭಕ್ತಿಯನ್ನು

ಪ್ರದರ್ಶಿಸುವರು. ಕರಿ ಎಂದರೆ ಕತ್ತಲು ಕಷ್ಟ ಕಾರ್ಪಣ್ಯದ ಕಗ್ಗತ್ತಲಿನ ದಿನಗಳು ದೂರಗೊಂಡು ಶುಭದಿನಗಳನ್ನು ಹಾರೈಸುವ ಸಂಕೇತವೇ ಈ ಕಾರ ಹುಣ್ಣಿಮೆ.

**ಹಿರಿಯರ ಹಬ್ಬ :**

ಮರಿಯಮ್ಮನಹಳ್ಳಿ ವಲಸೆ ಬಂದಂತ ಹಳ್ಳಿಯಲ್ಲಿ ಹಂಪನಕಟ್ಟಿ, ನಾಣಿಕೇರಿ, ಐಯ್ಯನಹಳ್ಳಿ, ಅರಳಿಹಳ್ಳಿ, ಗೌರಿಪುರ, ಬಸಪುರ ಮುಂತಾದ ಹಳ್ಳಿಗಳಿಂದ ಬಂದಿದ್ದಾರೆ.

ಹಿರಿಯರ ಹಬ್ಬವನ್ನು ಆಚರಿಸುವವರು ಹೆಚ್ಚಾಗಿ ವಾಲ್ಮೀಕಿ ಸಮುದಾಯದವರು. ಈ ಹಬ್ಬ ಆಚರಿಸುವುದರಲ್ಲಿ ಕೆಲವರು ದಸಾರ ಸಂದರ್ಭದಲ್ಲಿ ಅಚರಿಸಿದರೆ, ಇನ್ನೂ ಕೆಲವರು ಯುಗಾದಿಗೆ ಆಚರಿಸುತ್ತಾರೆ.

ನಾರಾಯಣ ದೇವರ ಕೆರೆಯವರು ಹಿರಿಯರ ಹಬ್ಬವನ್ನು ದಸರಾದಲ್ಲಿ ಆಚರಿಸುತ್ತಾರೆ. ಇವರು ಮೂರು ದಿನ ದಸರಾ ಆಚರಣೆ ಮಾಡಿದರೆ ಹಂಪನಕಟ್ಟಿಯವರು ಎರಡು ದಿನ ದಸರಾ ಮಾಡುತ್ತಾರೆ.

ನಾಣಿಕೇರಿಯವರು ಮೊದಲನೇ ದಿನ ಖಂಡೇ ಪೂಜೆ ಮಾಡುತ್ತಾರೆ. ಎರಡನೇ ದಿನ ಹಿರಿಯರ ಹಬ್ಬ ಮಾಡುತ್ತಾರೆ. ಅಂದು ದೇವರ ಮುಂದೆ ಹಿರಿಯರಿಗೆ ಹೊಸ ಬಟ್ಟೆಯನ್ನು ಇಡುತ್ತಾರೆ. ಪೂಜೆ ಮಾಡಿ, ಕಡಬು ಮಾಡಿ ಎಡೆ ಇಡುತ್ತಾರೆ. ಸಿಹಿ ಊಟ ಮಾಡುತ್ತಾರೆ. ಮೂರನೆ ದಿನ ವಿಜಯ ದಶಮಿ ಹಬ್ಬ ಮಾಡುತ್ತಾರೆ.

ಹಂಪನಕಟ್ಟಿಯಿಂದ ವಲಸೆ ಬಂದವರು ಹಿರಿಯರ ಹಬ್ಬವನ್ನು ಯುಗಾದಿ ದಿನದಂದು ಮಾಡುತ್ತಾರೆ. ಹಬ್ಬದ ದಿನದಂದು ಹಿರಿಯರನ್ನು ನೆನಪಿಸಿ ಹೊಸಬಟ್ಟೆಯನ್ನು ಇಟ್ಟು ಪೂಜೆ ಮಾಡಿ ಅವರಿಗೆ ಕಡುಬನ್ನು ಎಡೆ ಇಟ್ಟು ಸಿಹಿ ಊಟ ಮಾಡುತ್ತಾರೆ. ಮರುದಿನ ಪಾಡ್ಯ ಮಾಡುತ್ತಾರೆ. ಮೂರನೇ ದಿನ 'ಕರಿ' ಇರುತ್ತದೆ. ಅಂದು ಮಾಂಸದೂಟ ಮಾಡುತ್ತಾರೆ.

ಈಗಲೂ ಇದೇ ರೀತಿಯಾದ ಆಚರಣೆ ನಡೆಯುತ್ತದೆ. ನಾಣಿಕೇರಿಯಿಂದ ಬಂದಂತಹ ಹರಿಜನರು ಈ ಊರಿನ ನಾಣಿಕೇರಪ್ಪನ ಜಾತ್ರೆಯ ದಿನಕ್ಕಿಂತ ಒಂದು ದಿನ ಮುಂಚಿತವಾಗಿ ಆ ದಿನ ಹಿರಿಯರ ಹಬ್ಬ ಮಾಡುತ್ತಾರೆ. ಮನೆಯಲ್ಲಿ ಹಿರಿಯರ ಹೆಸರಲ್ಲಿ ಬಟ್ಟೆ ಧರಿಸಿ ಸಿಹಿ ಅಡುಗೆಯನ್ನು ಎಡೆ ಇಡುತ್ತಾರೆ. ಕೆಲವು ಹರಿಜನರು ಭರತ ಹುಣ್ಣಿಮೆಯಲ್ಲಿ ಹಿರಿಯರ ಹಬ್ಬ ಆಚರಿಸುತ್ತಾರೆ.

**೪.೩. ನಂಬಿಕೆಗಳು :**

ಸಂಘ ಜೀವಿಯಾದ ಮಾವನು ಸದಾ ಸುಖವನ್ನು ಬಯಸುತ್ತಾನೆ. ಸದಾ ಸುಖಕ್ಕಾಗಿ ಹವಣಿಸುವ ಈತ ಹಿರಿಯರಲ್ಲಿ ಪ್ರೀತಿಗೌರವ ಭಕ್ತಿ ಸೂಚಿಸಿದರೆ, ಮಾತ್ರ ಬಾಳಿಗೊಂದು ಭದ್ರತೆ ಎಂದು ತಿಳಿದಿದ್ದಾನೆ ಹಾಗೆಯೇ ಸಮಾಜದಲ್ಲಿಯೂ ತನ್ನದೇ ಆದ ವ್ಯಕ್ತಿತ್ವವನ್ನು ಕಾಪಾಡಿಕೊಂಡು

ಮಾನ ಮರ್ಯಾದೆಯಿಂದ ಬದುಕಲು ಯತ್ನಿಸುತ್ತಾನೆ. ಹಾಗೆ ಬಾಳಲು ಆತನಿಗೆ ಹಿರಿಯರ ಹಿತ ನುಡಿಗಳು, ಹರಿದು ಬರುವಂತಹ ಎಚ್ಚರಿಕೆಯ ಮಾತುಗಳು ಕುಟುಂಬ ಸಂಬಂಧ ಸೌಹಾರ್ದಗಳು, ಅನುವಂಶೀಯತೆ ಬಾಧ್ಯತೆ ಮತ್ತು ಪರಂಪರಾಗತ ನೀತಿ ನಿಯಮಗಳು ನಂಬಿಕೆಯಾಗಿ ಉಳಿಯುತ್ತವೆ. ಇದನ್ನು ಅಕ್ಷರಶಃ ಪಾಲಿಸಿದವರು ಇದರ ಮರ್ಮವನ್ನು ಸತ್ಯವೆಂದು ನಂಬಿರುತ್ತಾರೆ. ಅದನ್ನು ಪಾಲಿಸಿದವರು ಇದರ ಮರ್ಮವನ್ನು ಸತ್ಯವೆಂದು ನಂಬಿರುತ್ತಾರೆ. ಅದೇ ಪಾಲಿಸದೇ ಇದ್ದವರು ಇದನ್ನು ಮೂಢನಂಬಿಕೆ ಎಂತಲೂ ಹೇಳುತ್ತಾರೆ.

ನಂಬಿಕೆ ಜೀವನದ ತಾಯಿ ಬೇರು. ನಂಬಿಕೆಯ ನೆಲೆಗಟ್ಟಿನ ಮೇಲೆ ಸಂಸ್ಕೃತಿಯ ಕಟ್ಟಡವು ನಿಂತಿದೆ. ಈ ನಂಬಿಕೆಗಳಿಗೆ ತಾತ್ವಿಕ, ಸಾಮಾಜಿಕ ಹಿನ್ನಲೆಯೂ ಧಾರ್ಮಿಕ ತಳಹದಿಯು ಇರುತ್ತದೆ. ನಾವು ಜನಪದ ಸಂಸ್ಕೃತಿಯ ಅಂತರಾಳದ ಜೀವಂತ ಮಿಡಿತವನ್ನು ಈ ನಂಬಿಕೆಗಳಲ್ಲಿ ಗುರುತಿಸಬಹುದು. ಮಾನವ ತನಗಾದ ಅನುಭವದ ಸತ್ಯತೆ ಅರಿತಾಗ ಅದರಲ್ಲಿ ಅವನಿಗೆ ಆತ್ಮ ವಿಶ್ವಾಸ ಮೂಡುತ್ತದೆ. ಅಲ್ಲದೇ ಇವು ಮಾನವನನ್ನು ನಿಯಂತ್ರಿಸುವ ಪ್ರಬಲ ಶಕ್ತಿಯನ್ನು ಪಡೆದಿವೆ ಎಂದರೆ ತಪ್ಪಾಗಲಾರದು. ಜನಪದರ ನಿತ್ಯ ಬದುಕಿಗೂ ಈ ಜನಪದ ನಂಬಿಕೆಗಳಿಗೂ ನಿಕಟವಾದ ನಂಟಿದೆ.

ಜನಪದ ನಂಬಿಕೆಯು ಪರಂಪರಾನುಗತವಾಗಿ ಅಂಗೀಕೃತವಾದ ಒಂದು ಪರಿಕಲ್ಪನೆ. ಹೀಗೆ ನಂಬಿಕೆಯೊಂದು ಅಂಗೀಕೃತವಾಗುವಲ್ಲಿ ಪುನರಾವರ್ತನೆ ಹಾಗೂ ಸಾಮೂಹಿಕ ನಿರೀಕ್ಷೆಗಳು ಮುಖ್ಯವಾಗುತ್ತವೆ. ನಂಬಿಕೆಯು ಜನಪದರ ಜೀವನಾನುಭವ ಉತ್ಪನ್ನ ಹೀಗಾಗಿ ಮಾನವ ಬದುಕಿಗೂ ನಂಬಿಕೆಗೂ ಬೇರ್ಪಡಿಸಲಾಗದ ಸಂಬಂಧ. ನಂಬಿಕೆಗಳು ಸೂಚನೆ, ನಿಯಮ, ವಿಧಿ, ನಿಷೇಧ, ನಿರ್ದೇಶನ, ಅಗ್ರಹ, ಆದೇಶ ಮತ್ತು ಆಜ್ಞೆಗಳ ರೂಪದಲ್ಲಿ ನಿತ್ಯ ಬದುಕಿನೊಂದಿಗೆ ಸಂಬಂಧವನ್ನು ಹೊಂದಿದ್ದು ಆ ಮೂಲಕ ಕ್ರಿಯಾರೂಪವನ್ನು ತಾಳುತ್ತವೆ.

ಮೂಲತಃ ಕಾಲ್ಪನಿಕ ಆಲೋಚನೆಯೊಂದು ವೈಯಕ್ತಿಕ ನೆಲೆಯಲ್ಲಿ ಹುಟ್ಟಿಕೊಂಡು ಸಮೂಹದಲ್ಲಿ ಸಾಮೂಹಿಕ ಮಾನ್ಯತೆಯನ್ನು ಪಡೆದುಕೊಂಡಾಗ ಅದು ನಂಬಿಕೆಯಾಗುತ್ತದೆ.

ನಂಬಿಕೆಗಳು ಜನಪದರ ಜೀವನದಲ್ಲಿ ತುಂಬಾ ಗಣನೀಯವಾದ ಪಾತ್ರವನ್ನು ವಹಿಸುತ್ತದೆ. ಹಾಗೆಯೇ ನಂಬಿಕೆಗಳು ಜನಪದರ ಜೀವನಕ್ಕೆ ನೇರವಾದ ಸಂಬಂಧವನ್ನು ಹೊಂದಿವೆ. ನಂಬಿಕೆಯು ಜನಪದರಿಗೆ ಕಷ್ಟ ಕಾರ್ಪಣ್ಯಗಳನ್ನು ಹಗುರಗೊಳಿಸುವುದರ ಜೊತೆಗೆ ಅವುಗಳನ್ನು ಅಪ್ಯಾಯಮಾನವಾಗಿಯೂ ಮಾಡುತ್ತವೆ. ದೇವರಲ್ಲಿ ಮನುಷ್ಯನು ಅಷತ್ಯಂತ ಹೆಚ್ಚಿನ ಸಾಂತ್ವಾನ ಮತ್ತು ಬೆಂಬಲವನ್ನು ನಂಬಿಕೆಯಿಂದ ಪಡೆಯಬಹುದು.

ದೇವರಿಲ್ಲದಿದ್ದರೆ ಮಾನವ ಸಂಪೂರ್ಣವಾಗಿ ತನ್ನನ್ನು ತಾನು ಆಶ್ರಯಿಸಬೇಕಾಗುತ್ತದೆ. ಭೀಕರ ಪ್ರವಾಹ ಮತ್ತು ಬಿರುಗಾಳಿಗಳ ನಡುವೆ ಒಬ್ಬ ವ್ಯಕ್ತಿ ತನ್ನ ಕಾಲ ಮೇಲೆ ತಾನು ನಿಂತುಕೊಳ್ಳುವುದು ಹುಡುಗಾಟವಲ್ಲ. ಒಬ್ಬನಲ್ಲಿ ಅಹಂಕಾರವೇನಾದರೂ ಇದ್ದರೆ ಅಂತಹ ಪರೀಕ್ಷೆಯ ಲಕ್ಷಣಗಳಲ್ಲಿ ಅದು ಕರಗಿಹೋಗುತ್ತದೆ.

ನಂಬಿಕೆಗಳು ವ್ಯಕ್ತಿಯ ಬೆಳವಣಿಗೆಯಲ್ಲಿ ತುಂಬಾ ಪ್ರಭಾವ ಬೀರುತ್ತವೆ. ವ್ಯಕ್ತಿ ಚಿಕ್ಕವನಿದ್ದಾಗ ಯಾವ ರೀತಿಯ ನಂಬಿಕೆಗಳನ್ನು ಬೆಳೆಸಿಕೊಂಡಿರುತ್ತಾನೆಯೋ ಅದೇ ರೀತಿ ಬೆಳೆಯುತ್ತಾನೆ. ಅಂದರೆ ನಂಬಿಕೆಗಳು ಹೇಗಿರುತ್ತವೆಯೋ ಹಾಗೆಯೇ ವ್ಯಕ್ತಿತ್ವವಾಗಿರುತ್ತದೆ. ಉದಾಹರಣೆಗೆ ದೊಡ್ಡವರು ಹಿರಿಯರ ಬಗೆಗೆ ಭಕ್ತಿ ಗೌರವಗಳನ್ನು ಮೊದಲಿನಿಂದ ನಂಬಿ ಅವುಗಳನ್ನು ಬೆಳೆಸಿಕೊಂಡು ಬಂದ ವ್ಯಕ್ತಿಯು ದೇವರು ಮತ್ತು ಹಿರಿಯರಲ್ಲಿ ಭಕ್ತಿ ಗೌರವದಿಂದ ಇರುತ್ತಾನೆ.

ವೈಚಾರಿಕತೆಯ ಜ್ಞಾನವಿರುವ ಮನುಷ್ಯ ಇವನ್ನು ಮೂಢ ನಂಬಿಕೆ ಎಂದು ಕರೆದರೂ. ಆತನು ತನಗರಿವಿಲ್ಲದಂತೆ ಅವುಗಳನ್ನು ಜೀವನದಲ್ಲಿ ಪಾಲಿಸುತ್ತಾನೆ. ಉದಾ:-ಶ್ರಾದ್ಧ ಮಾಡವಾಗ ಪಿಂಡವನ್ನು ಕಾಗೆ ಮುಟ್ಟುವರೆ ಕಾಯುವುದು. ಕಾಗೆ ಬೇಗನೇ ಮುಟ್ಟದಿದ್ದರೆ ಜೋಯಿಸರಿಂದ ಪರಿಹಾರ ಕಂಡು ಕೊಳ್ಳುವುದು ಹೀಗೆ ಹಲವಾರು ನಂಬಿಕೆಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಅವುಗಳ ದಾಸನಾಗಿದ್ದಾನೆ.

ಒಂದು ಪ್ರದೇಶದಲ್ಲಿ ಬದುಕುವ ಇಡೀ ಜನತೆ ಸಾರ್ವತ್ರಿಕವಾಗಿ ನಂಬುವ ಕೆಲವು ನಂಬಿಕೆಗಳು ಹೇಗಿವೆಯೋ ಹಾಗೇ ವಿಧಿ-ನಿಷೇಧಗಳುಂಟು. ಈ ವಿಧಿ-ನಿಷೇಧಗಳು ಎನ್ನುವ ಕಲ್ಪನೆಯನ್ನು ಇಂದು ಬಹಳ ವಿಶಾಲವಾದ ಅರ್ಥದಲ್ಲಿ ಬಳಸಲಾಗುತ್ತದೆ. ಈ ಸಮುದಾಯಗಳಲ್ಲಿ ನಂಬಿಕೆ ವಿಧಿ-ನಿಷೇಧಗಳು ಸಂವಿಧಾನವೆಂಬಂತೆ ನಿಯಮಗಳಾಗಿರುತ್ತವೆ. ಈ ನಿಯಮಗಳಿಗೆ ಬದ್ಧರಾಗಿಯೇ ಸಾಮಾಜಿಕ ವ್ಯವಸ್ಥೆಯಲ್ಲಿ ಜೀವಿಸುತ್ತಾರೆ. ಇವು ಒಂದು ಪರಂಪರೆಯಂತೆ ಬಳುವಳಿಯಾಗಿ ಬೆಳೆದು ಬಂದಿರುತ್ತವೆ. ಪರಿಸರಕ್ಕೆ ಅನುಗುಣವಾಗಿ, ಕಾಲಕ್ಕೆ '- ತಕ್ಕಂತೆ ನಂಬಿಕೆ ನಿಷೇಧಗಳು ಅನ್ವಯಿಸಲಾರವಾದರೂ, ಕೆಲವೊಂದನ್ನು ಕಡ್ಡಾಯ ನಿಯಮಗಳಾಗಿ ಪಾಲಿಸುತ್ತಾರೆ. ಮರಿಯಮ್ಮನಹಳ್ಳಿಯಲ್ಲಿರುವ ಮೂಲವಾಸಿಗಳಿಗೂ ಮತ್ತು ವಲಸೆ ಬಂದಂತಹ ಸಮುದಾಯಗಳು ಈ ನಂಬಿಕೆ-ವಿಧಿ ನಿಷೇದಗಳನ್ನು ಅಲಿಖಿತ ನಿಯಮಗಳಾಗಿ ಪಾಲಿಸಿಕೊಂಡು ಬಂದಿದ್ದಾರೆ.

**ನಂಬಿಕೆಗಳು :**

೧. ಅಕ್ಕಿ ಅರಿಸುವಾಗ ಅಕ್ಕಿ ತಿಂದರೆ ಮದುವೆಯಲ್ಲಿ ಮಳೆ ಬರುತ್ತದೆ.

೨. ಪರಸ್ಥಳಕ್ಕೆ ಹೋಗುವಾಗ ಎಲ್ಲಿಗೆ ಎಂದು ಕೇಳಬಾರದು

೩. ಸಂಜೆ ಹೊತ್ತು ಕಸ ಹೊರಗೆ ಹಾಕಬಾರದು

೪. ದೀಪ ಆರಿದೆ ಎನ್ನಬಾರದು ದೀಪ ದೊಡ್ಡದಾಗಿದೆ ಎನ್ನಬೇಕು.

೫. ಜೋಕಪ್ಪನ ಬುಟ್ಟಿಯನ್ನು ಹಾಗೆಯೇ ಮುಟ್ಟಬಾರದು ಸ್ನಾನ ಮಾಡಿ ಬಂದು ಮುಟ್ಟಬೇಕು.

೬. ರಥದಮ್ಮ ಆಚರಣೆ ಮಾಡುವಾಗ ಊರಿನಲ್ಲಿ ಇರುವ ಬಂಡಿಯ ಚಕ್ರವನ್ನು ಬಿಚ್ಚಿರ ಬೇಕು.

೭. ಗ್ರಾಮದೇವತೆ ದುರುಗಮ್ಮನ ಜಾತ್ರೆಯಲ್ಲಿ ಅಗ್ನಿಕುಂಡಕ್ಕೆ ಹೋಗುವವರು ಊಟ ಮಾಡದೆ ಹೋಗಬೇಕು

೮. ಜೋಕಪ್ಪನು ಸತ್ತಾಗ ಅಗಸರು ಬಟ್ಟೆ ಒಗೆಯ ಬಾರದು
೯. ದೇವಸ್ಥಾನದಿಂದ ಬರುವಾಗ ಸ್ವಲ್ಪ ಹೊತ್ತು ಪೌಳಿಯಲ್ಲಿ ಕುಳಿತು ಬರಬೇಕು
೧೦. ಆಷಾಡದಲ್ಲಿ ಗಂಡ ಹೆಂಡತಿ ಒಟ್ಟಿಗೆ ಇರಬಾರದು
೧೧. ಕಾಗೆ ಮನೆ ಮುಂದೆ ಕುಳಿತ ವದರಿದರೆ ನಂಟರು ಬರುತ್ತಾರೆ.
೧೨. ಬೆಕ್ಕು ಮುಖವನ್ನು ತೊಳೆದುಕೊಂಡರೆ ನೆಂಟರು ಬರುತ್ತಾರೆ.
೧೩. ಒಲೆಯು ವದರಿದರೆ ನಂಟರು ಬರುತ್ತಾರೆ.
೧೪. ಬೆಕ್ಕುಗಳು ಮನೆಯಲ್ಲಿ ಜಗಳವಾಡಬಹುದು.
೧೫. ಹೊರಗಡೆ ಹೋಗುವವರನ್ನು ಎಲ್ಲಿಗೆ ಎಂದು ಕೇಳಬಾರದು
೧೬. ಸೋಮವಾರ ಎತ್ತುಗಳಿಗೆ ನೊಗ ಕಟ್ಟಬಾರದು
೧೭. ಹರಿಜನರು ನಾಯಕರು ಶನಿವಾರ ಮಾಂಸ ತಿನ್ನುವುದಿಲ್ಲ.
೧೮. ಮ್ಯಾಸಬೇಡರು ಕೋಳಿ ತಿನ್ನುವುದಿಲ್ಲ
೧೯. ರಾತ್ರಿ ಹೊತ್ತು ಎಣ್ಣೆ, ಉಪ್ಪು ಒಟ್ಟಿಗೆ ತರಬಾರದು
೨೦. ಶನಿದೇವರಿಗೆ ಬಗ್ಗಿ ನಮಸ್ಕಾರ ಮಾಡಬಾರದು ಏಕೆಂದರೆ ಶನಿ ಹೆಗಲು ಎರುತ್ತದೆ
೨೧. ಅಮವಾಸ್ಯೆ, ಹುಣ್ಣಿಮೆಯಂದ ಕ್ಷೌರ ಮಾಡಿಸಬಾರದು
೨೨. ಆಷಾಡದಲ್ಲಿ ದೇವರಿಗೆ ಕಾಯಿ ಒಡೆಸಬಾರದು.
೨೩. ಮನೆಯಲ್ಲಿ ಯಾರದರು ಸತ್ತರೆ ಆ ವರ್ಷದಲ್ಲಿ ಶುಭಕಾರ್ಯ ಮಾಡಬೇಕು ಇಲ್ಲವೆ ಮೂರು ವರ್ಷ ಬಿಟ್ಟು ಮಾಡಬೇಕು.
೨೪. ಮಾತನಾಡುವಾಗ ಹಲ್ಲಿ ಲಚುಗುಟ್ಟಿದ್ದರೆ ಆ ಮಾತು ಸತ್ಯವಾಗುತ್ತದೆ.
೨೫. ಯಾರದರು ಮನೆಯಿಂದ ಊರಿಗೆ ಹೊರಟರೆ ಆಗ ಕಸ ಹೊಡೆಯಬಾರದು
೨೬. ಸತ್ತವರ ಮನೆ ಮುಂದೆ ರಂಗೋಲಿ ಹಾಕುವುದಿಲ್ಲ
೨೭. ಊಟ ಮಾಡುವಾಗ ಎದ್ದು ಹೋಗಬಾರದು
೨೮. ಮನೆಯ ಚಿಲಕ ಅಲ್ಲಾಡಿಸಬಾರದು
೨೯. ಆಕಳನ್ನು ಸಾಯಿಸಬಾರದು
೩೦. ಆಕಳ ಗಿಣ್ಣನ್ನು ಮೊದಲು ಬ್ರಾಹ್ಮಣರಿಗೆ ಕೊಡಬೇಕು
೩೧. ಮೂರು ಜನ ಒಟ್ಟಾಗಿ ಕೆಲಸಕ್ಕೆ ಹೋಗಬಾರದು
೩೨. ಮುಟ್ಟಾದವರನ್ನು ಮುಟ್ಟಬಾರದು

೩೩. ಹೊಸ ಮನೆಗೆ ಹೋದಾಗ ಹಾಲು ಉಕ್ಕಿಸಬೇಕು

೩೪. ಮೂರಸಂಜೆ ಹೊತ್ತು ಊಟ ಮಾಡಬಾರದು

೩೫. ಹೊಸ್ತಿಲ ಮೇಲೆ ಕುಳಿತಕೊಳ್ಳಬಾರದು

೩೬. ಖಾಲಿತೊಟ್ಟಿಲನ್ನು ತೂಗಬಾರದು

೩೭. ಒಡೆದ ಕಾಯಿಯನ್ನು ಒಂದು ಗೂಡಿಸಬಾರದು

೩೮. ಬಿಕ್ಕಳಿಕೆ ಬಂದರೆ ಯಾರು ನೆನೆಸಿದಾಹಾಗೆ

೩೯. ಕಾಗೆ ಬಂದು ಅನ್ನತಿಂದರೆ ಸತ್ತವರಿಗೆ ಸ್ವರ್ಗ ಎಂಬ ನಂಬಿಕೆ ಇದೆ

೪೦. ಮಂಗಳವಾರ ಮಗಳನ್ನು ಗಂಡನ ಮನೆಗೆ ಕಳಿಸಬಾರದು ಮತ್ತು ಶುಕ್ರವಾರ ಸೊಸೆಯನ್ನು ತವರುಮನೆಗೆ ಕಳಿಸಬಾರದು

೪೧. ಗೂಬೆಯು ಊರಿನಲ್ಲಿ ಅಥವಾ ಮನೆಯ ಮೇಲೆ ಕೂಡಬಾರದು ಮತ್ತು ಕೂಗಬಾರದು.

೪೨. ಮಗುವಿನ ನಾಮಕರಣ ಮಾಡುವಾಗ ಮೊದಲು ಹಿರಿಯರ ಹೆಸರು ಅಥವಾ ದೇವರ ಹೆಸರಿನಿಂದ ಕರೆಯಬೇಕು

೪೩. ಗಂಗೆಯ ಪೂಜೆಯನ್ನು ಕಡ್ಡಾಯವಾಗಿ ಅಮವಾಸೆ ದಿನ ಮಾಡಬೇಕು ಇಲ್ಲಿದಿದ್ದರೆ ಒಳ್ಳೆಯದಾಗುವುದಿಲ್ಲ ಎಂಬ ನಂಬಿಕೆ

೪೪. ಕಣದಲ್ಲಿ ರಾಶಿ ಮಾಡುವಾಗ ಅಶುಭ ನುಡಿಯಬಾರದು ಸಿಳ್ಳೆ ಹಾಕುವಂತಿಲ್ಲ

೪೫. ತಳಿನೋಡಿ ಹೆಣ್ಣು ತರಬೇಕು: ಸುಳಿ ನೋಡಿ ಎತ್ತು ತರಬೇಕು

೪೬. ಬಿತ್ತಲು ಹೋಗುವಾಗ ವಿಧವೆ, ಹಜಾಮ, ಕಾಡಿಗೆ ಹಚ್ಚಿದವಳು ಎದುರಾಗಬಾರದು; ಕಾಡಿಗೆ ಹಚ್ಚಿದವಳು ಎದುರಾದರೆ ಬೆಳೆಗೆ ಕಾರಿಗೆ ರೋಗ ಬರುತ್ತದೆಂಬ ನಂಬಿಕೆ

೪೭. ಬಿತ್ತನೆಯನ್ನು ಶನಿವಾರದ ದಿನ ಮಾಡಬಾರದು

೪೮. ಯುಗಾದಿಯ ದಿನ ಪೂಜೆ ಮಾಡಿಸುವರು ಆ ದಿವಸ ಸೂರ್ಯೋದಯದಲ್ಲಿ ಸೂರ್ಯನಿಗೆ ಅಡ್ಡಲಾಗಿ ಮೋಡಗಳಿರಬಾರದು. ಸೂರ್ಯ ಹೊಳೆಯುತ್ತಿರಬೇಕು. ನಿರ್ಮಲವಾದ ನೀಲಾಕಾಶವಿರಬೇಕು.

೪೯. ಉತ್ತರ ಮಳೆ ಬೀಳದಿದ್ರೆ ಹೆತ್ತವ್ವ ತೊರದ್ಹಾಂಗ 'ಉತ್ತರಿ ಆಗದಿದ್ರ ಕತ್ತರಿ' ಉತ್ತರಿ ಮಳೆ ಆದ್ರೆ ಕೂತಲ್ಲಿ ಕೂಳು.

೫೦. ಮಂಗಳವಾರ ಕೆಟ್ಟದಿನ ಅಂದು ಯಾವ ಕೆಲಸವನ್ನು ಮಾಡಬಾರದು.

೫೧. ಬೆಕ್ಕು ಅಡ್ಡ ಬಂದಾರೆ ಅಪಶಕುನ

೫೨. ಕಪ್ಪುಬಟ್ಟೆಯನ್ನು ಹಾಕಬಾರದು

೫೩. ಎಡಗಡೆ ಅಥವಾ ಬಲಗಡೆ ಕಣ್ಣು ರೆಪ್ಪೆ ಬಡಿದುಕೊಂಡರೆ. ಕೆಟ್ಟದ್ದು ಆಗಬಹುದು ಅಥವಾ ಒಳ್ಳೆಯದಾಗಬಹುದು.

೫೪. ಒಲೆಯನ್ನು ಕಾಲಿನಿಂದ ಒದೆಯಬಾರದು ಲಕ್ಷ್ಮಿಗೆ ಸಮಾನ: ಜನಪದರ ನಂಬಿಕೆ ಏನೆಂದರೆ ಒಲೆಯನ್ನು ಕಾಲಿನಿಂದ ಒದ್ದರೆ ಲಕ್ಷ್ಮಿಗೆ ಸಮಾನ ಎಂದು ತಿಳಿದಿದ್ದಾರೆ ಆದರೆ ವೈಜ್ಞಾನಿಕ ಕಾರಣವೇನೆಂದರೆ ಒಲೆಯನ್ನು ಕಾಲಿನಿಂದ ಒದ್ದರೆ ಕಾಲಿಗೆ ಬೆಂಕಿ ತಗಲಿ ಅಪಾಯವಾಗುವ ಸಾಧ್ಯತೆ ಇರುತ್ತದೆ. ಆದಕಾರಣ ಕಾಲಿನಿಂದ ಒದೆಯಬಾರದು.

೫೫. ಹೊಸ್ತಿಲ ಮೇಲೆ ಕೂಡಬಾರದು ಹೊಸ್ತಿಲನ್ನು ಕಾಲಿನಿಂದ ಒದೆಯಬಾರದು: ಜನಪದರರ ನಂಬಿಕೆಯು ಮುಖ್ಯವಾಗಿ ಕಾರಣವೇನೆಂದರೆ ಹೊಸ್ತಿಲ ಮೇಲೆ ಕುಳಿತರೆ ಸಾಲಜಾಸ್ತಿಯಾಗುತ್ತದೆ. ಅದರಂತೆ ಹೊಸ್ತಿಲನ್ನು ಕಾಲಿನಿಂದ ಒದೆಯಬಾರದು ಯಾಕೆಂದರೆ ಹೊಸ್ತಿಲು ತಂದೆಗೆ ಸಮಾನ ಹೊಸ್ತಿಲಿಗೆ ಒದ್ದರೆ ತಂದೆಯನ್ನು ಒದ್ದಂತೆ ಆದ್ದರಿಂದ ಹೊಸ್ತಿಲನ್ನು ಕಾಲಿನಿಂದ ಒದೆಯಬಾರದು ಎಂದು ನಂಬಿಕೆಯಾಗಿದೆ.

೫೬. ಹೆಂಗಸರು ಅವಳಿ ಬಾಳೆ ಹಣ್ಣು ತಿನ್ನಬಾರದು: ಕಾರಣವೆಂದರೆ ಗರ್ಭಿಣಿಯಾದಂತಹ ಸಂದರ್ಭದಲ್ಲಿ ಹೆಣ್ಣು ಮಕ್ಕಳು ಅವಳಿ ಮಕ್ಕಳನ್ನು ಹೇರುತ್ತಾರೆ ಎಂಬ ನಂಬಿಕೆ.

೫೭. ದೇವರ 'ಹೂ'ವನ್ನು ಮೂಸಬಾರದು: ದೇವರ 'ಹೂ' ಅಂತಪ್ರತ್ಯೇಕ ಅಲ್ಲ ಅದು ಯಾವುದೇ ಹೂವಾಗಿರಬಹುದು. ಅಂದ್ರೆ 'ಹೂ'ವಿನಲ್ಲಿರುವ ಕ್ರಿಮಿಕೀಟಗಳು ಮೂಗಿನೊಳಕ್ಕೆ ಸೇರಿ ರೋಗ ಹೊರಬಾರದೆಂಬ ನಂಬಿಕೆಯಾಗಿದೆ. ಇನ್ನೊಂದು ರೀತಿಯಲ್ಲಿ ಹೂ ಮುನಿದರೆ ಅಥವಾ ಮುಟ್ಟಿದರೆ ಮೈಲಿಗೆಯಾಗುತ್ತದೆ ಎಂಬ ನಂಬಿಕೆಯಾಗಿದೆ.

೫೮. ಶವಸಂಸ್ಕಾರವನ್ನು ಕಡ್ಡಾಯವಾಗಿ ಮಾಡಲೇಬೇಕು: ಯಾವುದೇ ಸಮಯದಲ್ಲಿ ಅಥವಾ ಮನೆಯಲ್ಲಿ ಯಾರಾದರೂ ಸತ್ತರೆ ಅಥವಾ ಸತ್ತಾಗ ಕಡ್ಡಾಯವಾಗಿ ಮೂರು ಅಥವಾ ಒಂಭತ್ತು ದಿನದಲ್ಲಿ ಸಿಹಿ ಪದಾರ್ಥ ಅಥವಾ ಬೇಟೆಯ ಕಾರ್ಯವನು ಮಾಡಬೇಕು ಈ ಕಾರ್ಯವನ್ನು ಮಾಡುವ ತನಕ ಮನೆಯಲ್ಲಿ ಯಾವುದೇ ಕಾರ್ಯಮಾಡುವಂತಿಲ್ಲ ಮಾಡದಿದ್ದರೆ ಒಳ್ಳೆಯದಾಗುವುದಿಲ್ಲವೆಂಬ ನಂಬಿಕೆ.

೫೯. ಹುತ್ತವನ್ನು ಬಳಸಬಾರದು: ಯಾಕೆಂದರೆ ಹುತ್ತದೇವರಿಗೆ ಸಮಾನ, ನಾಗರ ಪಂಚಮಿ ಹಬ್ಬದಲ್ಲಿ ಹುತ್ತಕ್ಕೆ ಹಾಲು ಹೂಯ್ಯುತ್ತಾರೆ. ಇನ್ನೊಂದು ರೀತಿಯಲ್ಲಿ ಹುತ್ತದಲ್ಲಿ ಹಾವುಗಳಿರುತ್ತವೆ. ಆದಕಾರಣ ಹುತ್ತಸುತ್ತ ಯಾರು ಕೂಡ ಓಡಾಡಬಾರದು. ಒಂದು ಪಕ್ಷ ಓಡಾಡಿದರೆ ಹಾವು ಕಡಿಯುವ ಸಾಧ್ಯತೆ ಇರುತ್ತದೆ ಎಂಬ ನಂಬಿಕೆ.

೬೦. ಯುಗಾದಿ ಹಬ್ಬದಂತಹ ಸಂದರ್ಭದಲ್ಲಿ ಅಮವಾಸೆ. ಆದನಂತರ ಎರಡು ಅಥವಾ ಮೂರನೆ ದಿನ ಚಂದ್ರನನ್ನು ನೋಡುತ್ತಾರೆ. ಆಗ ಚಂದ್ರನು ಎರಡು ಕಡೆಯಲ್ಲಿ ಸಮಾನ ರೀತಿಯಲ್ಲಿ

ಕಂಡರೆ, ಈ ವರ್ಷದಲ್ಲಿ ಕಾಳಿನ ಬೆಳೆ ಮತ್ತು ಹಣದ ಬೆಳೆ ಎರಡು ಸಮಾನ ರೀತಿಯಲ್ಲಿ ಬೆಳೆಯುತ್ತವೆ ಎಂಬ ನಂಬಿಕೆ ಜನಪದದಲ್ಲಿರುತ್ತದೆ.

೬೧. ಕಾರುಹುಣ್ಣಿಮೆಯ ಸಂದರ್ಭದಲ್ಲಿ ಹಳ್ಳಿಗಳಲ್ಲಿ ಸಾಮಾನ್ಯವಾಗಿ ಎಲ್ಲಾ ಸಮುದಾಯದವರು ಸೇರಿ ಎತ್ತುಗಳನ್ನು ಓಡಿಸುತ್ತಾರೆ. ಅಂತಹ ಸಂದರ್ಭದಲ್ಲಿ ಕಡುಕೆಂಪು ಮತ್ತು ಬಿಳಿ ಎತ್ತು ಬಂದರೆ ಅದರ ಬಣ್ಣದ ಆಧಾರದ ಮೇಲೆ ಈ ವರ್ಷ ಇಂತಹ ಬೆಳೆ ಬೆಳೆಯಬಹುದು ಎಂದು ಲೆಕ್ಕಹಾಕುತ್ತಾರೆ. ಮತ್ತು ಒಳ್ಳೆಯ ಆಸ್ತಿ ಉಳ್ಳವನು ಎತ್ತು ಬಂದರೆ ಬೆಳೆ ಚೆನ್ನಾಗಿ ಬೆಳೆಯಬಹುದು ಎಂಬ ನಂಬಿಕೆಯಾಗುತ್ತದೆ ಕಡಿಮೆ ಆಸ್ತಿವಂತಹ ಎತ್ತುಗಳು ಎಂದರೆ. ಈ ವರ್ಷ ಬೆಳೆ ಕಡಿಮೆಯಾಗುತ್ತದೆ ಎಂಬ ನಂಬಿಕೆಯು ತಲೆದೂರುತ್ತದೆ.

೬೨. ತೊನ್ನು ಮತ್ತು ಗರ್ಭಿಣಿ ಹೆಂಗಸರು ಸತ್ತರೆ ಅವರನ್ನು ಹೂಳಬಾರದು ಸುಡ ಬೇಕು: ಯಾಕೆಂದರೆ ತೊನ್ನು ಮತ್ತು ಗರ್ಭಿಣಿ ಹೆಂಗಸರನ್ನು ಊರಿನಲ್ಲಿ ಸತ್ತಾಗ ಕಡ್ಡಾಯವಾಗಿ ಸುಡಬೇಕು ಸುಡದಿದ್ದರೆ ಮಳೆಬರುವುದಿಲ್ಲವೆಂದು ನಂಬಿಕೆಯಾಗಿದೆ ಒಂದು ಪಕ್ಷ ಸುಡದೇ ಹೂಳಿದರು ಸಹಿತ ಮಳೆಯ ಬರದಿದ್ದರೆ ಅಂತಹ ಸಂದರ್ಭದಲ್ಲಿ ಅವರನ್ನು ತೆಗೆದು ಸುಡುತ್ತಾರೆ.

೬೩. ಅಮವಾಸ್ಯೆ ದಿನ ಹುಟ್ಟಿದ ಮಕ್ಕಳು ಕಳ್ಳರಾಗುತ್ತಾರೆ: ಯಾಕೆಂದ್ರೆ ಅಮವಾಸ್ಯೆ ದಿನ ತುಂಬಾ ಕತ್ತಲಿನಿಂದ ಕೂಡಿರುತ್ತದೆ. ಅಂತಃ ಸಂದರ್ಭದಲ್ಲಿ ಹೆಚ್ಚಾಗಿ ಕಳ್ಳರು ಬರುತ್ತಾರೆ. ಆದ ಕಾರಣ ಆ ದಿನ ಹುಟ್ಟಿದ ಮಕ್ಕಳು ಕಳ್ಳರಾಗುತ್ತಾರೆ ಎಂದು ನಂಬಿಕೆಯಾಗಿದೆ.

೬೪. ಸೂರ್ಯ ಮತ್ತು ಚಂದ್ರಗ್ರಹಣ ಇದ್ದರೆ ಆ ದಿವಸ ಮನೆಯಲ್ಲಿ ಗರ್ಭಿಣಿ ಹೆಂಗಸರು ಮನೆಯಲ್ಲಿ ಏನು ಕೆಲಸ ಮಾಡುವಂತಿಲ್ಲ ಮತ್ತು ಹೊರಗಡೆ ಬರುವಂತಿಲ್ಲ ಅಂದರೆ ತೊಂದರೆ ಯಾಗುತ್ತದೆ ಎಂದು ನಂಬಿಕೆ. ಯಾಕೆಂದರೆ ಗ್ರಹಣ ಸಂದರ್ಭದಲ್ಲಿ ಜನಪದರ ಪ್ರಕಾರ ಸರ್ಪವು ಸೂರ್ಯಗ್ರಹಣದ ಸಂದರ್ಭದಲ್ಲಿ ಸೂರ್ಯನನ್ನು ಮತ್ತು ಚಂದ್ರಗ್ರಹಣ ಸಂದರ್ಭದಲ್ಲಿ ಚಂದ್ರನನ್ನು ನುಂಗುತ್ತದೆ. ಆದ್ದರಿಂದ ಅಂತಹ ಸಮಯದಲ್ಲಿ ಪಕ್ಷದಿಂದ ಕೂಡಿರುತ್ತದೆ. ಇದರಿಂದ ಹುಟ್ಟಿದ ಮಕ್ಕಳಿಗೆ ಸಹ ತೊಂದರೆಯಾಗುತ್ತದೆ ಎರಡು ನಂಬಿಕೆಯಾಗಿದೆ. ಆದ್ದರಿಂದ ಅಂತಹ ಸಮಯದಲ್ಲಿ ತುಂಬಾ ಜಾಗರೂಕತೆಯಿಂದ ಇರುತ್ತಾರೆ.

೬೫. ಸಂಜೆ ಹೊತ್ತಲ್ಲಿ ಕಸವನ್ನು ಹೊರಗೆ ಹಾಕುವಂತಿಲ್ಲ ಒಂದು ಪಕ್ಷ ಹೊರಗೆ ಹಾಕಿದರೆ ಲಕ್ಷ್ಮಿ ಹೊರಗಡೆ ಹೋಗುತ್ತದೆ ಎಂಬ ನಂಬಿಕೆಯಾಗಿದೆ. ನಂಬಿಕೆ ಏನೆಂದರೆ ಸಂಜೆಯ ಸಮಯದಲ್ಲಿ ಹೊರಗಡೆ ಅಥವ ಮನೆಯ ಮುಂದೆ. ದನ ಕರುಗಳಿರುತ್ತವೆ. ಅಂತಹ ಸಮಯದಲ್ಲಿ ಕಸ ಹೊರಗಡೆ ಚಲ್ಲಿದರೆ ಆ ಕಸದಲ್ಲಿ ಸಣ್ಣ ಪುಟ್ಟಸೂಜಿ ಅಥವಾ ಮೊಳೆಗಳು ಇದ್ದರೆ ತೊಂದರೆಯಾಗುವ ಸಾಧ್ಯತೆ ಇರುತ್ತದೆ ಆದಕಾರಣ ಹೊರಗಡೆ ಹಾಕಬಾರದೆಂಬ ನಂಬಿಕೆಯಾಗಿದೆ.

೬೬. ಊರಿನಲ್ಲಿ ಯಾರಾದರು ಸತ್ತರೆ. ಅವರನ್ನು ಕಾಡಿಗೆ ಹೊಯ್ಯುವಾಗ ಮಂಡಕ್ಕಿ ವೀಳೆಯದೆಲೆ ಎಳ್ಳು. ನವಣೆ ಚಲ್ಲುತ್ತಾರೆ. ಯಾಕೆಂದರೆ ಸತ್ತವರು ಮತ್ತೆ ಊರಿಗೆ ದೆವ್ವ ಪಿಶಾಚಿಯಾಗಿ ಬಂದರೆ ಬಂದ ಸಂದರ್ಭದಲ್ಲಿ ಅವರು ಅವುಗಳನ್ನೆಲ್ಲಾ ಆರಿಸಿಕೊಂಡು ಬರಬೇಕು ಹಾಗೆ ಬಂದರೆ ಬರುವುದೊಳಗಾಗಿ ಬೆಳಗಾಗುತ್ತದೆ ಎಂದು ನಂಬಿಕೆಯಾಗಿದೆ.

೬೭. ಶುಭಕಾರ್ಯಗಳಿಗೆ ಹೋಗುವಾಗ ವಿಧವೆಯರು ಅಡ್ಡಬರಬಾರದು: ಅಂದ್ರೆ ವಿಧವೆಯರು ಅಡ್ಡ ಬಂದರೆ ಯಾವುದೇ ಕೆಲಸಗಳು ನಡೆಯುವುದಿಲ್ಲವೆಂಬ ನಂಬಿಕೆಯಾಗಿದೆ.

೬೮. ಶುಭಕಾರ್ಯಗಳಿಗೆ ಹೋಗುವಾಗ ಬೆಕ್ಕು ಅಡ್ಡಬರಬಾರದು: ಬೆಕ್ಕು ಅಡ್ಡಬಂದರೆ ಯಾವ ಕಾರ್ಯಗಳು ಯಶಸ್ವಿಯಾಗುವುದಿಲ್ಲ ಹಾಗೂ ಅಪಾಯ ಸಂಭವಿಸುವ ಸಾಧ್ಯತೆ ಇರುತ್ತದೆ ಎಂಬ ನಂಬಿಕೆಯಾಗಿದೆ.

## ೪.೪. ವಿಧಿ–ನಿಷೇಧಗಳು :

ವಿಧಿ–ನಿಷೇಧಗಳು ಎನ್ನುವ ಕಲ್ಪನೆಯನ್ನು ಇಂದು ಬಹಳ ವಿಶಾಲಾರ್ಥದಲ್ಲಿ ಬಳಸಲಾಗುತ್ತಿದೆ. ವಿಧಿ–ನಿಷೇಧಗಳು ಸಂವಿಧಾನವೆಂಬಂತೆ ನಿಯಮಗಳಾಗಿರುತ್ತವೆ. ಈ ನಿಯಮಗಳಿಗೆ ಬದ್ಧರಾಗಿಯೇ ಸಾಮಾಜಿಕ ವ್ಯವಸ್ಥೆಯಲ್ಲಿ ಜೀವಿಸುತ್ತಾರೆ. ಇವು ಒಂದು ಪರಂಪರೆಯಂತೆ ಬಳುವಳಿಯಾಗಿ ಬೆಳೆದು ಬಂದಿರುತ್ತದೆ. ಪರಿಸರಕ್ಕೆ ಅನುಗುಣವಾಗಿ ಕಾಲಕ್ಕೆ ತಕ್ಕಂತೆ ನಿಷೇಧಗಳು ಅನ್ವಯಿಸಲಾರವಾದರೂ, ಕೆಲವೊಂದನ್ನು ಕಡ್ಡಾಯ ನಿಯಮಗಳಾಗಿ ಪಾಲಿಸುತ್ತಾರೆ. ಕೆಲವು ಸಾಂಪ್ರದಾಯಿಕವಾಗಿ ಉಳಿಸಿಕೊಂಡಿರುವುದನ್ನು ಕಾಣಬಹುದು.

ಮಾನವನ ನಡತೆಯನ್ನು ರೂಪಿಸಲು ನಿಯಂತ್ರಿಸಲು ಸಮಾಜವನ್ನು ಸ್ಥಾಪಿಸಿರುವ ಕಟ್ಟು ಪಾಡುಗಳೇ ವಿಧಿನಿಷೇಧಗಳು. ನಿಷೇಧಗಳನ್ನು ಪ್ರಾಚೀನ ಸಮಾಜಗಳ ಅಲಿಖಿತ ಕಾನೂನು ಎಂದು ಕರೆಯಲಾಗಿದೆ. ಅಲಿಖಿತವಾದ ಕಾನೂನು ಕೋರ್ಟ್, ಪೋಲಿಸ್ ವ್ಯವಸ್ಥೆಗಳು ಇಲ್ಲದ ಕಾಲದಲ್ಲಿ ಸಮಾಜದ ವ್ಯವಸ್ಥೆಯನ್ನು ರೂಪಿಸುವ ಕಾನೂನು ರೀತಿಯಲ್ಲಿ ವಿಧಿ ನಿಷೇಧಗಳನ್ನು ಬಳಸುತ್ತಿದ್ದರು. ಇವು ಯಾವ ಸಂದರ್ಭದಲ್ಲಿ ಮನುಷ್ಯ ಏನನ್ನು ಮಾಡಬೇಕು ಮತ್ತು ಏನುನ್ನು ಮಾಡಬಾರದು ಎಂಬುದನ್ನು ತಿಳಿಸುತ್ತದೆ. ಈ ವಿಧಿ ನಿಷೇಧ ಎನ್ನುವ ಕಲ್ಪನೆಯನ್ನು ಇಂದು ಬಹಳ ವಿಶಾಲವಾದ ಅರ್ಥದಲ್ಲಿ ಬಳಸಲಾಗುತ್ತದೆ. ಅದನ್ನೆ ಇಂದು ಲೋಕರೂಢಿಗಳು ಸಂಪ್ರದಾಯಗಳು, ಸಂಸ್ಕಾರಗಳು, ನಂಬಿಕೆಗಳು, ಆಚರಣೆಗಳು ಕಾನೂನು ನಿರ್ಬಂಧಗಳು ಸಮಾರಂಭಗಳು, ಪದ್ಧತಿಗಳು ಶೋಭಾಚಾರಗಳು ಮತ್ತು ಲಿಖಿತಶಾಸನಗಳು ಮೊದಲಾದ ಎಲ್ಲಾ ಬಗೆಯ ಸಾಮಾಜಿಕ ನಿಯಮಗಳನ್ನು ಒಳಗೊಂಡಿರುವಂತೆ ವಿಧಿ ನಿಷೇಧಗಳನ್ನು ಬಳಸಲಾಗುತ್ತಿದೆ. ಇವು ಸಾಮಾಜಿಕ ನಡತೆಯ ನೀಲಿ ನಕಾಶೆಗಳಾಗಿ ಸಮಾಜ ಸದಸ್ಯರುಗಳು ನಿರೀಕ್ಷಿತ ನಡತೆ ಹೇಗಿರಬೇಕು? ಎಂಬುದರ ಜೊತೆಗೆ ಆದರ್ಶ ನಡತೆಯ ಬಗ್ಗೆಯೂ ಅವು ತಿಳಿಯ ಪಡಿಸುತ್ತವೆ. ಮಾನವ ನಿರ್ಮಿತ ಸಂಘ ಸಂಸ್ಥೆಗಳಿಗೆ

ಪಕ್ಷ ಪಂಗಡಗಳಿಗೆ ರಾಜ್ಯ ಸರ್ಕಾರಗಳಿಗೆ ಸಮಾಜ ಮತ್ತು ಸಮುದಾಯಗಳಿಗೆ ಆಧಾರ ಸ್ಥಂಭಗಳಾಗಿ ವಿಧಿ ನಿಷೇಧಗಳು ಕೆಲಸ ಮಾಡುತ್ತವೆ.

ಸಾಮಾಜಿಕ ಅಂಶಗಳಾದ ಲೈಂಗಿಕತೆ, ವಿವಾಹ, ಜನನ, ಋತುಮತಿ, ಹೆರಿಗೆ, ಆಹಾರ, ಮರಣ, ವೇಷಭೂಷಣ, ದೇವರು, ಜಾತ್ರೆ, ಹಬ್ಬ, ನಾಮಕರಣ, ವೃತ್ತಿ, ವಸತಿ, ನ್ಯಾಯ, ಕುಟುಂಬ ಮುಂತಾದ ಸಂಪ್ರದಾಯ ಮತ್ತು ನಂಬಿಕೆಗಳನ್ನು ಆಚರಣೆಗೆ ತರುವ ಮಾನವ ಸ್ವೇಚ್ಛಾಚಾರರ ಮೇಲೆ ಕಡಿವಾಣ ಹಾಕುವುದರ ಮೂಲಕ ಸಮೂಹದ ಅಸ್ತಿತ್ವಕ್ಕೆ ವಿಧಿ ನಿಷೇಧಗಳು ಸಹಕಾರಿಯಾಗಿವೆ. ಈ ವಿಧಿ ನಿಷೇಧಗಳು ಮಾನವನ ಸಾಮಾಜಿಕ ವ್ಯವಸ್ಥೆಗೆ ಭದ್ರತೆಯನ್ನು ಮತ್ತು ಸ್ಥಿರತೆಯನ್ನು ನೀಡುವುದರಿಂದ ವಾಲ್ಮೀಕಿ ಸಮುದಾಯ ಸಾಮಾಜಿಕ ಜೀವನ ಮತ್ತು ಧಾರ್ಮಿಕ ಆಚರಣೆಗಳಲ್ಲಿ ವಿಧಿ-ನಿಷೇಧಗಳಿಗೆ ಹೆಚ್ಚು ಮಹತ್ವಕೊಟ್ಟು ಅವುಗಳಿಗೆ ಬದ್ಧರಾಗಿ ನಡೆದುಕೊಳ್ಳುತ್ತಾರೆ. ಹುಟ್ಟಿನಿಂದ ಸಾವಿನವರೆಗೂ ಹಲವು ಬಗೆಯ ಕಟ್ಟು ನಿಟ್ಟಾದ ವಿಧಿ ನಿಷೇಧಗಳು ಈ ಸಮುದಾಯದಲ್ಲಿ ಕಂಡು ಬರುವುದರಿಂದ ವಿಧಿಗಳು ಮತ್ತು ನಿಷೇಧಗಳು ಎಂದು ಎರಡು ರೀತಿ ವಿಭಾಗ ಮಾಡಿದ್ದಾರೆ.

ವಿಧಿ: ಎಂದರೆ ಮಾಡಲೇಬೇಕಾದ ಆಜ್ಞೆ ಅಥವಾ ಅನುಸರಿಸಲೇಬೇಕಾದ ಮಾರ್ಗ ಈ ವಿಧಿ ಎಂಬ ಶಬ್ಧಕ್ಕೆ ನಿಯಮ ಆಜ್ಞೆ, ಅದೃಷ್ಟ, ಲಿಖಿತ, ಹಣೆಬರಹ ಎಂಬ ಅರ್ಥವಿದ್ದರೂ ಇಲ್ಲಿ ನಿಯಮಗಳು ಎಂಬ ಅರ್ಥದಲ್ಲಿ ಅಭ್ಯಸಿಸಬೇಕಾಗಿದೆ. ಈ ವಿಧಿ ನಿಯಮಗಳನ್ನು ನಿಶ್ಚಯಾತ್ಮಕ ನೈತಿಕ ನಿಯಮಗಳು ಎಂಬುದಾಗಿಯೂ ಕರೆಯಬಹುದು. ಇವು ನಮ್ಮ ನಡತೆ ಹೀಗೆಯೇ ಇರಬೇಕೆಂದು ನಾವು ಹೀಗೆಯೇ ಮಾಡಬೇಕೆಂದೂ ನಿಗದಿ ಪಡಿಸುತ್ತವೆ. ಮಾನವನ ಸಾಮಾಜಿಕ ಬದುಕಿಗೆ ದಾರಿ ದೀಪಗಳಾಗಿರುವುದರಿಂದ ಈ ವಿಧಿಗಳು ಸಮಾಜ ಮತ್ತು ಸಮೂಹ ಒಪ್ಪಿದ ನಿರೀಕ್ಷೆಗಳೇ ಆಗಿವೆ. ಒಂದು ಸಮುದಾಯದ ಕಡ್ಡಾಯ ಆಚರಣೆಗಳು ವಿಧಿಗಳಾಗಿ ಪರಿವರ್ತನೆ ಯಾಗುವುದರಿಂದ ಈ ಸಮುದಾಯಕ್ಕೆ ಸಂಬಂಧಪಟ್ಟ ಕಟ್ಟುನಿಟ್ಟಾದ ವಿಧಿ ನಿಯಮಗಳನ್ನು ಪಾಲಿಸುವುದು ಕಂಡುಬರುತ್ತದೆ.

ನಿಷೇಧ: ಭಯ ಮತ್ತು ಭಾವನಾ ಮೂಲವಾದ ಒಂದು ನಂಬಿಕೆಯನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸುವ ಅಥವಾ ಬಲಗೊಳಿಸುವಂತಹದು ನಿಷೇಧ. ಇದನ್ನು ಮಾಡಬಾರದು ಇದು ಕೆಡಕು ಸಾಮಾಜಿಕ, ಧಾರ್ಮಿಕ ಪ್ರತಿಬಂಧಕವೇ ನಿಷಿದ್ಧ ಎನ್ನಲಾಗುತ್ತದೆ. ಹೀಗಾಗಿ ಲಿಖಿತ ಕಾನೂನನ್ನು ಮೀರಿಸುವಂತ ಸಶಕ್ತಿ ನಿಬಂಧನೆಯಾಗಿ ನಿಷೇಧ ಕಾರ್ಯನಿರ್ವಹಿಸುತ್ತದೆ. ಒಂದು ಅರ್ಥದಲ್ಲಿ ಪವಿತ್ರ ಎಂದೂ ಇನ್ನೊಂದು ಮುಖದಲ್ಲಿ ನಿಷೇಧಕ್ಕೆ ಅಪಾಯ ಎನ್ನುವ ಅರ್ಥಗಳೂ ಇವೆ. ಮುಟ್ಟಲಾಗದ, ಅರ್ಥೈಸಲಾಗದ ಸಂಗತಿಗಳಿಗೂ ನಿಷೇಧಕ್ಕೂ ಹತ್ತಿರದ ಸಂಬಂಧವಿರುತ್ತದೆ. ಯಾಕೆಂದರೆ ಹಲವು ಸಂದರ್ಭಗಳಲ್ಲಿ ಭಯವೇ ನಿಷೇಧಕ್ಕೆ ಮೂಲವಾಗಿರುತ್ತದೆ. ಸಕಾರಾತ್ಮಕ ಆಚರಣೆಗಳಿರುವಂತೆ ನಕಾರಾತ್ಮಕವಾದುವೂ ಉಂಟು. ಸಕಾರಾತ್ಮಕವಾದುವನ್ನು ಮಂತ್ರವಿಧಿಗಳೆಂದೂ

ನಕರಾತ್ಮಕವಾದುದುನ್ನು ನಿಷೇಧಗಳೆಂದು ಕರೆಯಬಹುದು. ಮಂತ್ರ ವಿಧಿಗಳು ಮಾಡಬಹುದಾದದ್ದನ್ನು ತಿಳಿಸಿದರೆ ನಿಷೇಧಗಳು ಮಾಡಬಾರದ್ದನ್ನು ಉಲ್ಲೇಖಿಸುತ್ತವೆ. ತಪ್ಪು ಒಪ್ಪುಗಳ ಪ್ರಜ್ಞೆ ಎಂದು ಹೇಳಬಹುದಾದ ಆತ್ಮಸಾಕ್ಷಿಯ ಮೇಲೆ ನಿಷೇಧ ಬೆಳಕು ಚಲ್ಲುತ್ತದೆ. ನಿಷೇಧ ತನ್ನ ಸಹಜ ಅರ್ಥದಲ್ಲಿ ಆತ್ಮ ಸಾಕ್ಷಿಯಾಗಿ ಬಳಸಲ್ಪಟ್ಟಾಗ ಅದನ್ನು ನಿಷೇಧಿತ ಪ್ರಜ್ಞೆ ಎಂದೂ ಸಹಜ ಅರ್ಥಕ್ಕೆ ಧಕ್ಕೆ ಒದಗಿದಾಗ ಅಪರಾಧ ಪ್ರಜ್ಞೆ ಎಂದು ಕರೆಸಿಕೊಳ್ಳುತ್ತದೆ. ಅಂದರೆ ನಿಷೇಧ ಆತ್ಮಸಾಕ್ಷಿಯಿಂದ ಹುಟ್ಟುವ ಆಜ್ಞೆ. ಹೀಗಾಗಿ ನಿಷೇಧವನ್ನು ಮುರಿದಾಗ ಅಪರಾಧಿ ಪ್ರಜ್ಞೆ ತೀವ್ರವಾಗುತ್ತದೆ.

ನಿಷೇಧದ ಹಿಂದೆ ಸಾಮಾಜಿಕ ನಿಯಮಗಳು ಇರುವುದರಿಂದ ನಿಷೇಧವನ್ನು ಮೀರುವುದೆಂದರೆ ಸಾಮಾಜಿಕ ನಿಯಮಗಳ ಉಲ್ಲಂಘನೆಯಾಗಿರುತ್ತದೆ. ಉಲ್ಲಂಘಿಸಲ್ಪಟ್ಟ ನಿಷೇಧವೇ ಸೇಡನ್ನು ತೀರಿಸಿಕೊಳ್ಳುತ್ತದೆ ಎಂದೇ ತಿಳಿಯಲಾಗುತ್ತದೆ. ಹೀಗಾಗಿ ಇಂತಹ ನಿಷೇಧವನ್ನು ಉಲ್ಲಂಘಿಸಿದರೆ ತೀವ್ರ ಅಪಾಯ ಉಂಟಾಗುತ್ತದೆ ಎನ್ನಲಾಗುತ್ತದೆ. ಕೆಲವುಸಮುದಾಯಗಳಲ್ಲಿ ಹೀಗೆ ನಿಷೇಧವನ್ನು ಮುರಿಯುವ ವ್ಯಕ್ತಿಯನ್ನು ಅಪವಿತ್ರ ಎಂದು ತಿಳಿಯಲಾಗುತ್ತದೆ ಮತ್ತು ಆತನಿಗೆ ಶಿಕ್ಷೆ ವಿಧಿಸಲಾಗುತ್ತದೆ. ಹೀಗೆ ಶಿಕ್ಷೆಗೊಳಗಾದ ವ್ಯಕ್ತಿ ಮತ್ತು ಪರಿಶುದ್ಧ ಎನಿಸುತ್ತಾನೆ. ನಿಷೇದವನ್ನು ಉಲ್ಲಂಘಿಸಿದವನಿಗೆ ಸಮಾಜದಲ್ಲಿ ವಿರುದ್ಧ ವ್ಯಕ್ತಿ ಆಗಿ ಬಿಡುವ ಸಾಧ್ಯತೆಯೂ ಇದೆ. ನಿಷೇಧ ಹಲವು ಉದ್ದೇಶಗುರಿಗಳನ್ನು ಇಟ್ಟುಕೊಂಡು ಬಳಕೆಗೆ ಬಂದಿದೆ. ಮನುಷ್ಯನನ್ನು ತೀವ್ರವಾಗಿ ಕಾಡಿದ ಸಾವು ಹಾಗೂ ಆ ಕುರಿತು ಕಟುವಾಗಿರುವ ವ್ಯಾಪಕವಾಗಿರುವ ನಿಷೇಧಗಳು ಆಯಾ ಸಾಮಾಜಿಕ ಸಾಂಸ್ಕೃತಿಕ ನೆಲಗಳಲ್ಲಿ ವಿಭಿನ್ನವಾಗಿವೆ. ನಂಬಿಕೆಯಲ್ಲಿ ಮೂಡಿ ಬಂದ ನಿಷೇಧಗಳು ಸಾಮಾಜಿಕ ರೀತಿ ರಿವಾಜನ್ನು ರೂಪಿಸುವ ಮತ್ತು ಕಾಪಾಡುವ ಶಕ್ತಿಗಳಾಗಿವೆ. ಆದ್ದರಿಂದ ಕೆಲವು ನಿಷೇಧಗಳನ್ನು ಕೆಳಗೆ ತಿಳಿಸಲಾಗಿದೆ.

ಮರಿಯಮ್ಮನಹಳ್ಳಿಯಲ್ಲಿನ ಜನರು ತಮ್ಮದೇ ಆದ ವಿಧಿ ನಿಷೇಧಗಳನ್ನು ಅಳವಡಿಸಿಕೊಂಡು ಬಂದಿದ್ದಾರೆ.

೧. ಬ್ರಾಹ್ಮಣ ಮಹಿಳೆಗೆ ಮೊದಲು ಗಂಡಾದರೆ ಆ ಮಗು ಮದುವೆ ಆಗುವವರೆಗೂ ಹಸಿರು ಸೀರೆ ಕುಬಸ ತೊಡುವತಿಲ್ಲ.

೨. ಗಣಪನನ್ನು ತರುವಾಗ ಕಗಲ್ ಆರತಿ ಮಾಡಿಸಿಕೊಂಡು ತರಬೇಕು,

೩. ಅಗಸರು ಜೋಕುಮಾರನ ಹುಣ್ಣಿಮೆಯಲ್ಲಿ ಬಟ್ಟೆ ಒಗೆಯುವುದಕ್ಕೆ ಹೋಗುವುದಿಲ್ಲ, ಆರತಿ ಮಾಡುವಾಗ ಬಟ್ಟೆಯನ್ನು ಹಾಕಿರಬೇಕು,

೪. ಸತ್ತ ಮನೆಯಲ್ಲಿ ತಿಥಿಕಾರ್ಯ ಮಾಡುವವರಿಗೆ ಸಿಹಿ ಅಡುಗೆ ಇರುವುದಿಲ್ಲ.

೫. ಒಂದು ವರ್ಷದ ಒಳಗೆ ಶುಭಕಾರ್ಯ ಮಾಡಬೇಕು ಇಲ್ಲವೆ ಮೂರು ವರ್ಷದವರೆಗೆ ಮಾಡಬಾರದು.

೬ ಬ್ರಾಹ್ಮಣರು, ವೈಶ್ಯರರ ಮನೆಯಲ್ಲಿ ಒಂದು ವರ್ಷದವರೆಗೆ ಪ್ರಾಣ ದೇವರ ಪೂಜೆ ನಿಷೇಧ.

೭. ಮನೆಯಲ್ಲಿ ಒಡೆದ ಕನ್ನಡಿ ಇರಬಾರದು.

೮. ತಂದೆ, ತಾಯಿ ಇರುವ ಬ್ರಾಹ್ಮಣ, ವೈಶ್ಯರು ಶವಸಂಸ್ಕಾರಕ್ಕೆ ಹೋಗುವಂತಿಲ್ಲ.

೯. ಬ್ರಾಹ್ಮಣರು ವೈಶ್ಯರು ಪಿಂಡ ಬಿಡುವಾಗ ಉಂಗುರ ಇಟ್ಟುಕೊಳ್ಳಬಾರದು.

೧೦. ಅಂಗಡಿಯಿಂದ ಉಪ್ಪು, ಎಣ್ಣೆ ತರಬಾರದು.

೧೧. ಈ ಊರಿನ ದುರ್ಗಮ್ಮನ ಜಾತ್ರೆಗೆ ನಾಣಿಕೇರಿ ಹರಿಜನರು ಹೋಗುವಂತಿಲ್ಲ ಹೋದರೆ ಅನಾಹುತ ಆಗುತ್ತದೆ.

೧೨. ಆಷಾಡದಲ್ಲಿ ದೇವರುಗಳಿಗೆ ಕಾಯಿ ಒಡೆಸುವಂತಿಲ್ಲ.

೧೩. ನಾಣಿಕೇರಿ ಹರಿಜನರು ಊರಿನ ನಾಣಿಕೇರಪ್ಪ ಜಾತ್ರೆ ಸಮಯದಲ್ಲಿ ಮಾಂಸದ ಅಡುಗೆ ಮಾಡುವಂತಿಲ್ಲ.

೧೪. ವಿದುವೆಯರು ಗಂಡಹೆಂಡತಿ ಇರುವ ಮನೆಗೆ ಬಂದು ಕಣ್ಣೀರು, ಹಾಕಬಾರದು.

೧೫. ಹಿರಿಯರಿಗೆ ಗೌರವ ಕೊಡಬೇಕು.

೧೬. ಮದುವೆಯ ಸಂದರ್ಭದಲ್ಲಿ ಕಡ್ಡಾಯವಾಗಿ ಮನೆಯ ಮುಂದೆ ಚಪ್ಪರವನ್ನು ಹಾಕಬೇಕು.

೧೭. ಮದುಮಗಳು ಮದುವೆಯ ಸಮಯದಲ್ಲಿ ಗರ್ಭಿಣಿಯಾದ ಹೆಣ್ಣು ಮಕ್ಕಳು ಹಸಿರು ಬಳೆಗಳನ್ನು ಕಡ್ಡಾಯವಾಗಿ ತೊಟ್ಟಿರಬೇಕು.

೧೮. ತೆರವು ಕೊಟ್ಟು ಹೆಣ್ಣು ತರಬೇಕು.

೧೯. ಮೂಹರ್ತಕ್ಕೆ ವಧು ಮತ್ತು ವರನನ್ನು ಸೋದರ ಮಾವನೇ ಕರೆದುಕೊಂಡು ಬರಬೇಕು

೨೦. ಸತ್ತ ಮಾತಾ - ಪಿತೃಗಳ ದಿನ ಕರ್ಮಗಳನ್ನು ಮಾಡಬೇಕು.

೨೧. ಮಗುವಿನ ನಾಮಕರಣದಲ್ಲಿ ಸೋದರತ್ತೆ ಮತ್ತು ಸೋದರ ಮಾವನವರೇ ನಾಮಕರಣ ಮಾಡಬೇಕು.

೨೨. ಶುಭಕಾರ್ಯದಲ್ಲಿ ಗಂಡಸರು ಮತ್ತು ಹೆಂಗಸರು ಕಡ್ಡಾಯವಾಗಿ ತಲೆಯ ಮೇಲೆ ಪೇಟ ಮತ್ತು ಸೆರಗನ್ನು ಹಾಕಿಕೊಳ್ಳಬೇಕು.

೨೩. ತಳಿ ನೋಡಿ ಎತ್ತು ತರಬೇಕು

೨೪. ದೇವರ ಪೂಜೆಯನ್ನು ಇಂತಹ ಗೋತ್ರದವರೇ ಮಾಡಬೇಕು

೨೫. ಗಂಗೆಯ ಪೂಜೆಯನ್ನು ಕಡ್ಡಾಯವಾಗಿ ಮಾಡಲೇಬೇಕು.

೨೬. ಹಂದಿ ಮತ್ತು ದನವನ್ನು ತಿನ್ನಬಾರದು

೨೭. ಸೋಮವಾರ ಎತ್ತಿನ ಹೆಗಲ ಮೇಲೆ ನೊಗ ಇಡಬಾರದು

೨೮. ಶುಭಕಾರ್ಯಕ್ಕೆ ಮೂರು ಜನ ಹೋಗಬಾರದು

೨೯. ಒಂದೇ ಗೋತ್ರಕ್ಕೆ ಸೇರಿದವರು ಪರಸ್ಪರ ವಿವಾಹವಾಗಬಾರದು

೩೦. ಊಟದ ತಟ್ಟೆಯನ್ನು ದಾಟಬಾರದು

೩೧. ಹಬ್ಬ ಹರಿದಿನಗಳ ಸಂದರ್ಭದಲ್ಲಿ ದಾಸಯ್ಯ ಮೊದಲು ಪೂಜೆ ಮಾಡಬೇಕು. ಪೂಜೆ ಮಾಡುವತನಕ ಯಾವುದೇ ಕಾರ್ಯ ಮಾಡುವಂತಿಲ್ಲ.

೩೨. ದೇವರ ಮುಂದೆ ಸುಳ್ಳು ಹೇಳಬಾರದು.

೩೩. ಬಿಲ್ವಪತ್ರೆ – ಬನ್ನಿ ಮತ್ತು ಬೇವಿನ ಉರುವವನ್ನು ಒಲೆಯಲ್ಲಿ ಇಡಬಾರದು.

೩೪. ಸಂಜೆ ಹೊತ್ತಲ್ಲಿ ಕಸ ಹೊರಗೆ ಚಲ್ಲಬಾರದು

೩೫. ಸೂತಕದ ಮನೆಯಲ್ಲಿ ಊಟ ಮಾಡಬಾರದು

೩೬. ದೇವರಿಗೆ ಅಂಟು ಮುಟ್ಟು ಮಾಡಬಾರದು.

೩೭. ಅಂತರ್ ಜಾತಿಯ ವಿವಾಹಕ್ಕೆ ಅವಕಾಶವಿಲ್ಲ

೩೮. ರಾಶಿಕಣದಲ್ಲಿ ಚಪ್ಪಲಿ ಹಾಕಬಾರದು

೩೯. ಒಲೆಯನ್ನು ಕಾಲಿನಿಂದ ಬರೆಯಬಾರದು.

# ಅಧ್ಯಾಯ – ೫

## ಆರ್ಥಿಕ ಜೀವನ

ಮರಿಯಮ್ಮನಹಳ್ಳಿ ಗ್ರಾಮ ಅಧ್ಯಯನದ ಸಂದರ್ಭದಲ್ಲಿ ಒಂದು ಗ್ರಾಮದ ಅಭಿವೃದ್ಧಿಯನ್ನು ಅದರ ಸ್ಥಿತಿಗತಿಯನ್ನು ತಿಳಿಯುವಲ್ಲಿ ಆ ಗ್ರಾಮದಲ್ಲಿರುವ ಹಲವು ಸಮುದಾಯಗಳ ಆರ್ಥಿಕ ಜೀವನವನ್ನು ಗಮನಿಸಬೇಕಾಗುತ್ತದೆ. ಮರಿಯಮ್ಮನ ಹಳ್ಳಿಯ ಆರ್ಥಿಕ ಸ್ಥಿತಿಗತಿಯನ್ನು ವಿವರಿಸುವಾಗ ಈ ಗ್ರಾಮದಲ್ಲಿ ವಾಸಿಸುವ ಹಲವು ಸಮುದಾಯಗಳನ್ನು ಇಟ್ಟುಕೊಂಡು ಗ್ರಾಮದ ಒಂದು ಆರ್ಥಿಕ ಜೀವನದ ಚಿತ್ರಣವನ್ನು ಕಟ್ಟಿಕೊಡುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ.

ಈ ಗ್ರಾಮದ ಒಂದೊಂದು ಸಮುದಾಯವನ್ನು ಅವಲೋಕಿಸುವಾಗ, ಒಂದು ಸಮುದಾಯದ ಬದುಕಿನ ಎಲ್ಲ ವಿವರಗಳು ರೂಪುಗೊಳ್ಳುವುದು ಆ ಸಮುದಾಯ ಯಾವ ಬಗೆಯ ಉತ್ಪಾದನಾ ಚಟುವಟಿಕೆಯಲ್ಲಿ ಪಾಲ್ಗೊಂಡಿದೆ ಎಂಬುದನ್ನು ಗಮನಿಸಬೇಕು. ಅಂದರೆ ಆರ್ಥಿಕ ಚಟುವಟಿಕೆಗಳು ಸಮುದಾಯವೊಂದರ ಬದುಕಿನ ಗಡಿಯನ್ನು ನಿರ್ದೇಸಿಸುತ್ತವೆ. ನಾವು ಇಂದು ಗುರುತಿಸುವ ಪ್ರತಿಯೊಂದು ಸಾಂಸ್ಕೃತಿಕ ಘಟಕವು ತನ್ನ ಅನನ್ಯತೆಯನ್ನು ಉಳಿಸಿಕೊಂಡಿರುವುದು ತನ್ನ ಉತ್ಪಾದನಾ ಚಟುವಟಿಕೆಯ ಮೇಲೆಯೇ. ಒಂದು ಸಮುದಾಯದ ಅಧ್ಯಯನವೆಂದರೆ ಅದರ ಆರ್ಥಿಕ ಚಟುವಟಿಕೆಗಳ ರೂಪಾಂತರಗಳ ಅಧ್ಯಯನವೇ ಆಗಿದೆ. ಹೀಗೆ ಗ್ರಾಮದಲ್ಲಿ ವಾಸಿಸುವ ಹತ್ತು ಹಲವು ಸಮುದಾಯಗಳ ಜನರ ಆರ್ಥಿಕ ಜೀವನವನ್ನು ಗಮನಿಸುತ್ತ, ಹಿಂದೆ ಒಂದು ಹಳ್ಳಿಯಲ್ಲಿದ್ದಂತೆ ಆರ್ಥಿಕ ಚಟುವಟಿಕೆಗಳ ಪರಿಸರಕ್ಕೆ ಇಂದು ಬದಲಾಗುತ್ತಿರುವ ಜಾಗತೀಕರಣ ಆಧುನಿಕರಣದ ಪರಿಸರಕ್ಕೆ ಒಂದು ಗ್ರಾಮದ ಜನಜೀವನವು ಹೇಗೆ ಬದಲಾಗುತ್ತದೆ. ತನ್ನಲ್ಲಿ ತನ್ನ ಸುತ್ತಲೂ ಬೆಳೆಯುತ್ತಿರುವ ನಗರ ಪರಿಸರದ ಪ್ರಭಾವಕ್ಕೆ ಹೇಗೆ ಒಂದು ಗ್ರಾಮವು ಭರದಿಂದ (ಬೇಗನೆ) ಬದಲಾವಣೆಯತ್ತ ಮುಖಮಾಡಿ ತನ್ನ ಪಾರಂಪರಿಕ ಉದ್ಯೋಗ ಜೀವನದಿಂದ ಕಳಚುತ್ತ

ಹೊಸ ಉದ್ಯೋಗಳಿಗೆ ವಾಲುತ್ತಿದೆ. ಹೀಗೆ ಈ ರೀತಿಯ ದೃಷ್ಟಿಕೋನದಿಂದ ಇಲ್ಲಿ ಈ ಗ್ರಾಮದ ಆರ್ಥಿಕ ಜೀವನವನ್ನು ಕಟ್ಟಿಕೊಡಲು ಪ್ರಯತ್ನಿಸಿದ್ದೇನೆ.

ಮುಖ್ಯವಾಗಿ ಈ ಗ್ರಾಮದಲ್ಲಿ ಕಂಡು ಬರುವ ಸಮುದಾಯಗಳೆಂದರೆ ಬ್ರಾಹ್ಮಣರು, ಲಿಂಗಾಯಿತರು, ವಾಲ್ಮೀಕಿಗಳು, ವಡ್ಡರು, ಕುರುಬರು, ಮುಸ್ಲಿಂರು, ಕುಂಬಾರರು, ಗೋಸಾಯಿಗಳು, ಮಾದಿಗರು, ಜೈನರು, ಕ್ರೈಸ್ತರು, ಹೆಳವರು, ಕ್ಷೌರಿಕರು, ವಿಶ್ವಕರ್ಮ, ಬಾರಿಕರು, ಹೀಗೆ ಹಲವು ಸಮುದಾಯಗಳು ಈ ಗ್ರಾಮದಲ್ಲಿ ಕಂಡು ಬರುತ್ತವೆ. ಅವರ ಸಾಂಪ್ರದಾಯಿಕ ಉದ್ಯೋಗಗಳು ಮತ್ತು ಪ್ರಸ್ತುತದಲ್ಲಿ ಈ ಸಮುದಾಯದವರ ಸ್ಥಿತಿಗತಿಯನ್ನು ಕುರಿತು ಅವರ ಆರ್ಥಿಕ ಪರಿಸ್ಥಿತಿಯನ್ನು ಕುರಿತು ಗಮನಿಸುವ ಪ್ರಯತ್ನವನ್ನು ಮಾಡಲಾಗಿದೆ. ಭಾರತ ಕೃಷಿ ಪ್ರಧಾನವಾದ ರಾಷ್ಟ್ರ. ಬಹುಪಾಲು ಜನರ ಮುಖ್ಯ ಉದ್ಯೋಗ ಕೃಷಿ. ಹಳ್ಳಿಗಳ ನಾಡಾಗಿರುವ ಭಾರತದಲ್ಲಿ ಕೃಷಿಯು ಮುಖ್ಯ ಉದ್ಯೋಗವಾಗಿದೆ. ಇಂದಿನ ಈ ಜಾಗತೀಕರಣದ ಹೊತ್ತಲ್ಲು ಎಷ್ಟೇ ವಿಜ್ಞಾನ ಮುಂದುವರೆದಂತ ಸಂದರ್ಭದಲ್ಲೂ, ನಮ್ಮ ನಾಡಿನಲ್ಲಿ ಕೃಷಿ ಇಂದಿಗೂ ಮಳೆಯಾಧಾರಿತವಾಗಿ ನಡೆಯುತ್ತಿದೆ. ಮಳೆ ಇಲ್ಲದೆ ಹಲವು ರೈತರು ಸಾಲಮಾಡಿ ತೀರಿಸಲಾರದೆ ಆತ್ಮಹತ್ಯಗಳು ನಡೆಯುತ್ತಿರುವುದನ್ನು ಗಮನಿಸಿದರೆ ಮಳೆ ನೀರಿನ ಸಮಸ್ಯೆಯ ಅರಿವು ಗಮನಕ್ಕೆ ಬರುತ್ತದೆ. ಮರಿಯಮ್ಮನ ಹಳ್ಳಿ ಗ್ರಾಮವನ್ನು ಗಮನಿಸಿದರೆ ಇಲ್ಲಿಯೂ ಬಹುಪಾಲು ಜನರ ಜೀವನ ಕೃಷಿಯನ್ನು ಅವಲಂಬಿಸಿರುವುದು ಕಂಡು ಬರುತ್ತದೆ. ಅದೂ ಮಳೆಯಾಧಾರಿತ ಕೃಷಿ. ಸುತ್ತಲೂ ಕೆರೆಗಳಿಂದ ಆವರಿಸಿರುವ ಮರಿಯಮ್ಮನ ಹಳ್ಳಿಯಲ್ಲಿ ಕೆರೆಗಳು ಸಹ ಮಳೆಯನ್ನು ಅವಲಂಬಿಸಿರುವುದನ್ನು ಗಮನಿಸಬೇಕಾಗುತ್ತದೆ. ಮಳೆ ಬಂದು ಕೆರೆಗಳು ತುಂಬಿದರೆ ಆ ನೀರನ್ನು ಕೃಷಿಗೆ ಬಳಸುವುದು. ಈ ಗ್ರಾಮದ ಬಹುಪಾಲು ಜನರ ಜೀವನಾಧಾರ ಕೃಷಿ. ಆದರೆ ಮಳೆ ಇಲ್ಲದಿರುವುದು ಹಾಗೂ ಅಷ್ಟು ಫಲವತ್ತಾದ ಭೂಮಿ ಇಲ್ಲದಿರುವುದು ಸಣ್ಣ ಪುಟ್ಟ ಕಲ್ಲುಗಳಿಂದ ಕೂಡಿರುವ ಈ ಸವಳು ಭೂಮಿಯಲ್ಲಿ ಬೆಳೆಯುವ ಬೆಳೆಗಳು ಸಹ ರೈತರಿಗೆ ಅಷ್ಟು ಗಳಿಕೆ ತರುವಂತ ಆದಾಯ ತರುವಂತ ಬೆಳೆಗಳಾಗಿರುವುದಿಲ್ಲ. ಮೆಕ್ಕೆಜೋಳ, ಶೇಂಗಾ, ಜೋಳ, ಸಾಮಾನ್ಯವಾಗಿ ಕಂಡು ಬರುವ ಬೆಳೆಗಳೆನ್ನಬಹುದು. ಹಾಗೆಯೇ ಡಣಾಯಕನ ಕೆರೆ ಸುತ್ತಲೂ ಕಬ್ಬು, ನೆಲ್ಲು ಬೆಳೆಯುವುದು ಕಂಡು ಬರುತ್ತದೆ. ಹೀಗೆ ಈ ಗ್ರಾಮದಲ್ಲಿ ಕೃಷಿಯ ಚಟುವಟಿಕೆಗಳು ಹೆಸರಿಗೆ ಮಾತ್ರ ನಡೆಯುತ್ತಿವೆಯೇನೋ ಎನಿಸುತ್ತದೆ. ಈ ಗ್ರಾಮದ ಶೇ ೬೦ರಷ್ಟು ಜನ ಕೃಷಿಯಲ್ಲಿ ತೊಡಗಿಕೊಂಡಿರುವುದನ್ನು ಕಾಣಬಹುದು. ಲಿಂಗಾಯಿತರು, ವೈಶ್ಯರು ಹೆಚ್ಚು ಕೃಷಿ ಭೂಮಿಯನ್ನು ಹೊಂದಿರುವ ಸಮುದಾಯಗಳು. ವಾಲ್ಮೀಕಿ, ಹಾಗೂ ಇತರ ಕೆಳ ಸಮುದಾಯಗಳು ಈ ಮೇಲ್ವರ್ಗದವರಿಂದ ಭೂಮಿಯನ್ನು ಪಡೆದು ಉಳುವುದು, ಕೃಷಿ ಕೂಲಿಕಾರರಾಗಿ, ಕಾರ್ಮಿಕರಾಗಿ ದುಡಿಯುವುದನ್ನು ಕಾಣಬಹುದು. ಹೀಗೆ ಒಂದು ಗ್ರಾಮದಲ್ಲಿ ಕೃಷಿ ಚಟುವಟಿಕೆ ಇದ್ದಾಗಲೂ ಪಾರಂಪರಿಕವಾಗಿ ನಡೆದು ಬಂದ ಇತರ ಉದ್ಯೋಗಗಳು ಈ ರೀತಿ ಇವೆ. ಮರಿಯಮ್ಮನಹಳ್ಳಿ ಗ್ರಾಮದಲ್ಲಿ ನಾರಾಯಣದೇವರ ಕೆರೆ ಮುಳುಗಡೆಯಾದಾಗ ಬಂದು ಸೇರಿದಂತ ಜನರಿಂದ ಈ ಗ್ರಾಮವು ವಿಸ್ತರಿಸಿಕೊಂಡು ಒಂದು ಹಳ್ಳಿಯ ರೂಪ ಪಡೆದು ಜನರು

ವಾಸಿಸುತ್ತ ವಲಸಿಗರಿಂದ ಕೂಡಿದ ಒಂದು ವಿಶಿಷ್ಟವಾದ ಚಹರೆಯನ್ನು ಪಡೆದಿರುವಂತ ಗ್ರಾಮ ಇದಾಗಿದೆ. ಈ ಗ್ರಾಮದಲ್ಲಿ ಕಂಡು ಬರುವ ಪಾರಂಪರಿಕ ಉದ್ಯೋಗಗಳು ಹಾಗೂ ಅವುಗಳ ಇಂದಿನ ಪರಿಸ್ಥಿತಿಯನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ.

## ೫.೧. ಪಾರಂಪರಿಕ ಉದ್ಯೋಗಗಳು :

### ಕುಂಕುಮ ತಯಾರಿಸುವುದು :

ಮರಿಯಮ್ಮನಹಳ್ಳಿಗೆ ವಲಸೆ ಬಂದವರಲ್ಲಿ ಕುಂಕಮ ತಯಾರಿಸುವವರು ಒಬ್ಬರು ಸುಮಾರು ನಾಲ್ಕು ಕುಟುಂಬಗಳು ಈ ಊರಿಗೆ ವಲಸೆ ಬಂದಿದ್ದಾರೆ. ಇವರನ್ನು 'ಬುಕ್ಕಿಟುಗಾರರು' ಎಂದು ಕೂಡ ಕರೆಯುತ್ತಾರೆ. ಬುಕ್ಕಿಟು ಎಂದರೆ ಬಂಡಾರ, ಕುಂಕುಮ, ಇವುಗಳನ್ನು ತಯಾರಿಸುವುದು ಇವರಿಗೆ ಪಾರಂಪರಿಕ ಕಲೆಯಾಗಿದೆ. ಈ ಮರಿಯಮ್ಮನಹಳ್ಳಿಗೆ ಬಂದು ನೆಲೆಸುವುದಕ್ಕಿಂತ ಮುಂಚಿನಿಂದಲೂ ಕುಂಕುಮ ತಯಾರಿಸಿ ಮಾರಾಟ ಮಾಡುತ್ತಿದ್ದರು ಅದನ್ನು ಇಲ್ಲಿ ಕೂಡ ಮುಂದುವರೆಸಿಕೊಂಡು ಬಂದಿದ್ದಾರೆ.

ಕುಂಕುಮದ ಜೊತೆ ಲೋಬಾನ, ಬಂಡಾರ ವಿಭೂತಿಯನ್ನು ಉತ್ಪಾದಿಸಿ ಮಾರುತ್ತಾರೆ. ಇವರು ಸಂತೆ, ಜಾತ್ರೆಗಳಿಗೆ, ಸುತ್ತಮುತ್ತಲಿನ ಹಳ್ಳಿಗಳಿಗೆ ಹೋಗಿ, ಮಾರಾಟ ಮಾಡುತ್ತಾರೆ.

### ತಯಾರಿಸುವ ವಿಧಾನ :

ಕುಂಕುಮ ತಯಾರಿಸಲು ಬೇಕಾಗುವ ಕಚ್ಚಾ ವಸ್ತುಗಳನ್ನು ಹೊಸಪೇಟೆ, ಬಳ್ಳಾರಿಗಳಿಂದ ತರುತ್ತಾರೆ. ಕುಂಕುಮಕ್ಕೆ ಕಡ್ಲಿಬೇಳೆ, ಬಣ್ಣ ಬೇಕಾಗುತ್ತದೆ. ಮೊದಲು ಕಡ್ಲಿಬೇಳೆಯನ್ನು ನೀರಿನಲ್ಲಿ ಹಾಕಿ ಕುದಿಸುತ್ತಾರೆ ಒಂದು ಹದಕ್ಕೆ ಬಂದನಂತರ ಅದಕ್ಕೆ ಬಣ್ಣ ಹಾಕುತ್ತಾರೆ ನಂತರ ಅದನ್ನು ಒಣಗಿಸಿ ಮೊದಲೆಲ್ಲಾ ರುಬ್ಬುತ್ತಿದ್ದರು. ಈಗ ಹಿಟ್ಟಿನ ಗಿರಣಿಗಳಿಗೆ ಹಾಕಿಸಿ ಪುಡಿ ಮಾಡುತ್ತಾರೆ. ನಂತರ ತಾಡುಪಾಲು ಹಾಸಿ ಈ ಕುಂಕುಮವನ್ನು ಬಿಸಿಲಿನಲ್ಲಿ ಒಣಗಲು ಹಾಕುತ್ತಾರೆ. ಒಂದು ಸಲಕ್ಕೆ ಒಂದು ಕ್ವಿಂಟಲ್ ಕುಂಕುಮ ತಯಾರಿಸುತ್ತಾರೆ. ಒಂದು ಕೆ.ಜಿ.ಗೆ ೩೫ರಿಂದ ೬೦ ರೂಪಾಯಿಯವರೆಗೆ ಬೆಲೆಯಿದೆ. ಇಂದು ಕುಂಕುಮ ಬಳಕೆ ಕಡಿಮೆಯಾಗಿರುವುದರಿಂದ ಇವರು ಕುಂಕುಮ ತಯಾರಿಸುವುದನ್ನು ಕಡಿಮೆ ಮಾಡಿದ್ದಾರೆ. ಕಾರ್ಖಾನೆಗಳಿಂದ ತಂದು ಮಾರಾಟ ಮಾಡುತ್ತಿದ್ದಾರೆ. ಆಧುನಿಕವಾದಂತಹ ಟಿಕ್ಕಳಿಯಂತಹ ಸಿದ್ದವಸ್ತುಗಳಿಂದ ಕುಂಕುಮದ ಬೇಡಿಕೆ ಕಡಿಮೆ ಆಗಿದೆ. ಇಂದು ಇವರು ಪಾರಂಪರಿಕವಾಗಿ ಬಂದಂತಹ ವೃತ್ತಿಯನ್ನು ಬಿಡಲಾಗದೆ, ಕಾರ್ಖಾನೆಗಳು ತಯಾರಿಸಿದ ಕುಂಕುಮವನ್ನು ತಂದು ಮಾರಾಟ ಮಾಡುತ್ತಿದ್ದಾರೆ.

### ಚಿತ್ರಕಾರರು (ಜೀನಗಾರರು) :

ನಾರಾಯಣ ದೇವರ ಕೆರೆಯಿಂದ ವಲಸೆ ಬಂದು ನೆಲೆನಿಂತ ಕುಟುಂಬಗಳಲ್ಲಿ ಚಿತ್ರಕಾರರು ಒಬ್ಬರು. ಇವರು ಪಾರಂಪರಿಕವಾಗಿ ನಡೆಸಿಕೊಂಡು ಬಂದ ಉದ್ಯೋಗವಾದ ಗೊಂಬೆ

ತಯಾರಿಸುವುದು, ಗಣೇಶನ ತಯಾರಿಸುವುದು ಮುಂತಾದ ಗುಡಿ ಕೈಗಾರಿಕೆಯನ್ನು ಇಂದಿಗೂ ಮುಂದುವರಿಸಿಕೊಂಡು ಬಂದಿದ್ದಾರೆ.

ಮೊದಲೆಲ್ಲಾ ಸೆಗಣಿಯಿಂದ ಮನಮೋಹಕ ಗೊಂಬೆಗಳನ್ನು ಮಾಡಿ ಅವನ್ನು ಸಂತೆಗಳಲ್ಲಿ ಮಾರುತಿದ್ದರು. ಹದಿನೈದು ವರ್ಷಗಳಿಂದ ಈಚೆಗೆ ಈ ಗೊಂಬೆ ಮಾಡಿ ಮಾರುವುದು ನಿಂತುಹೋಗಿದೆ. ಇವರು ದೇವಸ್ಥಾನಗಳಲ್ಲಿ ಇರುವ ಗೊಂಬೆಗಳಿಗೆ ಚಿತ್ರ ಬಿಡಿಸುವುದು ಮಾಡುತ್ತಾರೆ. ಅಲ್ಲದೇ ಕಟ್ಟಿಗೆ ಕೆಲಸಗಳಿಗೆ ಕುಡುಗೋಲು ಹಿಡಿ, ಬುಗುರಿ ಮುಂತಾದವುಗಳನ್ನು ಮಾಡುತ್ತಾರೆ.

ಗಣೇಶನ ವಿಗ್ರಹ ತಯಾರಿಸುವುದರಲ್ಲಿ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಪ್ರಸಿದ್ಧಿ ಪಡೆದಿದ್ದಾರೆ. ಗಣೇಶನ ವಿಗ್ರಹವನ್ನು ತಯಾರಿಸಲು ಗಣೇಶನ ಹಬ್ಬಕ್ಕಿಂತ ಮೂರು ತಿಂಗಳ ಮುಂಚೆಯೇ ತಯಾರಿ ನಡೆಸುತ್ತಾರೆ. ಸಮೀಪದ ಐಯ್ಯನ ಹಳ್ಳಿಯ ಕೆರೆಯಿಂದ ಮಣ್ಣು ತಂದು ಆ ಮಣ್ಣನ್ನು ಹದ ಮಾಡಿ ಅದಕ್ಕೆ ಪ್ಯಾರಿಸ್ ಆಫ್ ಪ್ಲಾಸ್ಟರ್‌ನಿಂದ ಸೇರಿಸಿ ಗಣೇಶನ ವಿಗ್ರಹವನ್ನು ಮಾಡುತ್ತಾರೆ. ಒಂದು ಅಡಿ, ಎರಡು ಅಡಿ, ಐದು ಅಡಿ, ಹತ್ತು ಅಡಿ ಎತ್ತರದ ವಿಗ್ರಹ ತಯಾರಿಸುತ್ತಾರೆ. ಇದಲ್ಲದೆ ಮಣ್ಣೆತ್ತಿನ ಅಮವಾಸ್ಯೆಯಲ್ಲಿ ಬಸವಣ್ಣನ ಪೂಜೆ ಮಾಡಲು ಬೇಕಾಗುವ ಮಣ್ಣಿನ ಬಸವಣ್ಣನನ್ನು ತಯಾರಿಸುತ್ತಾರೆ. ಜೋಡಿ ಬಸವಣ್ಣ, ಎರಡು ಮುಖದ ಬಸವಣ್ಣ, ದನಗಾಹಿ ಹುಡುಗ, ವ್ಯಾಪಾರಿ, ವೈಶ್ಯ ಇಂತಹ ಮಣ್ಣಿನ ವಿಗ್ರಹವನ್ನು ತಯಾರಿಸುತ್ತಾರೆ.

ಬೆನಕಪ್ಪ, ಬಕ್ಕಮ್ಮ, ಲೋಕಪ್ಪ, ವೀರಾಂಜನಿ, ರಾಮಾಂಜನಿ ಈ ಕುಟುಂಬದವರು. ಪಾರಂಪರಿಕವಾಗಿ ಬಂದಂತಹ ವೃತ್ತಿಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ.

**ಗೋಸಾಯಿಗಳು :**

ಮರಿಯಮ್ಮನಹಳ್ಳಿಯಲ್ಲಿ ವಲಸೆ ಬಂದು ನೆಲೆ ನಿಂತವರಲ್ಲಿ ಗೋಸಾಯಿಗಳು ಒಬ್ಬರು ಇವರ ಪಾರಂಪರಿಕವಾದಂತ ವೃತ್ತಿ ಗಂಧದ ಎಣ್ಣೆ ಮಾರುವುದು ಮತ್ತು ಸೋಫಾಗಳನ್ನು ಮಾಡುವುದು.

ಗೋಸಾಯಿಗಳಲ್ಲಿ ಇಂದಿಗೂ ಕೆಲವರು ಗಂಧದ ಎಣ್ಣೆ ಮಾರುತ್ತಾರೆ. ಇವರು ಗಂಧದ ಎಣ್ಣೆಯನ್ನು ಎಲ್ಲಿಂದ ತರುತ್ತಾರೆ ಎಂಬುದನ್ನು ಯಾರಿಗೂ ಹೇಳುವುದಿಲ್ಲ. ಐದು, ಹತ್ತು ರೂಪಾಯಿಗಳಲ್ಲಿ ಗಂಧದ ಎಣ್ಣೆಯನ್ನು ನೀಡುತ್ತಾರೆ. ಇವರ ಮತ್ತೊಂದು ಉದ್ಯೋಗವಾದ ಸೋಫಾಸೆಟ್ಟನ್ನು ತಯಾರಿಸುವುದು. ಇವರ ಸಮುದಾಯದಲ್ಲಿ ಬಹುತೇಕರು ಈ ಕುಷನ್ ವರ್ಕ್ಸ್‌ನ್ನು ಮಾಡುತ್ತಾರೆ. ಗಂಡ–ಹೆಂಡತಿ, ಮಕ್ಕಳು ಹೀಗೆ ಎಲ್ಲರೂ ಈ ಗುಡಿ ಕೈಗಾರಿಕೆ ಕೆಲಸದಲ್ಲಿ ನಿರತರಾಗಿರುತ್ತಾರೆ. ದೂರದ ಊರುಗಳಾದ ಗೋವಾ, ಮಹಾರಾಷ್ಟ್ರ ಮುಂತಾದ ರಾಜ್ಯಗಳಿಗೆ ಹೋಗಿ ಸೋಫಾ ಸೆಟ್ಟನ್ನು ಮಾಡುತ್ತಾರೆ. ಒಂದು ಸೋಫಾಸೆಟ್ಟನ್ನು ಮಾಡಿದರೆ ನಾಲ್ಕರಿಂದ ಐದು ಸಾವಿರ ರೂಪಾಯಿ ಸಿಗುತ್ತದೆ. ಇವರು ಊರಲ್ಲಿ ಇರದೆ ದೂರದ ಊರುಗಳಿಗೆ ಪ್ರಯಾಣ ಮಾಡುತ್ತಾರೆ.

ಗೋಸಾಯಿಗಳಲ್ಲಿ ಕೆಲವು ಹುಡುಗರು, ಮಹಿಳೆಯರು ಪ್ಲಾಸ್ಟಿಕ್ ಕೊಡಗಳು ಸೀಳಿದ್ದರೆ, ತೂತು ಬಿದ್ದರೆ ಅವುಗಳಿಗೆ ಪ್ಯಾಚ್ ಹಾಕುವ ಕೆಲಸ ಮಾಡುತ್ತಾರೆ.

**ಕೊರವರು: ಕಸಬರಿಗೆ ತಯಾರಿಕೆ :**

ಪಾರಂಪರಿಕವಾಗಿ ಮಾಡಿಕೊಂಡು ಬಂದಂತಹ ವೃತ್ತಿಯಾದ ಕಸಬರಿಕೆ ತಯಾರಿಸುವುದು ಕೊರವರದು. ಇವರು ಮೊದಲಿನಿಂದಲೂ ಕಸಬರಿಕೆ, ಸಗಣಿ ಪುಟ್ಟಿ, ಚಕ್ಕಡಿ ಬಂಡಿಗೆಬೇಕಾದ ತಟ್ಟೆಗಳನ್ನು ಕಲಾತ್ಮಕವಾಗಿ ಕಟ್ಟುವ ಕೆಲಸವನ್ನು ಮಾಡುತ್ತಾರೆ.

ಸುತ್ತ ಮುತ್ತಲಿನ ಅಡವಿಗಳಲ್ಲಿ ಸಿಗುವ ಈಚಲು ಮರದ ಈಚಲಗರಿಯನ್ನು ತಂದು ಅದನ್ನು ನೀರಿನಲ್ಲಿ ನೆನೆಯಲು ಇಟ್ಟು ಅವುಗಳನ್ನು ತಮಗೆ ಬೇಕಾದ ರೀತಿ ಆಕಾರಕ್ಕೆ ಬರುವಂತೆ ಮಾಡಿಕೊಂಡು ಕಸಬರಿಗೆ, ಪುಟ್ಟಿಗಳನ್ನು ತಯಾರಿಸುತ್ತಾರೆ. ಮರಿಯಮ್ಮನಹಳ್ಳಿ ಮತ್ತು ಸುತ್ತಮುತ್ತಲಿನ ಹಳ್ಳಿಗಳಿಗೆ ಹೋಗಿ ಮಾರಿಕೊಂಡು ಬರುತ್ತಾರೆ.

ಕಸಬರಿಕೆ ತಯಾರಿಕೆ ಮಾಡುವುದರಿಂದ ಇವರ ಜೀವನ ನಡೆಯುವುದಿಲ್ಲ. ಅದಕ್ಕಾಗಿ ಇವರು ಕೂಲಿ ಕೆಲಸಗಳಿಗೆ ಹೋಗುತ್ತಾರೆ, ಮೈನ್ಸ್‌ನಲ್ಲಿ, ಕಟ್ಟಡ ಕಾರ್ಮಿಕರಾಗಿ ಕೆಲಸ ಮಾಡುತ್ತಾರೆ.

**ಮೇದಾರರು: ಬಿದಿರು ತಯಾರಿಕೆ :**

ಪಾರಂಪರಿಕವಾಗಿ ವೃತ್ತಿಯನ್ನು ಮುಂದುವರಿಸಿಕೊಂಡು ಬಂದವರಲ್ಲಿ ಮೇದಾರರು ಒಬ್ಬರು. ಮರಿಯಮ್ಮನಹಳ್ಳಿಯಲ್ಲಿ ಎರಡು ಕುಟುಂಬಗಳು ನೆಲೆನಿಂತಿವೆ. ಇವರ ಮೂಲಕಸಬು ಮೇದಾರಿಕೆಯಾಗಿದೆ.

ಪುಟ್ಟಿ, ಮರ, ಬೀಸಣಿಕೆ, ತಟ್ಟೆಗಳು, ಬಿದಿರಿನ ಚಪ್ಪರ, ಬಿದಿರಿನ ಮಂಚ, ಬಿದಿರಿನ ಬಾಗಿಲು ತಯಾರಿಸುತ್ತಾರೆ. ಶಿವಮೊಗ್ಗದಿಂದ, ಆಂಧ್ರದಿಂದ ಬಿದಿರುಗಳನ್ನು ತರಿಸುತ್ತಾರೆ. ತರಿಸಿದಂತ ಬಿದುಗಳನ್ನು ಊರಿನ ಸಮೀಪದ ವಡ್ನಾಳ್‌ನಲ್ಲಿ ನೆನೆ ಇಡುತ್ತಾರೆ. ಮೂರು ನಾಲ್ಕು ದಿನಗಳವರೆಗೆ ಹಾಗೆ ಬಿಟ್ಟು ನಂತರ ಅವನ್ನು ಒಣಗಿಸಿ ತಮಗೆ ಬೇಕಾದ ರೀತಿಯಲ್ಲಿ ಪುಟ್ಟಿ ಮರ, ಬೀಸಣಿಕೆ ತಯಾರಿಸುತ್ತಾರೆ.

**ಸುಣ್ಣ ತಯಾರಿಸುವುದು :**

ಗುಡಿ ಕೈಗಾರಿಕೆಗಳಲ್ಲಿ ಒಂದಾದ ಸುಣ್ಣ ತಯಾರಿಸುವುದು ಮರಿಯಮ್ಮನಹಳ್ಳಿಯಲ್ಲಿ ಕಂಡುಬರುತ್ತದೆ. ಊರಿನ ಹೊರಗಡೆ ಆರು ಸುಣ್ಣದ ಬಟ್ಟಿಗಳು ಕಂಡುಬರುತ್ತವೆ.

ಸುಣ್ಣ ತಯಾರಿಸಲು ಬೇಕಾದ ಕಚ್ಚಾ ವಸ್ತುಗಳಾದ ಕಲ್ಲನ್ನು ಸಮೀಪದ ತುಂಗಾಭದ್ರಾ ನದಿ ದಂಡೆಗೆ ಹೋಗಿ ತರುತ್ತಾರೆ. ತಂದ ಕಲ್ಲನ್ನು ಸುಣ್ಣದ ಬಟ್ಟಿಗೆ ಹಾಕುತ್ತಾರೆ. ಬಟ್ಟಿ ಕೆಳಗೆ ಇದ್ದಲು ಹಾಕಿ ಕಾಯಿಸುತ್ತಾರೆ. ಒಂದು ಹದಕ್ಕೆ ಬಂದ ನಂತರ ಅದನ್ನು ಹಾಗೆಯೇ ಬಿಟ್ಟು ಆರಿದ ನಂತರ ಸುಣ್ಣವನ್ನು ತೆಗೆದುಕೊಂಡು ಹೋಗಿ ಮಾರುತ್ತಾರೆ.

ಮೊದಲೆಲ್ಲಾ ಹಬ್ಬದ ಸಂದರ್ಭಗಳಲ್ಲಿ ಸುಣ್ಣದ ಬೇಡಿಕೆ ಹೆಚ್ಚಾಗಿ ಇರುತ್ತಿತ್ತು. ಆದರೆ ಈಗ ಕಂಪನಿಗಳಿಂದ ಬಂದಂತಹ ಪೇಂಟ್‌ಗಳನ್ನು ಬಳಸುವುದರಿಂದ ಸುಣ್ಣಕ್ಕೆ ಬೇಡಿಕೆ ಕಡಿಮೆ ಆಗಿದೆ, ಸ್ಥಿತಿವಂತರು ಸುಣ್ಣವನ್ನು ಬಳಸುವುದು ಕಡಿಮೆ ಮಾಡಿದ್ದಾರೆ. ಆರ್ಥಿಕವಾಗಿ ಹಿಂದುಳಿದವರು ಈಗಲೂ ಸುಣ್ಣವನ್ನು ಬಳಸುವುದು ಕಂಡುಬರುತ್ತದೆ.

### ೫.೨: ಅವಲಂಬಿತ ಉದ್ಯೋಗಗಳು :

ವಲಸೆ ಬಂದು ನೆಲೆಗೊಳ್ಳುವುದಕ್ಕಿಂತ ಮೊದಲು ಮರಿಯಮ್ಮನಹಳ್ಳಿ ಸಮುದಾಯಗಳ ಮೂಲ ಉದ್ಯೋಗ ಕೃಷಿಯಾಗಿತ್ತು. ಸುಮಾರು ೨೫ ಕುಟುಂಬಗಳ ಹಳ್ಳಿಯು ೧೯೫೩ನಂತರ ಒಂದು ದೊಡ್ಡ ಗ್ರಾಮವಾಗಿ ಬದಲಾಯಿತು.

ನಾರಾಯಣದೇವರಕೆರೆ ಯಂತಹ ಪಟ್ಟಣದ ಜನರು ನೆಲೆಸಿದ ನಂತರ ಇಲ್ಲಿ ಆರ್ಥಿಕಸ್ಥಿತಿ ಬದಲಾವಣೆಗೊಂಡಿತು. ಮರಿಯಮ್ಮನಹಳ್ಳಿ ಸಮೀಪದ ಗಾಳೆಮ್ಮನಗುಡಿ ಹತ್ತಿರ ಮಾಜಿ ಮಂತ್ರಿಗಳಾದ ಎಂ.ವೈ.ಘೋರ್ಪಡೆಯವರು ೧೯೬೦ರಲ್ಲಿ ಸ್ಮೈಯೋರ್ ಐರನ್ ಮತ್ತು ಸ್ಟೀಲ್ ಕಾರ್ಖಾನೆ ಪ್ರಾರಂಭವಾಯಿತು. ತುಂಗಾಭದ್ರ ಜಲಾಶಯ ಮುಳುಗಡೆಯಾದ ಜನರಿಗೆ ಸರ್ಕಾರವು ಮರಿಯಮ್ಮನಹಳ್ಳಿಯ ಸುತ್ತ ಮುತ್ತಲಿನ ಗುಡ್ಡ ಪ್ರದೇಶದಲ್ಲಿ ನೀಡಿದ್ದ ಜಾಗವನ್ನು ಹಸನು ಮಾಡಿ ಉಳುಮೆ ಮಾಡಲಾರಂಭಿಸಿದಾಗ ಈ ಕಾರ್ಖಾನೆ ಪ್ರಾರಂಭವಾಯಿತು. ವ್ಯವಸಾಯ ಮಾಡುವ ಕೃಷಿ ಕಾರ್ಮಿಕರು, ಕಾರ್ಖಾನೆ ಕಾರ್ಮಿಕರಾಗಿ ಅನೇಕರು ಬದಲಾದರು. ಮರಿಯಮ್ಮನಹಳ್ಳಿ ಅಲ್ಲದೇ ಹನುಮನಹಳ್ಳಿ, ಗಾಳೆಮ್ಮನಗುಡಿ, ವ್ಯಾಸಪುರಿ ಕಾಲೋನಿ, ಡಣಾಪುರ, ಲಮಾಣಿ ತಾಂಡಗಳ ಜನರು ಕೆಲಸ ಮಾಡತೊಡಗಿದರು.

೧೯೬೬ರ ಸುಮಾರಿಗೆ ಮರಿಯಮ್ಮನಹಳ್ಳಿ ಸಮೀಪದ ಗುಡ್ಡಗಳಲ್ಲಿ ಈ ಮೈನಿಂಗ್ ಪ್ರಾರಂಭವಾಯಿತು. ಸಣ್ಣ ಮಟ್ಟದಲ್ಲಿ ಪ್ರಾರಂಭವಾದ ಈ ಉದ್ದಿಮೆ ೨೦೦೦ದವರೆಗೆ ಬೃಹದಾಕಾರವಾಗಿ ಬೆಳೆಯಿತು.

ಸುಮಾರು ೫ ದಶಕಗಳ ಕಾಲ ನಡೆದ ಸ್ಮೈಯೋರ್ ಕಾರ್ಖಾನೆಯು ೨೦೦೦ರಲ್ಲಿ ಮಾರುಕಟ್ಟೆಯಲ್ಲಿ ಸ್ಪರ್ದಿಸುವ ಶಕ್ತಿ ಕಳೆದುಕೊಂಡು, ಆಡಳಿತ ಮಂಡಳಿಯ ವೈಫಲ್ಯ, ಹಣಸೋರುವಿಕೆಯಿಂದಾಗಿ ಕಾರ್ಖಾನೆಯು ಬಂದ್ ಆಗಿ ಹೋಯಿತು. ಇದರಿಂದ ಮರಿಯಮ್ಮನಹಳ್ಳಿಯ ಅಭಿವೃದ್ಧಿಗೆ ಪೂರಕವಾಗಿದ್ದ ಕಾರ್ಖಾನೆ ಮುಚ್ಚಿದ್ದರಿಂದ ಆರ್ಥಿಕವಾಗಿ, ಸಾಮಾಜಿಕವಾಗಿ ಹಿನ್ನಡೆಯಾಯಿತು. ಕೆಲಸ ಕಳೆದುಕೊಂಡ ಕೆಲವರು ಮೈನಿಂಗ್‌ನಲ್ಲಿ ಕೆಲಸಕ್ಕೆ ಸೇರತೊಡಗಿದರು. ಇನ್ನೂ ಕೆಲವರು ಮತ್ತೆ ವ್ಯವಸಾಯ ಚಟುವಟಿಕೆಯಲ್ಲಿ ತೊಡಗಿದರು. ೨೦೦೦ರಿಂದ ಗಣಿ ಉದ್ದಿಮೆಗೆ ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ಮೈನ್ಸ್ ಬೆಲೆ ಹೆಚ್ಚಾಗಿದ್ದರಿಂದ ಇಲ್ಲಿ ಉದ್ಯೋಗ ಅವಕಾಶಗಳು ಹೆಚ್ಚಾಗತೊಡಗಿದವು ಇಲ್ಲಿ ಕೆಳವರ್ಗದ ಜನರು ಹೆಚ್ಚಾಗಿ ಲಾರಿ ಚಾಲಕರಾಗಿ, ಕ್ಲೀನರ್‌ಗಳಾಗಿ, ಕೂಲಿ ಕಾರ್ಮಿಕರಾಗಿ ಕೆಲಸ ಮಾಡತೊಡಗಿದರು.

೨೦೦೪ರಲ್ಲಿ ಮರಿಯಮ್ಮನಹಳ್ಳಿ ಸಮೀಪದ ಡಣಾಪುರದ ಹತ್ತಿರ ಬಿ.ಎಂ.ಎಂ. ಸ್ಪಾಂಜ್ ಐರನ್ ಕಾರ್ಖಾನೆ ಪ್ರಾರಂಭವಾಯಿತು. ಈ ಕಾರ್ಖಾನೆಯಲ್ಲಿ ಸ್ಥಳೀಯ ಕೈಗಾರಿಕೆ ತರಬೇತಿ ಪಡೆದವರು ಕೆಲಸಕ್ಕೆ ಸೇರತೊಡಗಿದರು. ಅಲ್ಲದೆ ಅನೇಕರು ಕೂಲಿ ಕೆಲಸಕ್ಕೆ ಹೋಗತೊಡಗಿದರು.

೨೦೦೫ರಲ್ಲಿ ಕೂಡ್ಲಿಗಿ ಶಾಸಕರಾದ ಅನಿಲ್‌ಲಾಡ್‌ವರು ಸಮೀಪದ ಲೋಕಪ್ಪನ ಹೊಲ ಗ್ರಾಮದ ಹತ್ತಿರ ಸುಮಾರು ೨೦೦ ಎಕರೆ ಪ್ರದೇಶದಲ್ಲಿ ಪುಷ್ಪೋದ್ಯಮವನ್ನು ಪ್ರಾರಂಭಿಸಿದ್ದಾರೆ. ಇಲ್ಲಿನ ಪ್ಲಾಂಟ್‌ಗಳಲ್ಲಿ ಪುಷ್ಪಗಳನ್ನು ಬೆಳಸಿ ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ಕಳುಹಿಸುವುದು ಆಗಿದೆ. ಇಲ್ಲಿ ಕೆಲಸ ಮಾಡಲು ಸುಮಾರು ೧೦೦ರಿಂದ ೧೫೦ ಜನ ಮರಿಯಮ್ಮನಹಳ್ಳಿಯವರು ಕೆಲಸಕ್ಕೆ ಹೋಗುತ್ತಿದ್ದಾರೆ.

ಮರಿಯಮ್ಮನ ಹಳ್ಳಿಯ ಸುತ್ತಮುತ್ತಲ ಪ್ರದೇಶದಲ್ಲಿ ನಾಲ್ಕು ಸ್ಪಾಂಜ್ ಐರನ್ ಕೈಗಾರಿಕೆಗಳು ಪ್ರಾರಂಭದ ಹಂತದಲ್ಲಿ ಇವೆ. ಇಲ್ಲಿನ ಅನೇಕರಿಗೆ ಕಾರ್ಖಾನೆಗಳಲ್ಲಿ ಕೆಲಸ ಸಿಗತೊಡಗಿದೆ.

ಮರಿಯಮ್ಮನಹಳ್ಳಿಯ ಸಮುದಾಯಗಳು ಅವಲಂಬಿಸಿದ ಉದ್ಯೋಗಗಳನ್ನು ಗಮನಿಸಿದಾಗ ವಲಸೆ ಬಂದು ನೆಲೆ ನಿಂತಾಗಿನಿಂದ ಅನೇಕ ಬದಲಾವಣೆಯು ಕಂಡು ಬರುತ್ತದೆ. ಇದು ಒಂದೊಂದು ಸಮುದಾಯಗಳನ್ನು ಗಮನಿಸಿದಾಗ ಕಂಡು ಬರುತ್ತದೆ.

**ಬ್ರಾಹ್ಮಣರು :**

ವಲಸೆ ಬಂದು ನೆಲೆನಿಂತವರಲ್ಲಿ ಇವರು ಒಬ್ಬರು, ಇವರಲ್ಲಿ ಅನೇಕರು ಪೌರೋಹಿತ್ಯವನ್ನು ಮಾಡುತ್ತಿದ್ದು ಕೆಲವರಿಗೆ ಕೃಷಿ ಭೂಮಿ ಇದ್ದು ಅದನ್ನು ಕೋರೆ ನೀಡಿರುವುದು ಕಂಡು ಬರುತ್ತದೆ. ಅಲ್ಲದೇ ಈ ಸಮುದಾಯದಲ್ಲಿ ಅನೇಕರು ವಿದ್ಯಾವಂತರಾಗಿದ್ದು ಅವರುಗಳಲ್ಲಿ ಕೆಲವರು ಸರ್ಕಾರಿ ಖಾಸಗಿ, ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾರೆ ಇನ್ನೂ ಕೆಲವರು ವ್ಯಾಪಾರ ವೃತ್ತಿ ಮಾಡುತ್ತಿದ್ದಾರೆ.

**ವೈಶ್ಯರು :**

ವೈಶ್ಯರು ತಾವು ಅವಲಂಬಿಸಿದ ಉದ್ಯೋಗವಾದ ವ್ಯಾಪಾರವನ್ನು ಇಂದಿಗೂ ಮುಂದುವರೆಸಿಕೊಂಡು ಬಂದಿದ್ದಾರೆ

**ವಾಲ್ಮೀಕಿಗಳು :**

ಹಿಂದುಳಿದ ವರ್ಗವಾದ ಈ ನಾಯಕರಲ್ಲಿ ದೇವದಾಸಿ ಸಂಪ್ರದಾಯವನ್ನು ಒಪ್ಪಿಕೊಂಡಂತ ಕುಟುಂಬಗಳು ಹೆಚ್ಚಾಗಿ ಕಂಡು ಬರುತ್ತವೆ. ಮಾತೃ ಪ್ರಧಾನ ವ್ಯವಸ್ಥೆ ಕಂಡು ಬರುವ ಈ ಸಮುದಾಯದಲ್ಲಿ ಅನೇಕರು ವ್ಯವಸಾಯ ವೃತ್ತಿಯಲ್ಲಿ ತೊಡಗಿದ್ದ ಮಹಿಳೆಯರು ರಂಗಭೂಮಿ ಕಲಾವಿದರಾಗಿರುವುದು ಕಂಡು ಬರುತ್ತದೆ. ಇತ್ತೀಚಿನ ವರ್ಷಗಳಲ್ಲಿ ಮೈನ್ಸ್‌ನಲ್ಲಿ ಕಾರ್ಮಿಕರಾಗಿ,

ಲಾರಿ ಚಾಲಕರಾಗಿ, ಕ್ಲೀನರ್‌ಗಳಾಗಿ ಇರುವುದು ಹೆಚ್ಚಾಗಿ ಕಂಡು ಬರುತ್ತದೆ. ವಲಸೆ ಬಂದವರಲ್ಲಿ ಮತ್ತು ಮೂಲ ನಿವಾಸಿಗರಲ್ಲಿ ಕೂಡ ಕಂಡು ಬರುತ್ತದೆ.

**ಹರಿಜನರು :**

ತಳ ಸಮುದಾಯದವರಾದ ಹರಿಜನರು ವಲಸೆ ಬಂದಂತಹ ಸಂದರ್ಭದಲ್ಲಿ ಹಲಗೆ ತಯಾರಿಸುವುದು, ಚಪ್ಪಲಿ ತಯಾರಿಕೆಯಂತಹ ಗುಡಿಕೈಗಾರಿಕೆಯಲ್ಲಿ ತೊಡಗಿದ್ದರು. ಇನ್ನೂ ಕೆಲವರು ಮೇಲ್ ವರ್ಗದವರ ಕೃಷಿ ಭೂಮಿಯನ್ನು ಉಳುಮೆ ಮಾಡುತ್ತಿದ್ದರು. ಇವರಲ್ಲಿ ಅನೇಕ ಮಹಿಳೆಯರು ದೇವದಾಸಿ ಪದ್ಧತಿಗೆ ಬಲಿಯಾಗಿದ್ದರು. ಆಧುನಿಕತೆಯ ಪ್ರಭಾವದಿಂದಾಗಿ ಗುಡಿಕೈಗಾರಿಕೆ ನಿಂತುಹೋಯಿತು. ಅನೇಕರು ಸಮೀಪದ ಕೈಗಾರಿಕೆಗಳಿಗೆ ಮೈನ್ಸ್‌ನಲ್ಲಿ ಕೂಲಿ ಕಾರ್ಮಿಕರಾಗಿ ದುಡಿಯ ತೊಡಗಿದ್ದಾರೆ ಇನ್ನೂ ಕೆಲವರು ನಗರಗಳಿಗೆ ಹೋಗಿ ಕೆಲಸ ಮಾಡುತ್ತಿದ್ದಾರೆ.

**ಮುಸ್ಲಿಂರು :**

ವಲಸೆ ಬಂದವರಾದ ಮುಸ್ಲಿಂರಿಗೆ ಕೃಷಿ ಭೂಮಿ ಇದ್ದು, ಇಂದಿಗೂ ಕೆಲವರು ವ್ಯವಸಾಯದಲ್ಲಿ ತೊಡಗಿದ್ದಾರೆ. ಇದಲ್ಲದೆ, ಮಾಂಸದ ವ್ಯಾಪಾರ, ಬೀಡಿ ಅಂಗಡಿ, ಕಟ್ಟಡ ಕಾರ್ಮಿಕರಾಗಿ, ಮೇಸ್ತ್ರಿಗಳಾಗಿ, ಚಪ್ಪಲಿ ಅಂಗಡಿ, ವ್ಯಾಪಾರ ಮಾಡುತ್ತಿದ್ದರೆ, ವಿದ್ಯಾವಂತರು ಅನೇಕ ಸರ್ಕಾರಿ ಖಾಸಗಿ ಕಂಪನಿಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ಗುಡಿ ಕೈಗಾರಿಕೆಯಾದ ಮಂಡಾಳು ಬಟ್ಟಿಯನ್ನು ಕೆಲವು ಕುಟುಂಬಗಳು ನಡೆಸುತ್ತಿದ್ದವು. ಇಂದು ನೆಲ್ಲಿನ ಬೆಲೆ ಏರಿಕೆಯಿಂದಾಗಿ ಈ ಬಟ್ಟಿಗಳು ಮುಚ್ಚಿಹೋಗಿವೆ.

**ಈಡಿಗರು :**

ತಮ್ಮ ಮೂಲ ವೃತ್ತಿಯಾದ ಸಾರಾಯಿ ಸೇಂದಿಯಂತಹ ಮದ್ಯ ವ್ಯಾಪಾರವನ್ನು ಈ ಸಮುದಾಯದವರು ಮಾಡುತ್ತಿದ್ದಾರೆ. ಇತ್ತೀಚಿನ ವರ್ಷಗಳಲ್ಲಿ ವೈನ್ ಶಾಪ್‌ನ್ನು ತೆರೆದಿದ್ದಾರೆ. ಸರ್ಕಾರ ಸಾರಾಯಿ ನಿಷೇಧ ಮಾಡಿದ ನಂತರ ಕೆಲವರು ಅತಂತ್ರ ಸ್ಥಿತಿಯಲ್ಲಿದ್ದಾರೆ.

**ಕುರುಬರು :**

ಮೂಲ ವೃತ್ತಿಯಾದ ಕುರಿಸಾಕಾಣಿಕೆ ಜೊತೆಗೆ ವ್ಯವಸಾಯವನ್ನು ಮಾಡತೊಡಗಿದ್ದಾರೆ.

**ಗಂಗಮತಸ್ಥರು :**

ಕೆಳವರ್ಗದವರಾದ ಇವರು ವಲಸೆ ಬಂದು ನೆಲೆ ನಿಂತಾಗಿನಿಂದಲೂ ಇವರಲ್ಲಿ ಅನೇಕ ಮಹಿಳೆಯರು ದೇವದಾಸಿ ಸಂಪ್ರದಾಯವನ್ನು ಒಪ್ಪಿಕೊಂಡು, ರಂಗಭೂಮಿ ಕಲಾವಿದರಾಗಿ ಜೀವನ ಸಾಗಿಸಿಕೊಂಡು ಬಂದಿದ್ದಾರೆ. ಈಗ ಅನೇಕರು ವ್ಯವಸಾಯ ಮಾಡುತ್ತಿದ್ದಾರೆ. ಕೆಲವರು ಕೆಲಸಗಳನ್ನು ವ್ಯಾಪಾರವನ್ನು ಮಾಡುತ್ತಿದ್ದಾರೆ.

**ವಡ್ಡರು (ಬೋವಿ) :**

ತಳ ಸಮುದಾಯದ ಬೋವಿ ಸಮುದಾಯದವರು ಈಗಲೂ ತಮ್ಮ ಮೂಲ ವೃತ್ತಿಯಾದ ಕಟ್ಟಡ ರಚನೆ, ಕಲ್ಲು ಸಾಗಾಣಿಕೆ ಉದ್ದಿಮೆಯಲ್ಲಿ ತೊಡಗಿದ್ದಾರೆ. ಸಮೀಪದ ಬೆಟ್ಟ ಪ್ರದೇಶಗಳಿಂದ ಕಲ್ಲುಗಳನ್ನು ತರುತ್ತಾರೆ. ಹೊಸಪೇಟೆ, ಹಗರಿಬೊಮ್ಮನ ಹಳ್ಳಿ ಯಂತಹ ನಗರಗಳ ಕಟ್ಟಡಗಳಿಗೆ ಬೇಕಾಗುವ ಕಲ್ಲುಗಳನ್ನು ಕಳುಹಿಸಿಕೊಡುತ್ತಾರೆ.

**ಜೈನರು :**

ವ್ಯಾಪಾರವನ್ನು ಮೂಲ ವೃತ್ತಿಯನ್ನಾಗಿ ಮಾಡಿಕೊಂಡಂತಹ ಜೈನರು ಇಂದಿಗೂ ಬಟ್ಟೆ ವ್ಯಾಪಾರ ಮಾಡುತ್ತಿದ್ದಾರೆ. ಜೊತೆಗೆ ಸಿಮೆಂಟ್, ದಿನಸಿ, ಹೋಟೆಲ್ ವೃತ್ತಿಯನ್ನು ಮಾಡುತ್ತಿದ್ದಾರೆ.

**ಲಿಂಗಾಯಿತರು :**

ಇಲ್ಲಿನ ಅನೇಕ ಲಿಂಗಾಯಿತ ಸಮುದಾಯಗಳು ಕೃಷಿ ಭೂಮಿಯನ್ನು ಹೊಂದಿದ್ದಾರೆ. ಅಲ್ಲದೆ ವ್ಯಾಪಾರ, ಜನಪದ ವೈದ್ಯರಾಗಿ, ಸರ್ಕಾರಿ ಕೆಲಸವನ್ನು ನಿರ್ವಹಿಸುತ್ತಿದ್ದಾರೆ.

**ವಿಶ್ವಕರ್ಮ :**

ವಿಶ್ವಕರ್ಮಕ್ಕೆ ಸೇರಿದವರಾದ ಕಮ್ಮಾರ, ಬಡಿಗೇರರು, ಅಕ್ಕ ಸಾಲಿಗರು, ಶಿಲ್ಪಿಗಳು ತಮ್ಮ ಪಾರಂಪರಿಕ ಉದ್ಯೋಗಗಳನ್ನು ಮುಂದುವರೆಸಿಕೊಂಡು ಬಂದಿದ್ದಾರೆ.

**ಕ್ಷೌರಿಕರು :**

ಇಲ್ಲಿ ನೆಲೆಸಿರುವಂತಹ ಈ ಸಮುದಾಯದ ಬಹುತೇಕರು ಕ್ಷೌರಿಕ ವೃತ್ತಿಯನ್ನೇ ಮುಂದುವರೆಸಿಕೊಂಡು ಬಂದಿರುವುದು ಕಂಡುಬರುತ್ತದೆ.

ವಸಾಹತುಶಾಹಿ ಭಾರತಕ್ಕೆ ಕಾಲಿಟ್ಟ ನಂತರದ ಸಂದರ್ಭದಲ್ಲಿ ಭಾರತದ ಗುಡಿಕೈಗಾರಿಕೆಗಳು ತಮ್ಮ ನೆಲೆಯನ್ನು ಕಳೆದುಕೊಂಡು ಈಗಾಗಲೇ ಮೂಲೆಗುಂಪಾಗಿರುವುದನ್ನು ನಾವು ಕಂಡಿದ್ದೇವೆ. ಇಂಥ ಸಂದರ್ಭದಲ್ಲಿ ಮರಿಯಮ್ಮನಹಳ್ಳಿಯಂಥ ಒಂದು ಗ್ರಾಮದಲ್ಲಿ ನಡೆಯುತ್ತಾ ಬಂದಂತ ಪಾರಂಪರಿಕ ಉದ್ಯೋಗಗಳು ಇಂದಿನ ಜಾಗತೀಕರಣದ ಹೊತ್ತಲ್ಲಿ ಹೊಸ ಫ್ಯಾಷನ್‌ಗಳಿಗೆ, ಆಧುನೀಕರಣಕ್ಕೆ ಬಹುಬೇಗನೆ ಒಳಗಾಗುತ್ತಿರುವ ಯುವ ಜನತೆಯ ಅಭಿರುಚಿಗಳಿಗೆ ತಕ್ಕಂತೆ ನಮ್ಮ ಪಾರಂಪರಿಕ ಉದ್ಯೋಗಗಳು ಸೃಷ್ಟಿಸಿರುವ ವಸ್ತುಗಳು ಸ್ಪರ್ಧಿಸಲು ಹೋಗಿ ಸೋಲು ಕಾಣುತ್ತಿರುವುದು ಹೊಸ ವಿಷಯವೇನಲ್ಲ ಎಂಬಂತ ವಾತಾವರಣ ಈಗಾಗಲೇ ಸೃಷ್ಟಿಯಾಗಿದೆ. ಉದಾ: ಕುಂಕುಮ ತಯಾರಿಕೆಯಂತ ಒಂದು ಉದ್ಯೋಗವನ್ನು ತೆಗೆದುಕೊಂಡರೆ, ಕುಂಕುಮ ತಯಾರಿಸುವುದನ್ನು ಕೈ ಬಿಟ್ಟು ಕಂಪನಿಗಳು ತಯಾರಿಸಿರುವ ಮಾರುಕಟ್ಟೆಯಲ್ಲಿ ಸಿಗುವ ಕುಂಕುಮವನ್ನು ಖರೀದಿಸಿ ತಂದು ಮಾರುವುದನ್ನು ಕಾಣಬಹುದು. ಜೊತೆಗೆ ಇಂದು ಟಿಕಳಿಗಳು

ಹೊಸ ಹೊಸ ಕಲರ್ ತುಂಬಿರುವ ಕುಂಕುಮಗಳು. ಫ್ಯಾಷನ್ ಆಗಿ ಬರುವ ಡಿಸೈನ್ ಬಿಂದಿಗಳು ಇವೆಲ್ಲ ಕುಂಕುಮಕ್ಕೆ ಸ್ಪರ್ಧಿಸುವಂತ ಸಂದರ್ಭದಲ್ಲಿ ಹಳೆಗಿಂತ ಹೊಸ ಫ್ಯಾಷನ್ಗೆ ಮಾರುಹೋಗುವ ಜನತೆ ಹೊಸದನ್ನು ಬಳಸುವ ಗುಂಗಿನಲ್ಲಿರುತ್ತಾರೆಯೇ ಹೊರತು ಹಳೆಯದರ ಕಡೆಗೆ ಗಮನ ಹರಿಸುವುದಿಲ್ಲ. ಹೀಗಾಗಿ ನಮ್ಮ ಪಾರಂಪರಿಕ ಉದ್ಯೋಗಗಳು ನಾಶ ಹೊಂದುತ್ತಿವೆ. ಇನ್ನು ಕೃಷಿಯನ್ನು ತೆರೆದುಕೊಂಡಾಗಲು ಮರಿಯಮ್ಮನಹಳ್ಳಿ ಗ್ರಾಮದ ಭೂಮಿಯು ಸವಳುಭೂಮಿ, ಕಲ್ಲುಗಳಿಂದ ಕೂಡಿರುವ ಅಷ್ಟೇನು ಫಲವತ್ತಿಲ್ಲದ ಭೂಮಿಯಲ್ಲಿ ಮಳೆಯ ಪ್ರಮಾಣವು ಕಡಿಮೆ. ಬೆಳೆಯುವಂತೆ ಬೆಳೆಯು ಅಷ್ಟೇನು ಲಾಭ ತರದಂತ ಈ ಸಂದರ್ಭದಲ್ಲಿ ರೈತರು ಹೆಸರಿಗೆ ಇಲ್ಲಿ ಕೃಷಿ ಚಟುವಟಿಕೆಯಲ್ಲಿ ತೊಡಗಿಕೊಂಡಿದ್ದಾರೆ. ಹೀಗೆ ಈ ಗ್ರಾಮದಲ್ಲಿ ಕೃಷಿ ನಷ್ಟದ ಉದ್ಯೋಗವೇ ಸರಿ. ಒಂದು ಕಡೆ ಪಾರಂಪರಿಕ ಉದ್ಯೋಗಗಳ ಹಿನ್ನಡೆ ಕೃಷಿಯಲ್ಲಿ ಕಾಣದ ಭರವಸೆ ಇಂಥ ಸಂದರ್ಭದಲ್ಲಿ ಈ ಗ್ರಾಮದ ಜನತೆಗೆ ತಮ್ಮ ಬದುಕನ್ನು ಸಾಗಿಸಲು ಉಳಿದಿರುವುದು ಬಳ್ಳಾರಿಯ ಮೈನಿಂಗ್‌ನಲ್ಲಿ ಕೂಲಿ ಕಾರ್ಮಿಕರಾಗಿ ದುಡಿಯುವುದು. ಈ ಮೈನಿಂಗ್‌ನ್ನು ಗಮನಿಸಿದರೆ ಮರಿಯಮ್ಮನಹಳ್ಳಿಯಲ್ಲಿ ಕಂಡು ಬರುವ ತಳ ಸಮುದಾಯದ ಜನರಿಗೆ ಮೈನಿಂಗ್ ಒಂದು ವರವೇ ಸರಿ. ಅದು ಹಸಿದ ಹೊಟ್ಟೆ ಹೊರೆಯಲು ಹೊರತು ಆರೋಗ್ಯದ ದೃಷ್ಟಿಯಿಂದಲ್ಲ. ಈ ಗ್ರಾಮದಲ್ಲಿ ವಾಲ್ಮೀಕಿ ಸಮುದಾಯದವರು ೬೦% ಇದ್ದಾರೆ. ಇವರ ಮುಖ್ಯ ಉದ್ಯೋಗ ಮೈನಿಂಗ್‌ನಲ್ಲಿ ಕೂಲಿ ಕಾರ್ಮಿಕರಾಗಿ ದುಡಿಯುವುದು ಅದು ೧೮. ೨೦ ರಿಂದ ೩೦ ವರ್ಷದ ಯುವಕರು ಲಾರಿ ಡ್ರೈವರ್ ಆಗಿ ಕೆಲಸ ಮಾಡುತ್ತಿದ್ದಾರೆ. ಯಾಕೆ ಇವರಿಗೆ ಈ ಮೈನಿಂಗ್‌ನಲ್ಲಿ ಲಾರಿ ಓಡಿಸಲು ಕೆಲಸಕ್ಕೆ ಇಟ್ಟುಕೊಳ್ಳುತ್ತಾರೆ ಎಂಬುದನ್ನು ಸ್ವಲ್ಪ ಆಲೋಚಿಸಿದರೆ ವಾಲ್ಮೀಕಿಯಂಥ ಒಂದು ತಳ ಸಮುದಾಯದಲ್ಲಿ ಪ್ರಾಣದ ಹಂಗನ್ನು ತೊರೆದು ಹಲವಾರು ಟ್ರಿಪ್ಪನ್ನು ಹೊಡೆಯಲು ತಯಾರಿರುವ ಯುವ ಸಮೂಹ ಸಜ್ಜಾಗಿ ನಿಂತಿದೆ. ಇವರಿಗೆ ಸ್ವಲ್ಪ ದುಡ್ಡನ್ನು ಜಾಸ್ತಿ ಕೊಟ್ಟರೆ ಸಾಕು ತಮ್ಮ ಪ್ರಾಣವನ್ನು ಲೆಕ್ಕಿಸದೆ ಹಲವು ಟ್ರಿಪ್ ಹೊಡೆದು ಬಿಡುತ್ತಾರೆ. ಇನ್ನು ಮಹಿಳೆಯರು ಸಹ ಬೆಣಚುಕಲ್ಲು ಅರಿಸಲು ಮಣ್ಣನ್ನು ಜರಡಿ ಮಾಡಲು, ಧೂಳಿನಲ್ಲಿ ಕೆಲಸ ಮಾಡಲು ಸಜ್ಜಾಗಿರುತ್ತಾರೆ. ಇವರಿಗೆ ದಿನಗೂಲಿ ಎಂದು ಇಂತಿಷ್ಟು ಹಣ ನೀಡುತ್ತಾರೆಯೇ ಹೊರತು ಇಲ್ಲಿ ಮೈನಿಂಗ್‌ನಲ್ಲಿ ದುಡಿಯುವ ಈ ಕಾರ್ಮಿಕರಿಗೆ ಯಾವ ಭದ್ರತೆ, ಜೀವದ ಬಗ್ಗೆ ವಿಮೆಯ ಸೌಲಭ್ಯಗಳಾಗಲಿ, ಏನೂ ಇರುವುದಿಲ್ಲ. ಹೀಗೆ ಹೊಟ್ಟೆ ಹೊರೆಯಲು ಒಂದು ಉದ್ಯೋಗದ ಅನಿವಾರ್ಯತೆಯಿಂದಾಗಿ ಈ ಕೆಳವರ್ಗಗಳು ಈ ಮೈನಿಂಗ್‌ನಲ್ಲಿ ಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಒಂದು ಕಡೆ ಎನ್.ಎಚ್. ಎಂಬ ಎರಡು ಬೃಹತ್ ರಸ್ತೆಗಳು, ರೈಲ್ವೆ ಸ್ಟೇಷನ್ ಸೌಲಭ್ಯ ಹೊಂದಿರುವ ಮಧ್ಯದಲ್ಲಿ ಬರುವ ಮರಿಯಮ್ಮನಹಳ್ಳಿಯನ್ನು ಒಮ್ಮೆ ಮೇಲ್ನೋಟಕ್ಕೆ ಗಮನಿಸಿದರೆ ಯಾವಾಗಲೂ ಗಡಿಬಿಡಿಯಿಂದ ಕೂಡಿರುವ ವಾತಾವರಣವಿರುವ ಈ ಹಳ್ಳಿಯನ್ನು ಒಳಹೊಕ್ಕು ನೋಡಿದರೆ ಅತಂತ್ರ ಸ್ಥಿತಿಯಲ್ಲಿರುವ ವಲಸಿಗರ ತಾಣವಾಗಿ ಇನ್ನೂ ಬೆಳೆಯಬೇಕಾಗಿರುವಂತ ಬೆಳೆಯುತ್ತಿರುವ ಅರೆಬರೆ

ಬೆಳೆದಿರುವಂತ ಒಂದು ಗ್ರಾಮವಾಗಿ ಕಂಡು ಬರುತ್ತದೆ. ಸರಕಾರದ ಸವಲತ್ತುಗಳು ಸಹ ಈ ಗ್ರಾಮಕ್ಕೆ ತಲುಪುವುದರಲ್ಲಿ ವಿಫಲವಾಗಿವೆ ಎಂದೇ ಹೇಳಬಹುದು. ಯಾಕೆಂದರೆ ಎಸ್.ಸಿ., ಎಸ್.ಟಿ. ಹಾಸ್ಟೆಲ್ ಇರುವುದು ಸತ್ಯ. ಆದರೆ ಇಲ್ಲಿ ಕುಡಿಯಲು ನೀರು, ಹಾಗೂ ವಿದ್ಯಾರ್ಥಿಗಳಿಗೆ ಟಾಯ್ಲೆಟ್ ವ್ಯವಸ್ಥೆ ಯಾವುದೂ ಸರಿಯಾದ ವ್ಯವಸ್ಥೆಗಳಿಲ್ಲದಿರುವ ವಾತಾವರಣವಿದೆ. ಸರಕಾರದ ಸವಲತ್ತುಗಳು ತಲುಪಿದರು ಅದು ಅರ್ಧಮರ್ಧ, ಅಪೂರ್ಣವಾಗಿವೆ ಎಂಬುದಂತು ಸತ್ಯ.

ಹಳ್ಳಿಗಳ ಉದ್ಧಾರವೇ ಭಾರತದ ಉದ್ಧಾರ ಎಂಬಂತ ಗಾಂಧೀಜಿಯವರ ಮಾತನ್ನ ಗಮನಿಸಿದರೆ ಇಂಥ ರೋಗಗ್ರಸ್ಥ ಹಳ್ಳಿಗಳು ಎಂಥ ಸದೃಢ ಭಾರತವನ್ನು ಕಟ್ಟುತ್ತವೆ ಎಂಬುದನ್ನು ಆಲೋಚಿಸಬೇಕಾಗುತ್ತದೆ.

# ಅಧ್ಯಾಯ – ೬

## ಸಾಹಿತ್ಯ ಮತ್ತು ಭಾಷೆ

ಸಾಹಿತ್ಯದ ಮೂಲಕ ಒಂದು ಸಮುದಾಯದ ಜೀವನ ವಿಧಾನವನ್ನು ಅರಿಯ ಬಹುದಾಗಿದೆ ಸಾಹಿತ್ಯ ಎನ್ನುವುದು ವಿವಿಧ ಪ್ರಕಾರಗಳಲ್ಲಿ ಅಭಿವ್ಯಕ್ತಗೊಳ್ಳುವ ಬದುಕಿನ ವ್ಯಾಖ್ಯಾನವೇ ಆಗಿದೆ.ಸಾಹಿತ್ಯಕ್ಕೂ ನಾವು ಬದುಕುವ ಪರಿಸರಕ್ಕೂ ಒಂದು ಬಗೆಯ ಸಂಬಂಧ ಇದ್ದೇ ಇರುತ್ತದೆ. ಸಮಾಜದಲ್ಲಿ ಸಂಭವಿಸುವ ಘಟನೆಗಳೇ ಸಾಹಿತ್ಯದ ಮುಖ್ಯ ಆಕಾರ. ಸಾಹಿತ್ಯ ಸಮಾಜದ ಪ್ರತಿನಿಧೀಕರಣದ ಕನ್ನಡಿಯಾಗಿದೆ. ಹಾಗಾಗಿ ಸಾಹಿತ್ಯದಲ್ಲಿ ಕಾಣಿಸಿಕೊಳ್ಳುವ ಸಾಮಾಜಿಕ ಚಿತ್ರಣಕ್ಕೂ ಮತ್ತು ವಾಸ್ತವಿಕ ಸಮಾಜದ ಸ್ವರೂಪಕ್ಕೂ ಸಾಮ್ಯತೆಗಳಿರುವುದು ಕಂಡು ಬರುತ್ತದೆ. ಕಾರಣ ಸಾಹಿತ್ಯ ಎಂಬುದನ್ನು ಹೊರತು ಪಡಿಸಿದ ಸಂಗತಿನೂ ಇಲ್ಲ ಹಾಗಾಗಿ ಸಾಹಿತ್ಯದ ಮೂಲಕ ಸಾಮಾಜಿಕ ವಾಸ್ತವಿಕತೆಯನ್ನು ಅರಿಯಬಹುದಾಗಿದೆ. ಜನರ ಸಾಂಪ್ರದಾಯಿಕ ಮೌಲ್ಯಗಳನ್ನು ಕೊಂಡೊಯ್ಯುವ ವಾಹಕವಾದ ಸಾಹಿತ್ಯಿಕ ಆಕಾರಗಳ ಆಧಾರದ ಮೇಲೆ ಮರಿಯಮ್ಮನಹಳ್ಳಿಗೆ ವಲಸೆ ಒಂದು ನೆಲೆ ನಿಂತಿರುವವರ ಮತ್ತು ಮೂಲ ನಿವಾಸಿಗಳ ಸಾಹಿತ್ಯವನ್ನು ಕುರಿತು ಅಧ್ಯಯನ ಮಾಡುತ್ತಾ ಅವರ ಜೀವನ ವಿಧಾನದ ಕೆಲವು ಒಳನೋಟಗಳನ್ನು ನೋಡುವ ಪ್ರಯತ್ನ ಇದಾಗಿದೆ.

ಸಾಹಿತ್ಯವನ್ನು ಶಿಷ್ಟ ಮತ್ತು ಜನಪದ ಎಂದು ವಿಭಾಗಿಸಿಕೊಂಡು ಬಂದ ಕ್ರಮ ನಮ್ಮಲ್ಲಿ ರೂಡಿಯಲ್ಲಿದೆ. ಈ ವಿಭಾಗೀಕರಣಗಳು ಏನೇ ಇದ್ದರೂ ಅಂತಿಮವಾಗಿ ಸಾಹಿತ್ಯ ಸಾಮಾಜಿಕ ರಚನೆಯೇ ಆಗಿದೆ. ಹಾಗಾಗಿ ಮೇಲೆ ಚರ್ಚಿಸಿದ ವಿಷಯಗಳೆಲ್ಲ ಶಿಷ್ಟ ಸಾಹಿತ್ಯಕ್ಕೂ, ಮೌಖಿಕ ಸಾಹಿತ್ಯಕ್ಕೂ ಅನ್ವಯಿಸುವಂತ ವಿಚಾರಗಳೇ ಆಗಿವೆ. ಆದರೆ ಈ ಅಧ್ಯಯನವನ್ನು ಜಾನಪದಕ್ಕೆ ಮಾತ್ರ ಸೀಮಿತಗೊಳಿಸಿಕೊಂಡಿರುವ ಕಾರಣ ಮೌಖಿಕ ಸಾಹಿತ್ಯದ ಕಡೆಗೆ ಮಾತ್ರ ಗಮನ ಹರಿಸಲಾಗಿದೆ. ಜಾನಪದ ಅಧ್ಯಯನ ಕ್ಷೇತ್ರದಲ್ಲಿ ಜನಪದ ಸಾಹಿತ್ಯ ಸಂಗ್ರಹದ ಕೆಲಸ ಸಾಕಷ್ಟಾಗಿದೆ.

ಆದರೆ ಆ ಸಂಗ್ರಹಿತ ಪಠ್ಯಗಳನ್ನು ವಿಶ್ಲೇಷಿಸುವ ಮತ್ತು ನಿರ್ವಚಿಸುವ ಪ್ರಯತ್ನಗಳು ನಡೆದಿವೆಯಾದರೂ ತುಂಬಾ ವಿರಳ. ಅಕಾಡೆಮಿಕ್ ವಲಯದಲ್ಲಿ ಲಿಖಿತ ಆಕಾರಗಳಿಗೆ ದೊರೆತ ಆಧ್ಯತೆ ಮತ್ತು ಮಾನ್ಯತೆಗಳು ಮೌಖಿಕ ಆಕಾರಗಳಿಗೆ ದೊರೆತಿಲ್ಲ. ಆದರೆ ಇತ್ತೀಚಿಗೆ ಮೌಖಿಕ ಆಕಾರಗಳು ಕೂಡ ಸಂಸ್ಕೃತಿಯ ವಾಹಕಗಳು ಎಂಬ ಸತ್ಯವನ್ನು ಮನಗಂಡಿರುವುದರಿಂದ ಯಾವುದೇ ಸಮುದಾಯದ ಸಂಸ್ಕೃತಿಯ ವಿಸ್ಕೃತಿಗಳನ್ನು ಕಟ್ಟಿಕೊಡುವ ಸಂದರ್ಭದಲ್ಲಿ ಮೌಖಿಕ ಆಕಾರಗಳು ಮುಖ್ಯವೆನಿಸತೊಡಗಿದೆ. ಮರಿಯಮ್ಮನಹಳ್ಳಿಗರ ಸಾಹಿತ್ಯವನ್ನು ಪರಿಶೀಲಿಸುವ ಮುನ್ನ ಜನಪದ ಸಾಹಿತ್ಯವನ್ನು ಕುರಿತು ಒಂದಿಷ್ಟು ತಿಳಿಯೋಣ.

ಮೌಖಿಕ ಸಾಹಿತ್ಯ ಅಥವಾ ಜನಪದ ಸಾಹಿತ್ಯ ಎಂದು ಕರೆಯಲ್ಪಡುವ ಸಾಹಿತ್ಯ ಜಾನಪದದ ಒಂದು ಪ್ರಕಾರ. ಜನಪದರಿಂದ ಮೌಖಿಕ ರೂಪದಲ್ಲಿ ರಚನೆಗೊಂಡ ಪ್ರಕಟಿತ ಅಥವಾ ಅಪ್ರಕಟಿತ ರೂಪದಲ್ಲಿರುವ ಸಾಹಿತ್ಯವು ಗಾದೆ. ಗೀತೆ, ಒಗಟು, ಒಡಪು, ಲಾವಣಿ, ಖಂಡ ಕಾವ್ಯ, ಮಹಾಕಾವ್ಯ, ಐತಿಹ್ಯ, ಪುರಾಣ ಹೀಗೆ ಮುಂತಾದ ರೂಪದಲ್ಲಿರುತ್ತದೆ. ಜನಪದ ಸಾಹಿತ್ಯ ಎಂಬುದು ಜನರ ನಿತ್ಯ ಜೀವನದ ನೋವು ನಲಿವಿನ ಸಂಗತಿಗಳನ್ನು ದಾಖಲಿಸಿಕೊಂಡ ಆಕಾರವೇ ಆಗಿದೆ. ಈ ಕುರಿತು ಅನೇಕರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಹಾಗಾಗಿ ವಿದ್ವಾಂಸರ ವಲಯದಲ್ಲಿ ಜನಪದ ಸಾಹಿತ್ಯ ಕುರಿತಂತೆ ಇರುವ ವಿಚಾರಗಳನ್ನು ತಿಳಿಯಬಹುದು.

ಜನಪದ ಸಾಹಿತ್ಯವೆಂದರೆ ಕೇವಲ ಹಾಡಲ್ಲ. ಅದರಲ್ಲಿ ದೇವರ ಧ್ಯಾನ, ಭಕ್ತಿ, ಚಿಂತನೆಗಳ ಜೊತೆಗೆ ಧಾರ್ಮಿಕ ಆಚರಣೆ, ನಡೆ, ನುಡಿ, ಕಲೆ, ಸಾಹಿತ್ಯ, ಸಂಗೀತಗಳನ್ನೊಳಗೊಂಡ ಜನಾಂಗಗಳ ಸಮಗ್ರ ಜೀವನದ ಜೀವಂತ ಚಿತ್ರಣವಾಗಿದೆ. ಪ್ರತ್ಯೇಕವಾಗಿ ಮನಸ್ಸಿನಲ್ಲಿ ಮೂಡಿ ನಿಲ್ಲಬಲ್ಲ ಚಿತ್ರವಾಗಿದೆ. ಕರಳು ತಂತಿಯನ್ನು ಮೀಟಬಲ್ಲ ನಾದಮಾಧುರ್ಯ ಅದರಲ್ಲಿ ಅಡಕವಾಗಿದೆ. ಜನಸಮಾನ್ಯರ ಅಂತರಾಳದಿಂದ ಹೊರಹೊಮ್ಮಿದ ಸಹಜ ಅನುಭವವಾಗಿದೆ. ಒಂದು ನಾಡಿನ ಜನಾಂಗದ ಸಂಸ್ಕೃತಿಯ ಸಮಗ್ರ ಚಿತ್ರಣಕ್ಕೆ ಹಿಡಿದ ಕನ್ನಡಿಯಾಗಿದೆ ಎಂದು ಡಾ.ಅರ್ಜುನಗೊಳಸಂಗಿ, (೨೦೦೦:೧) ಹೇಳಿದ್ದಾರೆ.

ಜನಪದ ಸಾಹಿತ್ಯ ನಮ್ಮ ಬದುಕಿನ ಜೊತೆಗೆ ಹುಟ್ಟು ಪಡೆದಂತಹದ್ದು, ಬದುಕು ಬೇರೆ ಈ ಸಾಹಿತ್ಯ ಬೇರೆ ಅಲ್ಲ, ಬದುಕಿನ ಜೊತೆಗೆ ಸೃಷ್ಟಿಗೊಳ್ಳುವ ಮಾನವನ ಬದುಕನ್ನೇ ದಾಖಲಿಸುವ ಕೆಲಸ ಈ ಸಾಹಿತ್ಯ ಮಾಡುತ್ತದೆ. ಹೀಗೆ ಬದುಕಿನ ಅಂಗವಾಗಿ ಬದುಕನ್ನು ದಾಖಲಿಸುವ ಕೆಲಸ ಮಾಡುವ ಇದು ಮಾನವ ಬದುಕಿನ ಬಹುದೊಡ್ಡ ಸಾಂಸ್ಕೃತಿಕ ಕೊಡುಗೆಯೇ ಆಗಿದೆ (ಡಾ.ವೀರಣ್ಣ ದಂಡೆ: ೨೦೦೧:೬೭) ಎಂದಿರುವರು. ಅಲ್ಲದೇ ಅವರು ಮುಂದುವರೆದು "ಮಾನವ ಬದುಕಿನ ಬಹುಮುಖ್ಯ ಶೋಧಗಳಲ್ಲಿ ಒಂದಾಗಿರುವ ಜನಪದ ಸಾಹಿತ್ಯಕ್ಕೆ ಸಹಜವಾಗಿಯೇ ಒಂದು ಖಚಿತವಾದ ಸಾಂಸ್ಕೃತಿಕ ದೃಷ್ಟಿ ಇರಲು ಸಾಧ್ಯವಿದೆ. ಬದುಕಿನ ಜೊತೆಗೆ ಬೆರೆತುಕೊಂಡ ಈ ಸಾಹಿತ್ಯದ ದೃಷ್ಟಿಯನ್ನ ನಿಯಂತ್ರಿಸುವುದು. ಸಹಜವಾಗಿ ಬದುಕೇ ಆಗಿರುತ್ತವೆ. ನಮ್ಮ ಬದುಕು

ಏನಿದೆಯೋ, ಬದುಕು ಏನನ್ನು ಗ್ರಹಿಸಲು ಸಾಧ್ಯವೋ ಅದನ್ನೇ ಜನಪದ ಸಾಹಿತ್ಯ ಗ್ರಹಿಸಲು ಸಾಧ್ಯ" ಎಂಬುದಾಗಿ ಡಾ.ವೀರಣ್ಣ ದಂಡೆಯವರು (೨೦೦೧:೯೭) ಅಭಿಪ್ರಾಯ ಪಟ್ಟಿದ್ದಾರೆ.

ಶಿಷ್ಟ ಸಾಹಿತ್ಯದಂತೆ ಜನಪದ ಸಾಹಿತ್ಯವು ಚಾರಿತ್ರಿಕ ಉತ್ಪಾದನೆಯಾಗಿದೆ. ಮಹಿಳಾ ಜನಪದ ಸಾಹಿತ್ಯವು ನಿರ್ದಿಷ್ಟವಲ್ಲದಿದ್ದರೂ ಸ್ಥೂಲವಾಗಿ ಚಾರಿತ್ರಿಕ ಸನ್ನಿವೇಶಗಳನ್ನು ಸಾಮಾಜಿಕ ನಂಬಿಕೆ ಆಚರಣೆಗಳ ಮೂಲಕ ಕಟ್ಟಿ ಕೊಡುತ್ತದೆ. ಜನಪದ ಸಾಹಿತ್ಯಕ್ಕೆ ಸಂವಹನಾ ಸ್ವರೂಪವಿದೆ, ಅದು ತಾನು ರೂಪಗೊಂಡ ಹಾಗೂ ರೂಪಗೊಳ್ಳುತ್ತಿರುವ ಸಾಂಸ್ಕೃತಿಕ ಪರಿಸರವನ್ನು ವಿವರಿಸುತ್ತದೆ. ಜನ ಸಮಾನ್ಯರ ಸಂಸ್ಕೃತಿಯ ವಾಹಕವಾದ ಜನಪದ ಸಾಹಿತ್ಯವು ಮಹಿಳೆಯರನ್ನು ಹಾಗೂ ಅವರ ಬದುಕನ್ನು ಹೇಗೆ ಪ್ರತಿನಿಧಿಕರಿಸಿದೆ ಎನ್ನುವುದು ವಿಶ್ಲೇಷಿಸುವ ಎಂದು ಜರೂರಿದೆ ಡಾ.ಶೈಲಜಾ ಹಿರೇಮಠ: (೨೦೦೬: ೫೯೩) ಹೇಳಿದ್ದಾರೆ.

"ಜನಪದ ಸಂಸ್ಕೃತಿಯ ಅಭಿವ್ಯಕ್ತಿ ಪ್ರಕಾರಗಳಲ್ಲಿ ಜನಪದ ಸಾಹಿತ್ಯ ಬಹುಮುಖ್ಯವಾದದು ಜಗತ್ತಿನ ಬಹುತೇಕ ಎಲ್ಲ ಅನಕ್ಷರಸ್ಥ ಜನಸಮುದಾಯಗಳ ಹಾಗೂ ಶೋಷಿತರ ಜನರ ಅನಿಸಿಕೆಗಳನ್ನು ವ್ಯಕ್ತಪಡಿಸುವುದಕ್ಕೆ ಇರುವ ಏಕೈಕ ಮಾಧ್ಯಮವೆಂದರೆ ಕಂಠಸ್ಥ ಸ್ವರೂಪದಲ್ಲಿ ಹರಿದು ಬರುವ ಜನಪದ ಸಾಹಿತ್ಯವೇ ಆಗಿದೆ. ಈ ಸಾಹಿತ್ಯದ ಸೃಷ್ಟಿಯಲ್ಲಿ ಪುರುಷರಂತೆಯೇ ಸ್ತ್ರೀಯರೂ ಸಹ ತಲೆ ತಲೆಮಾರುಗಳಿಂದಲೂ ಸಮಾನವಾಗಿ ಭಾಗವಹಿಸುತ್ತ ಬಂದಿದ್ದಾರೆ. ಅನಕ್ಷರತೆ ಮತ್ತು ಪುರುಷ ಪ್ರಧಾನ ಸಮಾಜದ ಪ್ರಾಬಲ್ಯದ ಕಾರಣವಾಗಿ ಬಹುತೇಕ ಹಿನ್ನಲೆಯಲ್ಲಿ ಉಳಿದ ಸ್ತ್ರೀ ಸಂವೇದನೆಗಳನ್ನು ತಿಳಿದುಕೊಳ್ಳಲು ಜನಪದ ಸಾಹಿತ್ಯ ವಿಶ್ವಾಸಾರ್ಹ ಮಾಹಿತಿಯ ಆಕಾರ" ಎಂಬುದಾಗಿ (ಡಾ.ಕೆ.ಆರ್.ಸಂಧ್ಯಾ ರೆಡ್ಡಿ: (೨೦೦೦:೧) ಯವರು ಅಭಿಪ್ರಾಯ ಪಟ್ಟಿದ್ದಾರೆ.

ಜನಪದ ಸಾಹಿತ್ಯ ಎಲ್ಲಿಂದಲೋ ಉದ್ಭವಿಸಿದ್ದಲ್ಲ. ಜನಪದರು , ತಮ್ಮ ಬದುಕಿನಲ್ಲಿ ಕಂಡುಂಡ ಅನುಭವವನ್ನು ಹಾಡಗಿಸಿದ್ದಾರೆ, ಕಥೆಯಾಗಿಸಿದ್ದಾರೆ, ಪುರಾಣವಾಗಿಸಿದ್ದಾರೆ ಇತ್ಯಾದಿ. ಹಾಗಾಗಿ ಜನಸಾಮಾನ್ಯರ ಅಭಿವ್ಯಕ್ತಿ ಪ್ರಕಾರಗಳಲ್ಲಿ ಜನಪದ ಸಾಹಿತ್ಯ ಪ್ರಮುಖವಾದದ್ದು. ಶಿಷ್ಠ ಸಾಹಿತ್ಯಕ್ಕಿಂತಲೂ ಭಿನ್ನವಾಗಿದ್ದು ಈ ಮೌಖಿಕ ಸಾಹಿತ್ಯದಲ್ಲಿ ಧ್ವನಿ ಇಲ್ಲದವರ ಧ್ವನಿಯು ಕೇಳಿಬರುತ್ತವೆ. ಬಹುಪಾಲು ಅನಕ್ಷರಸ್ಥ ಜನರು, ದುಡಿಯುವ ಜನರು ಹೇಳಿಕೊಂಡ ಸಾಹಿತ್ಯವೇ ಮೌಖಿಕ ಸಾಹಿತ್ಯವಾಗಿದ್ದರಿಂದ ಅವರೇ ಹೇಳಿಕೊಂಡ ಈ ಸಾಹಿತ್ಯದಲ್ಲಿ ಅವರ ಬದುಕಿನ ಹತ್ತು ಹಲವು ಸಂಗತಿಗಳು ಹಾಸುಹೊಕ್ಕಾಗಿರುವುದರಿಂದ ಜನಸಮಾನ್ಯರ ಬದುಕಿನ ಬಗೆಗೆ ಅಧ್ಯಯನ ಮಾಡಬೇಕಾದ ಸಂದರ್ಭದಲ್ಲಿ ಮೌಖಿಕ ಆಕಾರಗಳು ಬಹುಮುಖ ಪಾತ್ರವಹಿಸುತ್ತವೆ. ಹಾಗಾಗಿ ಸಮುದಾಯಗಳ ಅಧ್ಯಯನದಲ್ಲಿ ಅವರುಗಳ ಮೌಖಿಕ ಸಾಹಿತ್ಯದ ಪಾತ್ರವು ಮುಖ್ಯವಾದದ್ದು.

ಮರಿಯಮ್ಮನಹಳ್ಳಿಯಲ್ಲಿ ನೆಲೆಸಿರುವ ಸಮುದಾಯಗಳ ಜನಪದ ಸಾಹಿತ್ಯದಲ್ಲಿ ಬರುವ ಹಾಡುಗಳು, ಗಾದೆಗಳು ಕಥೆಗಳು ಒಗಟುಗಳನ್ನು ಇಲ್ಲಿ ಅವಲೋಕಿಸುತ್ತ ಅವರ ಜೀವನ ಚಿತ್ರಣವನ್ನು ಕಂಡುಕೊಳ್ಳುವ ಪ್ರಯತ್ನವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ.

## ೬.೧. ಜನಪದ ಕಥೆಗಳು :

ಕಥೆಗಳು ಮೂಲತಃ ಮಾನವನ ವೈಯಕ್ತಿಕ ಹಾಗೂ ಸಾಮಾಜಿಕ ಅವಶ್ಯಕತೆಯ ಫಲಗಳು. ಮುಖ್ಯವಾಗಿ ಇವು ಪುರಾತನ ಸಂಸ್ಕೃತಿ ಮತ್ತು ಪರಂಪರೆಯ ಮೇಲೆ ಹೆಚ್ಚು ಬೆಳಕು ಚೆಲ್ಲುತ್ತವೆ, ಹೊಸ ಸಂಸ್ಕೃತಿಯ ನಿರ್ಮಾಣಕ್ಕೆ ಯುಕ್ತ ಹಿನ್ನೆಲೆಯನ್ನು ಒದಗಿಸುತ್ತವೆ.

ಕಥೆಗಳನ್ನು ಹೇಳುವ ಮತ್ತು ಕೇಳುವ ಮಾನವ ಪ್ರವೃತ್ತಿ ಮಾನವ ಸಮಾಜದಷ್ಟೆ ಪುರಾತನವಾದದ್ದು, ನಿತ್ಯದ ದುಡಿಮೆಯ ಶ್ರಮವನ್ನು ಮರೆಯಲು, ಬಿಡುವಿನ ವೇಳೆಯನ್ನು ನಿರಾಳವಾಗಿ ಕಳೆಯಲು. ಏಕತಾನದ ಬದುಕಿಗೆ ರಂಜನೆಯನ್ನು ದೊರಕಿಸಿಕೊಳ್ಳಲು ಹೀಗೆ ನಾನಾ ಉದ್ದೇಶಗಳ ಹಿನ್ನೆಲೆಯಲ್ಲಿ ಮನುಷ್ಯ ಕಥೆ ಹೇಳುವ ಕಲೆಯನ್ನು ರೂಢಿಸಿಕೊಂಡ.

ಕಥಾ ನಿರೂಪಕನ ಕಲ್ಪನೆ ಶ್ರೋತೃಗಳ ಕುತೂಹಲವನ್ನು ಒಂದೇ ಸಮನಾಗಿ ಒಟ್ಟೊಟ್ಟಾಗಿ ಸಾಗಿ ಬರುವಂತೆ ಮಾಡುವ ವಿಶಿಷ್ಟ ಮೌಖಿಕ ಪ್ರಕಾರವೇ ಜನಪದ ಕಥೆ. ಇದನ್ನು ನಿರೂಪಿಸುವ ನಿರೂಪಕ ಇಂದಿಗೂ ಇದನ್ನು ಗುರುತಿಸುವುದು. 'ಅಜ್ಜಿ ಕಥೆ' ಎಂತಲೇ ಏಕೆಂದರೆ ಕಥೆ ಹೇಳುವ ವಿಷಯದಲ್ಲಿ ಅಜ್ಜಿಯರನ್ನು ಮೀರಿಸುವವರಿಲ್ಲ ಎನ್ನುವ ಬೇದವೇನಿಲ್ಲ. ಜಗತ್ತಿನಲ್ಲಿ ಮನುಷ್ಯರಿರುವ ಕಡೆಯಲೆಲ್ಲಾ ಈ ಕ್ರಿಯೆ ಏಕಪ್ರಕಾರವಾಗಿ ಕಂಡುಬಂದಿದೆ. ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿ ಪ್ರಚಲಿತವಿರುವ ಜನಪದ ಕಥೆಗಳಲ್ಲಿ ಏಕರೂಪತೆ ಇರುವಂತೆ ಭಿನ್ನತೆಗಳೂ ಇವೆ. ಮೌಖಿಕವಾಗಿ ಸಾಗಿ ಬೇರೆ ಕಾಲ ಮತ್ತು ಪ್ರದೇಶಗಳಲ್ಲಿ ಬದುಕಬೇಕಾದ್ದರಿಂದ ಭೌಗೋಳಿಕವಾಗಿ ವ್ಯತ್ಯಾಸಕ್ಕೊಳಗಾಗುವುದು ಸರ್ವೇಸಾಮಾನ್ಯ. ವರ್ಷಗಳುರುಳಿದಂತೆ ಕಥೆಗಳು ಚಾರಿತ್ರಿಕ ವ್ಯತ್ಯಾಸಕ್ಕೂ ಗುರಿಯಾಗಬಹುದು. ಈ ಕಾರಣಗಳಿಂದಾಗಿ ಕಥೆಗಳು ರೂಪದಲ್ಲಿ ವೈವಿಧ್ಯವನ್ನು ಭೌಗೋಳಿಕವಾಗಿ, ಚಾರಿತ್ರಿಕವಾಗಿ ವಿಸ್ತೃತ ವ್ಯಾಪ್ತಿಯನ್ನು ಪಡೆದುಕೊಂಡಿದೆ. ಮಾನವನ ಸಾಂಸ್ಕೃತಿಕ ವಿಕಾಸದ ವಿವಿಧ ಘಟ್ಟಗಳನ್ನು ಅಭ್ಯಾಸ ಮಾಡಲು ಕಥೆಗಳು ವಿಪುಲ ಸಾಮಾಗ್ರಿಯನ್ನೊದಗಿಸುತ್ತವೆ.

ಕಥೆಗಳ ಗರ್ಭದಲ್ಲಿ ಕಾಲಕಾಲದ ನಂಬಿಕೆಗಳು ಧಾರ್ಮಿಕ, ಸಾಮಾಜಿಕ, ಮೌಲ್ಯಗಳು, ಪರಂಪರೆಯಲ್ಲಿನ ವಿವಿಧ ಪದ್ಧತಿಗಳು ತುಂಬಿಕೊಂಡಿವೆ. ಇಲ್ಲಿ ಮನರಂಜನೆ ಮತ್ತು ನೀತಿಭೋದನೆ ಕಂಡು ಬಂದರೂ ಆಳದಲ್ಲಿ ಅನ್ಯಾಯದ ವಿರುದ್ಧದ ಪ್ರತಿಭಟನೆಯ ಸಣ್ಣ ಎಳೆಗಳಿವೆ. ಅದನ್ನು ಮೀರಿ ಮೌಢ್ಯವನ್ನು ಸದಾ ರಕ್ಷಿಸಿ ಹೊತ್ತು ತರುತ್ತಿರುವ ಕುರುಡು ನಿಷ್ಠೆ ಕೂಡ ಇದೆ. ಎಲ್ಲಕ್ಕೂ ಹೆಚ್ಚಾಗಿ ಎಲ್ಲೆ ಕಾಣದ ನಿರಾಸೆಯ ನಡುವೆ ಬೇರೆ ಕಡೆಗೆ ಮುಖವನ್ನು ಹುದುಗಿಸಿ ಸುಖದ ದಿನಗಳನ್ನು ಕಲ್ಪಿಸಿಕೊಂಡು ನೆಮ್ಮದಿ ತಂದುಕೊಳ್ಳುವ ಕನಸುಗಾರಿಕೆ ಕಾಣುತ್ತದೆ.

ಜನಪದರಂತೂ ಕಥೆಗಾಗಿಯೇ ತಮ್ಮ ಇಡೀ ಬದುಕನ್ನು ಧಾರೆಯರೆದಿದ್ದಾರೆ. ಬದುಕಿನ ಎಲ್ಲವನ್ನು ಕಥೆಯಾಗಿಸಿಟ್ಟಿದ್ದಾರೆ. ಆದ್ದರಿಂದ ಜನಪದ ಕಥೆಗಳು ಒಳಗೊಳ್ಳದ ವಸ್ತುವಿಲ್ಲ. ಇವು ಪರಂಪರೆಯನ್ನು ಉಳಿಸಿಕೊಂಡು ಬೆಳೆಸಿಕೊಂಡು ಬಂದಿರುವ ಪ್ರಾಚೀನ ಮಾನವನ ಬದುಕು ಬಯಕೆ, ಆಸೆ, ನಿರಾಸೆ, ಆಕಾಂಕ್ಷೆ, ನಂಬಿಕೆ, ಸಂಪ್ರದಾಯ, ಆಚರಣೆ, ನೋವು, ದ್ವೇಷ, ಅಸೂಯೆ,

ಪ್ರೀತಿ, ಪ್ರೇಮ, ಕಾಮ, ಕನಸು, ಕಲ್ಪನೆ ಇತ್ಯಾದಿ ಮಾನವ ಗುಣಾವಗುಣಗಳನ್ನು ಹೊತ್ತು ಬಂದ ಒಂದು ಸಾಹಿತ್ಯ ಪ್ರಕಾರ ಅದನ್ನೊಂದು ಕಲೆಯಾಗಿಸಿ ಅಭಿವ್ಯಕ್ತಿಸಿದ್ದು ನಮ್ಮ ಜನಪದರ ವಿಶಿಷ್ಟ ಪ್ರತಿಭೆ, ಅಲ್ಲಿ ಭಾಷೆ ಇದೆ, ಸಾಹಿತ್ಯ ಇದೆ, ಮನಶಾಸ್ತ್ರದ ಅಂಶಗಳಿವೆ. ಮಾನವಶಾಸ್ತ್ರದ ಗುಣಗಳಿವೆ, ಚಾರಿತ್ರಿಕ ಹಾಗೂ ಸಮಾಜಿಕ ಘಟನೆಗಳ ಚಿತ್ರಣಗಳಿವೆ. ಮಾನವನ ಹಿರಿಕಿರಿತನದ ಗುಣಾವಗುಣಗಳಿವೆ. ಲೌಕಿಕ, ಅಲೌಕಿಕ, ಮಾನುಷ, ಅತಿಮಾನುಷ, ಅಷ್ಟೇ ಏಕೆ ಕಾಲ್ಪನಿಕ ಜಗತ್ತಿನ ವಿಷ್ಮಯಕಾರಿ ಅಂಶಗಳು ಪ್ರಾಣಿ ಪ್ರಪಂಚದ ಅದ್ಭುತ ಸಂಗತಿಗಳು ಅಲ್ಲಿ ದಟ್ಟಸಿವೆ.

ಈ ಜನಪದ ಕಥೆಗಳ ಉದ್ದೇಶವೇ ಒಂದು ರೀತಿಯಲ್ಲಿ ವೈಶಿಷ್ಟ್ಯ ಪೂರ್ಣ ರಂಜನೆ, ಬೋಧನೆ, ಪ್ರಚೋದನೆಗಳ ಸ್ವರೂಪವನ್ನು ಗಮನಿಸಿದಾಗ ಇವುಗಳ ಪರಿಣಾಮಕಾರಿಯಾದ ಅಂಶಗಳನ್ನು ಹೊರಚೆಲ್ಲುತ್ತವೆ. ಅವುಗಳ ಮನರಂಜನೆಯಷ್ಟೇ ಬೋಧನಾತ್ಮಕ ಕಥೆಯೂ ಮುಖ್ಯವಾದುವೇ ಮಾನವ ಹೀಗೆ ಬದುಕಬೇಕು, ಲೋಕದಲ್ಲಿ ಅವನು ಹೇಗೆ ವರ್ತಿಸಬೇಕು ಎಂಬ ರೀತಿಯ ಶಿಕ್ಷಣಾತ್ಮಕ ದೃಷ್ಟಿ ಅಲ್ಲಿನ ಬಹುಪಾಲು ಕಥೆಗಳಲ್ಲಿ ಕಂಡು ಬರುತ್ತದೆ. ಅವು ಆಯಾ ಸಮುದಾಯದ ಸಂಸ್ಕೃತಿಯನ್ನು ರೂಪಿಸುವ ನೀತಿ ಪ್ರಧಾನ ಕಥೆಗಳೆಂದರೂ ಆಗುತ್ತದೆ.

ಒಂದು ಸಮುದಾಯವನ್ನು ಅರ್ಥಮಾಡಿಕೊಳ್ಳುವಲ್ಲಿ ಆ ಸಮುದಾಯದ ಜನ ಜೀವನ ವಿಧಾನವನ್ನು ಆ ಸಮುದಾಯದಲ್ಲಿ ಪ್ರಚಲಿತವಿರುವ ಕಥೆಗಳು ನಿರ್ದೇಶಿಸುತ್ತವೆ. ಒಂದು ಕಥೆಯ ಗರ್ಭವನ್ನು ಹೊಕ್ಕು ನೋಡಿದಾಗ ಅಲ್ಲಿ ಒಂದು ಸಮುದಾಯದ ನಂಬಿಕೆ, ಆಚರಣೆ ನ್ಯಾಯ, ನೀತಿ, ಧರ್ಮ, ಜೀವನದಮೌಲ್ಯ ಹೇಗೆ ಹತ್ತು ಹಲವು ಸುಳಿವು, ಹೊಳಹುಗಳು ಕಾಣಸಿಗುತ್ತದೆ. ಮರಿಯಮ್ಮನಹಳ್ಳಿಯಲ್ಲಿ ನೆಲೆಸಿರುವ ಸಮುದಾಯದ ಕತೆಗಳಲ್ಲಿ 'ಪ್ಲೇಗ್ ಮಾರಿಯ ಕತೆ'ಯು ಬಹು ಮುಖ್ಯವಾದುದು. ಊರಿನಲ್ಲಿ ಬಹುಕಾಲ ಪ್ಲೇಗ್ ಹರಡಿದ ಸಂಗತಿಯನ್ನು ಬಹುರಮ್ಯವಾಗಿ ಈ ಕಥೆಯಲ್ಲಿ ಹೇಳುತ್ತಾರೆ. ಉಳಿದ ಕಥೆಗಳಲ್ಲಿ ಮಕ್ಕಳಿಗೆ ಹೇಳುವಂತಹ ಪ್ರಾಣಿ ಕಥೆ ಮನೋರಂಜನ ಕಥೆ, ನೀತಿ ಕಥೆ ಕಂಡು ಬರುತ್ತವೆ.

**ಪ್ಲೇಗು ಮಾರಿಯ ಕತೆ :**

ಒಂದು ಸಲ ಪ್ಲೇಗು ರೋಗ ಹರಡಿ ಸಾವಿರಾರು ಜನರು ಸತ್ತರು. ಆಗ ರಾಜನೊಬ್ಬ ತನ್ನ ರಾಜ್ಯದಲ್ಲಿನ ಪುರೋಹಿತರನ್ನೆಲ್ಲಾ ಕರೆಯಿಸಿಕೊಂಡು ಪ್ಲೇಗರೋಗದ ನಿವಾರಣೋಪಾಯಗಳನ್ನು ಬಗೆಗೆ ಚರ್ಚಿಸಿ ಪುರೋಹಿತರಿಗೆ ಕೇಳಿದ "ನನ್ನ ರಾಜ್ಯದಲ್ಲಿ ಪ್ಲೇಗ್‌ರೋಗ ಹರಡದಂತೆ ನೋಡಿಕೊಳ್ಳುವುದು ಹೇಗೆ?, ನನ್ನ ಜನರನ್ನು ಬದುಕಿಸುವುದು ಹೇಗೆ?, ಹೇಳಿ" ಎಂದಾಗ ಪುರೋಹಿತ ಎದ್ದು ರಾಜನಿಗೆ "ದೊರೆಗಳೇ ಶಿವನು ಮುನಿದಿದ್ದಾನೆ. ಆದ್ದರಿಂದ ಶಿವನ ಕೃಪೆಗೆ ನಾವೆಲ್ಲ ಪಾತ್ರರಾಗಬೇಕಾದರೆ ರಾಜ್ಯಾದ್ಯಾಂತ ಪಾರ್ಥನೆ ಪೂಜೆ ಮಾಡಬೇಕು". ಕೂಡಲೇ ರಾಜನು ತನ್ನ ರಾಜ್ಯದಲ್ಲಿ ಎಲ್ಲೆಲ್ಲಿ ದೇವಾಲಯಗಳು ಇವೆಯೋ ಅಲ್ಲೆಲ್ಲ ಕಡೆ ಪೂಜೆ ನಡೆಯಬೇಕೆಂದು ಕಟ್ಟಪ್ಪಣೆ ಮಾಡಿದ.

ಪುರೋಹಿತರು ಪೂಜಾ ಕಾರ್ಯಗಳನ್ನು ಆರಂಭಿಸಿ ಒಂದು ವಾರ ಕಳೆಯಿತು ಒಂದು ದಿನ ಮಧ್ಯರಾತ್ರಿಯ ಹೊತ್ತಿನಲ್ಲಿ ಹಿರಿಯ ಪುರೋಹಿತನ ಮುಂದೆ ಶಿವ ಪ್ರತ್ಯಕ್ಷನಾದ, ನಿನಗೇನು ಬೇಕು? ಎಂದು ಕೇಳಿದ. ಆಗ ಪುರೋಹಿತ ಕೈ ಮುಗಿದು ಶಿವನೆ ನಮ್ಮ ರಾಜ್ಯವನ್ನು ಪ್ಲೇಗ್‌ನಿಂದ ನಮ್ಮನೆಲ್ಲ ಪಾರು ಮಾಡು ಎಂದು ಕೇಳಿದ. ಶಿವನು ತಥಾಸ್ತು ನನ್ನ ಸೇವಕ ನಂದಿಯು ನಿಮ್ಮ ರಾಜ್ಯವನ್ನು ಕಾಡುವ ಆ ಮಾರಿಯನ್ನು ನಿವಾರಿಸುತ್ತಾನೆ ಎಂದು ಹೇಳಿ ಮಾಯವಾದ. ಈ ವಿಷಯವನ್ನು ರಾಜನಿಗೆ ಹೇಳಿದಾಗ ರಾಜನು ಪುರೋಹಿತರೆಲ್ಲರಿಗೂ ಬಹುಮಾನ ನೀಡಿದ.

ಈಗ ಮಾರಿಯ ವಿರುದ್ಧ ಜನರನ್ನು ಕಪಾಡುವ ಕೆಲಸ ನಂದಿ ಮಾಡತೊಡಗಿದನು ಒಂದು ರಾತ್ರಿ ಪ್ಲೇಗ್ ಮಾರಿ ನಂದಿಯ ಮುಂದೆ ನಿಂತು ರಾಜ್ಯಕ್ಕೆ ಬರುತ್ತೇನೆ ಎಂದು ಬೆದರಿಸಿತು. ಆಗ ನಂದಿ ಮಾರಿಯ ನಡುವೆ ಘೋರಯುದ್ಧ ನೆಡೆಯಿತು. ಬೆಟ್ಟಗುಡ್ಡ ಉರುಳಿದವು. ಮರಗಳು ಬಿದ್ದವು. ಕಡೆಗೆ ಮಾರಿಯು ರಾಜ್ಯದ ರಾಜಧಾನಿಯಲ್ಲಿ ಒಂದು ದಿನ ಮಟ್ಟಿಗೆ ಉಳಿಯಬಹುದು ಒಬ್ಬನ ಮಾತ್ರ ಬಲಿತೆಗೆದುಕೊಳ್ಳಬಹುದು ಎಂಬ ಒಪ್ಪಂದವಾಯಿತು.

ಆದರೆ ಮರುದಿನ ನಗರದಲ್ಲಿ ಪ್ಲೇಗ್‌ಮಾರಿಯಿಂದ ನೂರು ಮಂದಿ ಸತ್ತರೆಂಬ ಕೋಲಾಹಲ ಎದ್ದಿತು. ಇದನ್ನು ತಿಳಿದ ನಂದಿಗೆ ಎಲ್ಲಿಲ್ಲದ ಕೋಪ ಬಂದು ಪ್ಲೇಗ್ ಮಾರಿಯನ್ನು ಅರಸಿಕೊಂಡು ಹೊರಟಿತು. ಪಾಳು ಬಿದ್ದ ಧೂಳು ಮಯ ನೆಲದಲ್ಲಿ ಮಾರಿ ಕಂಡಿತು. ಮಾರಿಯ ಕತ್ತು ಹಿಡಿದು ನಂದಿ ಅಬ್ಬರಿಸಿತು. "ಮತ್ಕಾಳ ನೀನು ಕೊಟ್ಟ ಮಾತಿಗೆ ತಪ್ಪಿ ನಡೆದೆ, ಒಬ್ಬನ ಬದಲಿಗೆ ನೂರು ಮಂದಿ ಬಲಿತೆಗೆದುಕೊಂಡೆ ನಿನಗೆ ತಕ್ಕ ಶಾಸ್ತಿಮಾಡುತ್ತಾನೆ" ಆಗ ಮಾರಿಯು ನಕ್ಕು ಹೇಳಿತು ಓ ಅಣ್ಣಾ ನಾನು ಕೊಟ್ಟ ಮಾತಿಗೆ ತಪ್ಪಿ ನಡೆಯಲಿಲ್ಲ. ಕೋಪ ಮಾಡಿಕೊಳ್ಳಬೇಡ, ನಾನು ನಿನಗೆ ಕೊಟ್ಟ ಮಾತಿನಂತೆ ಒಬ್ಬನನ್ನು ಮಾತ್ರ ಬಲಿ ತೆಗೆದುಕೊಂಡೆ. ಉಳಿದ ತೊಂಬತ್ತೊಂಬತ್ತು ಮಂದಿ ಹೆದರಿ ಸತ್ತರು ನಾನೇನು ಮಾಡಲಿ? ಅವರಲ್ಲಿ ಜ್ವರದಿಂದ ನರಳುತ್ತಿದ್ದರು. ತಮಗೆ ಮಾರಿ ರೋಗ ಬಂತೆಂದು ಹೆದರಿ ಸತ್ತರು ಇದಕ್ಕೆ ನಾನು ಕಾರಣನೇ? ನಂದಿ ತನ್ನ ಬಿಗಿ ಹಿಡಿತವನ್ನು ಸಡಿಲಿಸಿತು. ಆಗ ಮಾರಿ ಹೋರಟು ಹೋಯಿತು.

**ಹೊತ್ತಿಗೊದಗುವ ಗೆಳೆಯ :**

ಒಂದು ಕೆರೆ ಆ ಕೆರೆಯಲ್ಲಿ ಒಂದು ಆಮೆ ಆ ಕೆರೆಗೆ ಸಮೀಪದಲ್ಲೆ ಒಂದು ಬಿಲ. ಆ ಬಿಲದಲ್ಲಿ ಒಂದು ನರಿ, ಆಮೆ ಮತ್ತು ನರಿ ಒಳ್ಳೆಯ ಸ್ನೇಹಿತರಾಗಿದ್ದವು.

ಒಮ್ಮೆ ಆಮೆ ಮತ್ತು ನರಿ ಕೆರೆಯ ದಂಡೆಯಲ್ಲಿ ಅದು ಇದೂ ಮಾತಾಡಿಕೊಳ್ಳುತ್ತಿದ್ದಾಗ ಅಲ್ಲಿಗೆ ಒಂದು ಚಿರತೆ ಬಂದಿತು. ನರಿ ಗಾಬರಿಯಿಂದ ಓಡಿಹೋಯಿತು. ಬಡ ಪಾಯಿ ಆಮೆಗೆ ಸರಸರನೆ ಹೋಗಲು ಆಗಲಿಲ್ಲ ಒಂದೇ ನೆಗತದಲ್ಲಿ ಜಿಗಿದು ಚಿರತೆ ಆಮೆಯನ್ನು ತನ್ನ ಬಾಯಲ್ಲಿ ಕಚ್ಚಿಕೊಂಡು ಒಂದು ಮರದ ಬುಡಕ್ಕೆ ಹೋಗಿ ತಿನ್ನಲು ಪ್ರಯತ್ನಿಸಿತು. ತನ್ನ ಹಲ್ಲುಗಳಿಂದ ಚೂಪಾದ ಉಗುರುಗಳಿಂದ ಎಷ್ಟು ಪ್ರಯತ್ನಪಟ್ಟರು ಆಮೆಯ ಮೈಮೇಲಿನ ಗಟ್ಟಿಯಾದ ಕವಚವನ್ನು

ಬೇದಿಸುವುದು ಚಿರತೆಗೆ ಸಾಧ್ಯವಾಗಲಿಲ್ಲ. ನರಿ ತನ್ನ ಬಿಲದಲ್ಲಿ ಕುಳಿತು ಇದನ್ನೆಲ್ಲ ನೋಡುತ್ತಿತ್ತು ಆಮೆಯನ್ನು ಪಾರುಮಾಡಲು ಅದಕ್ಕೊಂಡು ಉಪಾಯ ಹೊಳೆಯಿತು. ಅದು ಬಿಲದಿಂದ ಹೊರಗೆ ಬಂದು ಚಿರತೆಯ ಬಳಿಗೆ ಹೋಗಿ ಅತ್ಯಂತ ಮುಗ್ಧತೆಯಿಂದ ಹೇಳಿತು "ಈ ಆಮೆಯ ಮೈ ಮೇಲಿನ ಕವಚವನ್ನು ಸುಲಭವಾಗಿ ಒಡೆಯಲು ಒಂದು ಉಪಾಯ ನನಗೆಗೊತ್ತಿದೆ, ಇದನ್ನು ಕೆರೆಯಲ್ಲಿ ಎಸೆದುಬಿಡು. ಕೆಲವೇ ನಿಮಿಷಗಳಲ್ಲಿ ಕೆರೆಯ ನೀರು ಕವಚವನ್ನು ಮೆದುಗೊಳಿಸುತ್ತದೆ. ಬೇಕಾದರೆ ಪ್ರಯತ್ನಪಡು" ಎಂದಿತು.

ಆಗ ಮೂರ್ಖ ಚಿರತೆಯು "ಹೀಗೂ ಸಾಧ್ಯವೆಂದು ನಾನೆಂದು ತಿಳಿದಿರಲಿಲ್ಲ ಎಂಥ ಒಳ್ಳೆಯ ಉಪಾಯ" ಎಂದು ಹೇಳಿ ಆಮೆಯನ್ನು ಕೆರೆಗೆ ಎಸೆಯಿತು. ಆಮೆ ಇದಕ್ಕಿಂತ ಹೆಚ್ಚಿನದೇನನ್ನು ತಾನೆ ಬಯಿಸಲು ಸಾಧ್ಯ?.

## ಆಮೇಲೆ ಪುರ್‍ರನೆ ಹಾರಿ ಹೋಯಿತು :

ಕತೆ ಹೇಳುವ ಅಜ್ಜಿಗೆ ಕತೆ ಹೇಳಿ ಹೇಳಿ ಸಾಕಾಗಿತ್ತು. ಆದರೆ ಅವಳ ಸುತ್ತ ಕುಂತಿದ್ದ ಮಕ್ಕಳು ಕತೆ ಕೇಳಿ ಸುಸ್ತಾಗಿರಲಿಲ್ಲ. ಅವರಿಗಿನ್ನು ಕತೆ ಕೇಳುವ ಆಸೆ ಇತ್ತು. ಕತೆ ಹೇಳು ಎಂದು ಅವಳನ್ನು ಪೀಡಿಸುತ್ತಿದ್ದರು.

ಆಗ ಅಜ್ಜಿ ಕತೆ ಶುರುಮಾಡಿದಳು "ಒಂದು ಮರದ ತುಂಬಾಹಕ್ಕಿ ಕೂತಿದ್ದವು" ಆಮೇಲೆ? ಎಂದರು ಮಕ್ಕಳು.

ಒಂದು ಹಕ್ಕಿ ಪುರನೆ ಹಾರಿಹೋಯಿತು

ಆಮೇಲೆ?

ಮತ್ತೊಂದು ಹಕ್ಕಿ ಪುರ್‍ರನೆ ಹಾರಿ ಹೋಯಿತು

ಆಮೇಲೆ

ಇನ್ನೊಂದು ಹಕ್ಕಿ ಪುರ್‍ರನೆ ಹಾರಿ ಹೋಯಿತು.

ಇದು ಹೀಗೇಯೇ ತುಂಬ ಹೊತ್ತು ನಡೆಯಿತು. ಕೊನೆಗೆ ಒಂದು ಮಗು ಕೇಳಿತು.

ಇನ್ನು ಎಷ್ಟು ಹೊತ್ತು ಹೀಗೇ ಆಗುತ್ತೇ?.

ಎಲ್ಲಾ ಹಕ್ಕಿಗಳು ಹಾರಿ ಹೋಗುವ ತನಕ ಎಂದಳು ಅಜ್ಜಿ.

## ಕಾಗಕ್ಕ–ಗುಬ್ಬಕ್ಕನ ಕಥೆ :

ಒಂದು ಊರಿನಲ್ಲಿ ಒಂದು ಕಾಗೆ ಬಂದು ಗುಬ್ಬಚ್ಚಿ ಮನೆ ಕಟ್ಟಿಕೊಂಡಿದ್ದವು. ಕಾಗೆಯದು ಮಣ್ಣಿನ ಮನೆ, ಗುಬ್ಬಿಯದು ಕಲ್ಲಿನ ಮನೆ ಅವು ತಮ್ಮ ತಮ್ಮ ಮನೆಯಲ್ಲಿ ದಿನಾಲು ಆಹಾರ ಸಂಗ್ರಹಿಸುತ್ತಿದ್ದವು. ಒಂದು ದಿನ ಜೋರಾಗಿ ಮಳೆ ಬಂದು ಕಾಗೆಯ ಮಣ್ಣಿನ ಮನೆ ಕೊಚ್ಚಿಕೊಂಡು

ಹೋಯಿತು. ಆಗ ಕಾಗೆ – ಗುಬ್ಬಚ್ಚಿ ಆಹಾರ ಸಂಗ್ರಹಿಸಲು ಹೋಗಿದ್ದವು. ಬಂದು ನೋಡಿದಾಗ ಕಾಗಕ್ಕನ ಮನೆ ಬಿದ್ದು ಹೋಗಿತ್ತು. ಗುಬ್ಬಕ್ಕನ ಮನೆ ಚೆನ್ನಾಗಿತ್ತು.

ಕಾಗಕ್ಕೆ ಅಳುವುದನ್ನು ನೋಡಿ ಗುಬ್ಬಕ್ಕ 'ಕಾಗಕ್ಕ ಕಾಗಕ್ಕ ಅಳಬೇಡ ನೀನು ನಮ್ಮ ಮನೆಯಲ್ಲಿ ಬಂದು ಮಲಗು ಎಂದಿತು. ಅದಕ್ಕೆ ಕಡ್ಲಿ ಚೀಲದ ಹತ್ತಿರ ಮಲಗಲು ಜಾಗ ಕೊಟ್ಟಿತು, ರಾತ್ರಿಯಲ್ಲಾ ಚೀಲದಲ್ಲಿದ್ದ ಕಡ್ಲಿಯನ್ನು ಕಾಗಕ್ಕ ತಿಂದು ಹಾಕಿತು. ಮಾರನೇ ದಿನ ಆಹಾರ ಸಂಗ್ರಹಿಸಲು ಹೋಗಲು ಗುಬ್ಬಕ್ಕ ಕರೆದಾಗ ಇಲ್ಲ ಇವತ್ತು ನನಗೆ ಜ್ವರ ಬಂದಿದೆ ನೀನು ಹೋಗಿ ಬಾ ಎಂದು ಕಾಗಕ್ಕ ಹೇಳಿತು. ಅದರ ಮಾತನ್ನು ನಂಬಿ ಗುಬ್ಬಕ್ಕ ಹೋಗಿತು. ಕಾಗಕ್ಕ ಗುಬ್ಬಕ್ಕ ಬರೊದರೊಳಗೆ ಎಲ್ಲವನ್ನು ತಿಂದು ಹಾಕಿತ್ತು. ಸಂಜೆ ಬಂದು ನೋಡಿದ ಗುಬ್ಬಕ್ಕನ ಮನೆ ತುಂಬ ಕಕ್ಕಸು ಮಾಡಿತ್ತು. ಆಗ ಗುಬ್ಬಕ್ಕ ಬಡ ಬಡ ಹೋಗಿ ಬಿಸಿ ಬಿಸಿ ನೀರನ್ನು ಕಾಯಿಸಿ ತಂದು ನಟನೆ ಮಾಡುವಂತೆ ಮಲಗಿದ ಕಾಗೆ ಮೇಲೆ ಬಿಸಿ ನೀರನ್ನು ಹಾಕಿ ಮನೆಯಿಂದ ಓಡಿಸಿತು.

**ಹಾವು ಸತ್ತಿತು: ಹಗೆ ಹರಿಯಿತು :**

ಒಂದು ಊರಿನಲ್ಲಿ ಒಂದು ದೊಡ್ಡ ಆಲದ ಮರ ಇತ್ತು ಆ ಮರದ ಟೊಂಗೆಯಲ್ಲಿ ಕಾಗೆಯ ಸಂಸಾರ, ಹೆಣ್ಣು ಕಾಗೆ ಮೊಟ್ಟೆ ಇಟ್ಟು ಕಾವುಕೊಟ್ಟು ಮರಿ ಮಾಡುತ್ತಿತ್ತು ಆ ಮರದ ಬುಡದಲ್ಲಿ ಬಂದು ಹುತ್ತ. ಆ ಹುತ್ತದಲ್ಲಿ ಒಂದು ಕೃಷ್ಣ ಸರ್ಪ, ಕಾಗೆ ಮರಿ ಮಾಡಿದೊಡನೆ ಆ ಕೃಷ್ಣ ಸರ್ಪ ಟೊಂಗೆ ಏರಿ ಒಂದೊಂದು ಮರಿಗಳನ್ನು ತಿಂದು ಬಿಡುತಿತ್ತು. ಹೀಗೆಯೇ ಹಲವು ಬಾರಿ ಬಂದು ಮರಿಗಳನ್ನು ತಿಂದುಬಿಡುತ್ತಿತ್ತು. ಹೀಗೆ ಹಲವು ಬಾರಿ ನಡೆಯಿತು. ಹೆಣ್ಣು ಕಾಗೆಗೆ ಇದನ್ನು ಸಂಹಿಸಿಕೊಳ್ಳಲು ಆಗಲಿಲ್ಲ. ನಮ್ಮ ಮರಿಗಳೆಲ್ಲ ಈ ಕ್ರೂರ ಸರ್ಪದ ಬಾಯಿಗೆ ತುತ್ತಾದವು ಹೀಗಾದರೆ ನಮ್ಮ ಗತಿ ಏನು? ನಾವು ಬೇರೆ ಎಲ್ಲಿಗಾದರೂ ಹೋಗೋಣ ಎಂದು ಅದು ಗಂಡು ಕಾಗೆಗೆ ಹೇಳಿತು. ಆದರೆ ಗಂಡು ಕಾಗೆಗೆ ಆ ಮರವನ್ನು ಬಿಟ್ಟು ಹೋಗಲು ಮನಸ್ಸಿರಲಿಲ್ಲ. ನಾವು ಏನಾದರೂ ಮಾಡಿ ನಮ್ಮ ಶತ್ರುವನ್ನು ನಾಶ ಮಾಡುವ ಉಪಾಯ ಹುಡುಕಬೇಕು ಎಂದಿತು ಆಗ ಹೆಣ್ಣು ಕಾಗೆ ನಮ್ಮಿಂದ ಅದು ಆಗುವ ಕೆಲಸವಾ? ನಾವು ಎಷ್ಟಾದರೂ ಕಾಗೆಗಳು, ಸರ್ಪವಾದರೋ ಭಯಂಕರವಾಗಿದೆ. ಯೋಚಿಸಿದರೆ ಉಪಾಯ ಹೊಳದೇ ಹೂಳೆಯುತ್ತದೆ. ನಾನು ದುರ್ಬಲನೂ ಕ್ಷುದ್ರನೂ ಆಗಿರಬಹುದು ಆದರೆ ನನಗೆ ಉಪಾಯಗಾರ ಗೆಳಯರಿದ್ದಾರೆ. ನಾವು ಅವರ ಸಹಾಯ ಪಡೆಯಬಹುದು. ಏನೇ ಆಗಲಿ ಈ ಸಲ ಸರ್ಪವನ್ನು ಸುಮ್ಮನೆ ಬಿಡುವುದಿಲ್ಲ ಎಂದು ಗಂಡು ಕಾಗೆ ಸಮಾಧಾನ ಹೇಳಿತು.

ಅದೇ ರೀತಿ ಗಂಡು ಕಾಗೆ ಗೆಳೆಯ ನರಿಯ ಬಳಿಗೆ ಹೋಗಿ ತನ್ನ ಕತೆಯನೆಲ್ಲಾ ಹೇಳಿಕೊಂಡಿತು. ಆಗ ಆ ನರಿ ಕಾಗೆಗೆ ಹೀಗೆ ಬುದ್ಧಿ ಹೇಳಿತು ಈ ದುಷ್ಟನಿಗೆ ನಾವು ಬುದ್ಧಿ ಕಲಿಸಲೇಬೇಕು. ರಾಜರಾಣಿ ಸ್ನಾನ ಮಾಡುವ ಕೊಳ ಇದೆಯಲ್ಲ, ಅಲ್ಲಿಗೆ ಹೋಗು, ರಾಣಿ ಸ್ನಾನ ಮಾಡುವಾಗ ಅವಳ ಕೊರಳ ಹಾರವನ್ನು ಎತ್ತಿ ತಂದು ಹುತ್ತದಲ್ಲಿ ಹಾಕಿಬಿಡು. ಕಾಗೆ

ಒಮ್ಮೆಲೇ ಕೊಳದ ಬಳಿಗೆ ಹಾರಿಹೋಯಿತು ರಾಜಪರಿವಾರದವರು ತಮ್ಮ ಚಿನ್ನದ ಆಭರಣ, ಉಡುಪುಗಳನ್ನು ಕಳಚಿ ಇಡುವುದನ್ನು ಕಾಯುತ್ತ ಅವರು ನೀರಿಗೆ ಇಳಿದು ಸ್ನಾನ ಮಾಡುವಾಗ ರಾಣಿಯ ಕೊರಳ ಹಾರವನ್ನು ಕೊಕ್ಕಿನಲ್ಲಿ ಕಚ್ಚಿಕೊಂಡು ತನ್ನ ಗೂಡಿಗೆ ಹಾರಿಬಂದಿತು. ರಾಜ ಭಟರು ಕತ್ತಿ ಗುರಾಣಿ ಬಿಲ್ಲುಬಾಣಗಳೊಂದಿಗೆ ಕಾಗೆಯ ಹಿಂದೆಯೇ ಓಡೋಡಿ ಬಂದರು. ಸೈನಿಕರು ಬಂದೊಡನೆ ಕಾಗೆ ರಾಣಿಯ ಕೊರಳ ಹಾರವನ್ನು ಹಾವಿನ ಹುತ್ತದಲ್ಲಿ ಹಾಕಿಬಿಟ್ಟಿತು. ರಾಜಭಟರು ಹುತ್ತವನ್ನು ಅಗೆದಾಗ ಕೃಷ್ಣಸರ್ಪ ಹೆಡೆ ಎತ್ತಿ ಬುಸ್ಸೆಂದಿತು. ಭಟರು ಸರ್ಪವನ್ನು ಹೊಡೆದುಕೊಂದರು. ಕೊರಳ ಹಾರವನ್ನು ಎತ್ತಿಕೊಂಡು ಕೊಳದ ಕಡೆ ತೆರಳಿದರು. ಹಾವು ಸತ್ತಿತು. ಹಗೆ ಹರಿಯಿತು ಕಾಗೆ ಸಂಸಾರ ಸುಖವಾಗಿ ಬದುಕಿತು.

**ಗುರು ಮತ್ತು ಮೂರ್ಖ :**

ಒಬ್ಬ ಗುರುವಿಗೆ ದೇಶಾದ್ಯಂತ ನೂರಾರು ಶಿಷ್ಯರಿದ್ದರು ಈ ಗುರು ದೊರೆಯಂತೆ ಬದುಕುತ್ತಿದ್ದ, ಊರೂರಿಗೆ ಪಲ್ಲಕ್ಕಿಯಲ್ಲಿ ಕುಳಿತು ಸಂಚಾರ ಮಾಡುತ್ತಿದ್ದ ತನ್ನ ಅಭಿಮಾನಿಗಳನ್ನು ಬೇಟಿ ಮಾಡಿ ಅವರಿಂದ ಉಡುಗೊರೆಗಳನ್ನು ಕಾಣಿಕೆಗಳನ್ನು ಸ್ವೀಕರಿಸುತ್ತಿದ್ದ ತನ್ನೆಲ್ಲಾ ಶಿಷ್ಯರನ್ನು ಒಂದು ಸಲ ಬೇಟಿ ಮಾಡಲಿಕ್ಕೆ ಅವನಿಗೆ ಹನ್ನೆರಡು ವರ್ಷ ಬೇಕಾಗುತಿತ್ತು.

ಒಂದು ಸಲ ಹೀಗೆ ಸಂಚಾರ ಮಾಡುತ್ತಿದ್ದಾಗ ಮರಿಯಮ್ಮನಹಳ್ಳಿಯ ಹೊರ ವಲಯದಲ್ಲಿ ಮೂರ್ಖನಂತೆ ನಟಿಸುತ್ತಿದ್ದ ಒಬ್ಬಾತ ಅವನನ್ನು ತಡೆದ ಅವನು ಮಾರ್ಗದ ಮಧ್ಯೆ ನಿಂತಿದ್ದ, ಗುರು ತನ್ನೊಂದಿಗೆ ಮಾತನಾಡದಿದ್ದರೆ, ಪಲ್ಲಕ್ಕಿಯನ್ನು ಮುಂದೆ ಹೋಗಲು ಬಿಡುವುದಿಲ್ಲ ಎಂದು ಹೇಳಿದ ಗುರು ಅಸಹನೆಯಿಂದ ಕುದಿಯುತ್ತಾ, ಅವನೊಡನೆ ಅರೆಕ್ಷಣದ ಮಟ್ಟಿಗೆ ಮಾತನಾಡಲು ಒಪ್ಪಿಕೊಂಡು ನಿನಗೇನು ಬೇಕು? ಎಂದು ಕೇಳಿದನ್ನು ಆಗ ಆ ಮೂರ್ಖ ಕೇಳಿದ "ನನಗೆ ಸ್ವರ್ಗಕ್ಕೆ ಹೋಗಬೇಕಾಗಿದೆ. ನೀನೊಬ್ಬ ಗುರು ನಿನಗೆ ಸ್ವರ್ಗದ ದಾರಿ ಗೊತ್ತಿದೆಯಂತೆ." ಗುರು ಗಟ್ಟಿಯಾಗಿ ನಕ್ಕು ನೀನು ಸ್ವರ್ಗಕ್ಕೆ ಹೋಗಬೇಕೇ? ಅದು ಬಹಳ ಸುಲಭ ನೀನು ನಿನ್ನ ಎರಡೂ ಕೈಗಳನ್ನು ಮೇಲಕ್ಕೆ ಎತ್ತಿ ಆಕಾಶ ನೋಡುತ್ತಾ ನಿಲ್ಲು, ಸ್ವರ್ಗಕ್ಕೆ ಹೋಗುತ್ತೀ ಎಂದು ಹೇಳಿದ ಅಷ್ಟೇಯೇ ಎಂದು ಆ ಮೂರ್ಖ ಹೇಳಿದ ಅವನು ಬೇರೆ ಏನನ್ನಾದರೂ ಕೇಳುವ ಮೊದಲೇ ಗುರುವಿನ ಸವಾರಿ ಅಲ್ಲಿಂದ ಹೊರಟು ಬಿಟ್ಟಿತು.

ಹನ್ನೆರಡು ವರ್ಷಗಳು ಕಳೆದವು. ಗುರು ಮತ್ತೆ ಮರಿಯಮ್ಮನ ಹಳ್ಳಿಗೆ ಬಂದ. ಆ ಮೂರ್ಖ ತನ್ನೆರಡೂ ಕೈಗಳನ್ನು ಮೇಲೆತ್ತಿ ಆಕಾಶದ ಕಡೆಗೆ ಮುಖ ಮಾಡಿ ನಿಂತಿರುವುದನ್ನು ಕಂಡ, ಅವನ ತಲೆಕೂದಲು ಗಡ್ಡ ಎಲ್ಲ ನೆರೆತಿದ್ದವು ಉಗುರುಗಳು ಉದ್ದವಾಗಿ ಬೆಳೆದಿದ್ದವು. ಬಟ್ಟೆಗಳೆಲ್ಲ ಚಿಂದಿಯಾಗಿದ್ದವು. ಅವನಿಗೆ ಇದ್ಯಾವುದರ ಪರಿವೆಯೂ ಇರಲಿಲ್ಲ ಕಣ್ಣುಗಳು ಆಕಾಶದಲ್ಲಿ ನೆಟ್ಟಿದ್ದವು.

ಗುರು ಅವನ ಅವನ ಸಮೀಪ ಬಂದಾಗ ಆಶ್ಚರ್ಯಕರವಾದ ಘಟನೆಯೊಂದು ನಡೆಯಿತು. ಆ ಮೂರ್ಖನ ದೇಹ ಮೆಲ್ಲಮೆಲ್ಲನೆ ಮೇಲೇರಿತು ಗುರುವಿಗೆ ಎಲ್ಲ ಹೊಳೆಯಿತು. ಅವನು ಕೂಡಲೆ ಪಲ್ಲಕ್ಕಿಯಿಂದ ಕೆಳಗಿಳಿದು, ಆ ಮೂರ್ಖನ ಕಾಲುಗಳಿಗೆ ಜೋತುಬಿದ್ದು ತಾನೂ ಸ್ವರ್ಗಕ್ಕೆ ಹೋದ. ಏಕೆಂದರೆ ಗುರು ಬೇರೆ ಯಾವ ರೀತಿಯಿಂದಲೂ ಸ್ವರ್ಗಕ್ಕೆ ಹೋಗಲು ಸಾಧ್ಯವಿರಲಿಲ್ಲ.

**ನೀರ ಮೇಲೆ ನಡಿಗೆ :**

ಒಮ್ಮೆ ಸಾಧು ನದಿ ತೀರದಲ್ಲಿ ಧ್ಯಾನ ಮಾಡುತ್ತಿದ್ದ ಇದನ್ನು ಕಂಡು ಇನ್ನೊಬ್ಬ ಸಾಧುನಿಗೆ ತನ್ನ ಸಿದ್ದಿಯನ್ನು ಧ್ಯಾನಾಸಕ್ತ ಸಾಧುವಿನ ಮುಂದೆ ಪ್ರದರ್ಶಿಸಬೇಕೆಂದು ಅನ್ನಿಸಿತು. ಹೀಗಾಗಿ ಅವನು ನೀರ ಮೇಲೆ ನಡೆಯುತ್ತ ಮೊದಲನೆ ಸಾಧುವಿನ ಬಳಿಗೆ ಬಂದು ನಾನು ಈಗ ಏನು ಮಾಡಿದೆ ಎಂಬುದನ್ನು ನೀನು ನೋಡಿದೆಯೊ? ಎಂದು ಕೇಳಿದ ಓಹೋ ನೋಡಿದೆ, ನೀನು ನದಿ ನೀರಿನ ಮೇಲೆ ನಡೆದು ಬರುವುದನ್ನು ನೋಡಿದೆ, ಈ ವಿದ್ಯೆಯನ್ನು ನೀನು ಎಲ್ಲಿ ಕಲಿತೆ? ಎಂದು ಮೊದಲನೆಯ ಸಾಧು ಕೇಳಿದ, ಆಗ ಎರಡನೇ ಸಾಧು "ನಾನು ಹಿಮಾಲಯದಲ್ಲಿ ಸತತವಾಗಿ ಹನ್ನೆರೆಡು ವರ್ಷಗಳ ಕಾಲ ಯೋಗಾಭ್ಯಾಸ ಮಾಡಿದೆ ವಾರದಲ್ಲಿ ಆರು ದಿನ ಉಪವಾಸ ಮಾಡಿದೆ. ಒಂಟಿ ಕಾಲಲ್ಲಿ ನಿಂತು ಕಠಿಣ ತಪಸ್ಸು ಮಾಡಿದೆ ಹೀಗೆ ಮಾಡಿದ್ದರಿಂದ ಈ ಸಿದ್ಧಿಯನ್ನು ಗಳಿಸಿದೆ" ಎಂದು ನುಡಿದ.

"ಮೊದಲನೆಯ ಸಾಧು ನಿಜವಾಗಿಯೂ? ಇಷ್ಟು ಮಾಡ್ಲಿಕ್ಕೆ ನೀನು ಅಷ್ಟೆಲ್ಲ ಯಾಕೆ ಕಷ್ಟಪಡಬೇಕಿತ್ತು? ನಮ್ಮ ದೋಣಿಯವನು ಕೇವಲ ಎರಡು ಕಾಸಿಗೆ ನಿನ್ನನ್ನು ಯಾವಾಗಬೇಕೆಂದರೆ ಆವಾಗ ಹೊಳೆ ದಾಟಿಸುತ್ತಾನಲ್ಲ" ಎಂದು ಹೇಳಿದ.

**ನಾಲ್ವರು ಸಿದ್ದರು :**

ಒಮ್ಮೆ ನಾಲ್ಕು ಜನ ಬ್ರಾಹ್ಮಣರು ದೇಶವನ್ನೆಲ್ಲ ಸುತ್ತಿ ಅಪಾರವಾದ ಜ್ಞಾನ ಸಂಗ್ರಹ ಮಾಡಿದರು ತಮ್ಮ ಸಾಧನೆ ಸಿದ್ಧಿಯನ್ನು ಪ್ರದರ್ಶಿಸಬೇಕೆಂದು ಬಯಸಿದರು ಹೀಗಾಗಿ ಅವರು ಒಂದು ಕಾಡಿನಲ್ಲಿ ಒಟ್ಟು ಸೇರಿದರು. ಅವರಲ್ಲಿ ಒಬ್ಬ ಬ್ರಾಹ್ಮಣನಿಗೆ ಹುಲಿಯ ತೊಡೆಯ ಮೂಳೆ ಸಿಕ್ಕಿತು ಅದನ್ನು ಕಂಡ ಅವನು, ನಾನು ಇದರಿಂದ ಹಲಿಯ ಅಸ್ಥಿಪಂಜರವನ್ನೇ ನಿರ್ಮಿಸಬಲ್ಲೆ ಎಂದು ಅಸ್ಥಿ ಪಂಜರವನ್ನು ನಿರ್ಮಿಸಿದನು. ಎರಡನೇ ಬ್ರಾಹ್ಮಣನು ನಾನು ಇದಕ್ಕೆ ಚರ್ಮ ರಕ್ತ ಮಾಂಸಗಳನ್ನು ನೀಡಬಲ್ಲೆ ಎಂದು ಹೇಳಿ ಹಾಗೆ ಮಾಡಿದನು. ಅವರ ಕಣ್ಣೆದುರೇ ಜೀವ ಸದೃಶ್ಯವಾದ ಹುಲಿಯ ರೂಪ ತಾಳಿತು.

ಮೂರನೇ ಬ್ರಾಹ್ಮಣನು ನಾನೇನು ಮಾಡುತ್ತೇನೆ ಗೊತ್ತಾ? ಅದಕ್ಕೆ ಜೀವ ತುಂಬುತ್ತೇನೆ ಎಂದನು.

ಉಳಿದವರಷ್ಟು ಸಿದ್ಧಿಯನ್ನುಗಳಿಸಿರದ ನಾಲ್ಕನೇಯ ಬ್ರಾಹ್ಮಣನು ಸ್ವಲ್ಪ ತಡೆ ನಾನು ನಿನ್ನನ್ನು ನಂಬುತ್ತೇನೆ ಅದಕ್ಕಕೆ ಜೀವ ತುಂಬುವುದು ಬೇಡ ಎಂದನು. ಏನಾದರೂ ಮಾಡುವ ಶಕ್ತಿ ಇದ್ದು ಅದನ್ನು ಮಾಡಿ ತೋರಿಸದಿದ್ದರೆ. ಪ್ರಯೋಜನವೇನು? ನನ್ನ ಈ ಸಿದ್ಧಿಯನ್ನು ಪರೀಕ್ಷಿಸಿ ನೋಡುವ ಅವಕಾಶವೇ ಇದುವರೆಗೆ ನನಗೆ ಒದಗಿ ಬರಲಿಲ್ಲ. ನಾನೀಗ ಇದಕ್ಕೆ ಜೀವ ಕೊಡಲು ಸಿದ್ಧ, ನೀವು ನೋಡುತ್ತೀರಿ ಎಂದ. ಮೂರನೆಯ ಬ್ರಾಹ್ಮಣ 'ಹುಲಿಯ ಆಕೃತಿಗೆ ಜೀವ ತುಂಬಲೇ ಬೇಕೆಂದಿದ್ದಾರೆ. ಸ್ವಲ್ಪ ತಡೆ ನಾನು ಈ ಮರವನ್ನು ಏರಿದ ಮೇಲೆ ನೀನು ಹಾಗೆ ಮಾಡು' ಎಂದು ನುಡಿದು ಬೇಗ ಬೇಗನೆ ಮರವನ್ನು ಏರಿ ಕುಳಿತ.

ಮೂರನೆಯ ಬ್ರಾಹ್ಮಣ ತನ್ನ ಮಂತ್ರ ಸಿದ್ಧಿಯಿಂದ ಆ ಹುಲಿಗೆ ಜೀವದಾನ ಮಾಡಿದ, ಜೀವ ಪಡೆದ ಹುಲಿ ಹಸಿದಿತ್ತು. ಆಹಾರಕ್ಕಾಗಿ ಸುತ್ತಮುತ್ತ ನೋಡಿ ಆ ಮೂವರು ಬ್ರಾಹ್ಮಣರ ಮೇಲೆರಗಿತು. ಭಯಭೀತರಾದ ಆ ಬ್ರಾಹ್ಮಣರಿಗೆ ಓಡಿಹೋಗಲು ಆಗಲಿಲ್ಲ. ಹುಲಿ ಅವರನ್ನು ಕೊಂದು ಮಾಂಸವನ್ನೆಲ್ಲ ತಿಂದು ಮೂಳೆಗಳನ್ನು ಮಾತ್ರ ಉಳಿಸಿತು. ಭಯ–ಗಾಬರಿಗಳಿಂದ ಮುದ್ದೆಯಾದ ಆ ನಾಲ್ಕನೆಯ ಬ್ರಾಹ್ಮಣನಿಗೆ ಏನು ಮಾಡಲಾಗಲಿಲ್ಲ ಹುಲಿ ಮಾಂಸವನ್ನು ತಿಂದು ಹೋದ ಮೇಲೆ ಅವನು ದುಃಖ ಭಾರದಿಂದ ಮರದಿಂದ ಇಳಿದು ತನ್ನ ಮಿತ್ರರ ಶವಸಂಸ್ಕಾರದ ಸಿದ್ಧತೆಗಳಿಗಾಗಿ ಮನೆಗೆ ತೆರಳಿದ

**ತಾನು ಯಾರೆಂದು ಗೊತ್ತಿಲ್ಲದ ಹುಲಿ :**

ಗರ್ಭಿಣಿ ಹುಲಿಯೊಂದು ಒಮ್ಮೆ ಕುರಿ ಮಂದಿಯ ಮೇಲೆ 'ನೆಗೆಯಿತು. ಹಾಗೆ ನೆಗೆದೊಡನೆಯೆ ಅದಕ್ಕೆ ಹೆರಿಗೆ ಬೇನೆ ಪ್ರಾರಂಭವಾಯಿತು ಮರಿಯೊಂದಕ್ಕೆ ಜನ್ಮ ನೀಡಿ ಹುಲಿ ಅಲ್ಲೇ ಸತ್ತು ಹೋಯಿತು.

ಕರುಣಾಳುಗಳಾದ ಕುರಿಗಳು ಆ ಹುಲಿಮರಿಗೆ ಹಾಲುಣಿಸಿ ಸಾಕಿ ಸಲಹಿ ದೊಡ್ಡದು ಮಾಡಿದವು, ಅವು ಹುಲ್ಲು ತಿನ್ನುವಾಗ ಹುಲಿಮರಿಯೂ ಹುಲ್ಲು ತಿನ್ನುತ್ತಿತ್ತು. ಕುರಿಗಳು ಬ್ಯಾ ಬ್ಯಾ ಎಂದು ಅರಚಿಕೊಳ್ಳುವಾಗ ಅದೂ ಹಾಗೆಯೇ ಅರಚುತ್ತಿತ್ತು. ಅದರ ಧ್ವನಿ ವಿಚಿತ್ರವಾಗಿತ್ತು. ಹುಲಿಯ ಹಾಗೆ ಬೆಳೆದರೂ ಕೂಡ ಅದರ ಗುಣವೆಲ್ಲ ಕುರಿಗಳದ್ದೇ. ಒಂದು ದಿನ ಈ ಹುಲಿ ಮರಿ ಹುಲ್ಲು ಮೇಯುವುದನ್ನು ಒಂದು ದೊಡ್ಡ ಹುಲಿಯು ವಿಸ್ಮಯದಿಂದ ನೋಡಿತು. ದೊಡ್ಡಹುಲಿ ಹತ್ತಿರ ಒಂದೊಡನೆ ಕುರಿಯ ಗುಂಪು ಭಯದಿಂದ ಚದುರಿತು, ಹುಲಿಮರಿ ಮಾತ್ರ ಹಿಂದೆ ಉಳಿಯಿತು. ಅದು ಭಯದಿಂದ ಬ್ಯಾ ಬ್ಯಾ ಎಂದು ಅರಚಿತು ದೊಡ್ಡ ಹುಲಿ ಮರಿಯೊಡನೆ ಸ್ನೇಹ ಬೆಳಸಿಕೊಂಡು ಬಂದು ಕೊಳದ ಬಳಿಗೆ ಕರೆದೊಯಿತು. 'ಈ ನೀರಿನಲ್ಲಿ ನಿನ್ನನ್ನು ನೀನು ನೋಡಿಕೋ ನೀರಿನಲ್ಲಿ ಕಾಣುವ ಪ್ರತಿಬಿಂಬ ನಿನ್ನದು, ಈಗ ನನ್ನ ಕಡೆಗೆ ನೋಡು. ನೀನು ನನ್ನಂತೆಯೇ ಇದ್ದೀಯಾ, ನೀನು ಕುರಿಯಲ್ಲ, ಹುಲಿ ನಿನ್ನ ಆಹಾರ ಹುಲ್ಲು ಅಲ್ಲ ಹುಲಿಮರಿ' ಎಂದು ಹೇಳಿತು.

ಹುಲ್ಲು ತಿನ್ನುವ ಹುಲಿಗೆ ಇದನ್ನು ನಂಬುವುದಕ್ಕೆ ಆಗಲಿಲ್ಲ. ದೊಡ್ಡ ಹುಲಿ ಬಗೆಬಗೆಯಾಗಿ ಮನವರಿಕೆಗೆ ಮಾಡಿಕೊಟ್ಟಿತು. ಮೊದಮೊದಲು ಹುಲಿ ಮರಿ ಮಾಂಸ ತಿನ್ನದೆ ಹುಲ್ಲು ತಿನ್ನುತ್ತಿತ್ತು. ಕುರಿಯಂತೆ ಅರಚುತಿತ್ತು. ಒಂದು ದಿನ ದೊಡ್ಡ ಹುಲಿ ಒತ್ತಾಯ ಮಾಡಿ ಮಾಂಸದ ತುಂಡೊಂದನ್ನು ಅದಕ್ಕೆ ತಿನ್ನಿಸಿತು. ಹುಲಿಮರಿಗೆ ರಕ್ತದ ರುಚಿ ಸಿಕ್ಕಿತು. ಅಂದಿನಿಂದ ಕರಿಯಂತೆ ಹುಲ್ಲು ತಿನ್ನುವುದನ್ನು ಅರಚುವುದನ್ನು ನಿಲ್ಲಿಸಿತು. ತಾನು ಕುರಿಯಲ್ಲ ಹುಲಿ ಎಂದು ತಿಳಿದು ದೊಡ್ಡ ಹುಲಿಯೊಂದಿಗೆ ಸೇರಿಕೊಂಡು ಹುಲಿಯ ಬದುಕು ಬದುಕತೊಡಗಿತು.

**ಉದ್ದ ಗಡ್ಡದ ಖಾಜಿ :**

ಒಬ್ಬ ಖಾಜಿ ಮುಸ್ಸಂಜೆ ಹೊತ್ತಿನಲ್ಲಿ ಎಣ್ಣೆ ದೀಪದ ಬೆಳಕಿನಲ್ಲಿ ಒಂದು ಹಳೆಯ ಪುಸ್ತಕವನ್ನು ಓದುತ್ತಿದ್ದ ಅದರಲ್ಲಿ ಒಂದು ವಾಕ್ಯ ಹೀಗಿತ್ತು. "ಉದ್ದನೆ ಗಡ್ಡ ಇರುವವರು ಸಾಮಾನ್ಯವಾಗಿ ಮೂರ್ಖರಾಗಿರುತ್ತಾರೆ ಎಂದಿತ್ತು. ತನ್ನಲ್ಲಿರುವ ವಿವೇಕಕ್ಕಾಗಿ ಜನ ತನ್ನನ್ನು ಗೌರವಿಸಬೇಕೆಂದು ಅದನ್ನು ಬಯಸಿದ್ದ ಅವನು ಆ ಪಟ್ಟಣದಲ್ಲೇ ಅತ್ಯಂತ ಉದ್ದದ ಗಡ್ಡ ಹೊಂದಿದವನಾಗಿದ್ದ ಪುಕ್ತಕದಲ್ಲಿರುವ ಈ ವಾಕ್ಯವನ್ನು ಓದಿದವರೆಲ್ಲರೂ ಖಾಜಿಯನ್ನು ದಡ್ಡನೆಂದು ಭಾವಿಸುವುದಿಲ್ಲವೇ? ಹಾಗಾಗಿ ಇದನ್ನು ಖಾಜಿಗೆ ಸಹಿಸುವುದಾಗಲಿಲ್ಲ. ಆತ ತಡಮಾಡದೆ ತನ್ನ ಗಡ್ಡವನ್ನೆಲ್ಲ ಒಟ್ಟು ಮಾಡಿ ಕೈಲ್ಲಿ ಹಿಡಿದು ಅದರ ತುದಿಯನ್ನು ಎಣ್ಣೆ ದೀಪಕ್ಕೆ ಒಡ್ಡಿದ ರೇಶ್ಮೆಯಂತೆ ನುಣುಪಾದ ಅವನ ಉದ್ದವಾದ ಗಡ್ಡ ಹೊತ್ತಿಕೊಂಡು ಉರಿಯಿತು. ಅವನ ಕೈಬೆರಳು ಸುಡುವ ಹಾಗೆ ಆದಾಗ ಗಡ್ಡವನ್ನು ಕೊಂಚ ಮೇಲೆ ಹಾರಿಸಿದ ಆಗ ಬೆಂಕಿಯ ಜ್ವಾಲೆ ಹರಡಿ ಅವನ ಮೀಸೆ, ಹುಬ್ಬು ಕೊನೆಗೆ ಅವನ ತಲೆಕೂದಲೂ ಸುಟ್ಟು ಹೋಯಿತು. ಉದ್ದಗಡ್ಡದವರು ನಿಜಕ್ಕೂ ಮೂರ್ಖರಾಗಿರುತ್ತಾರೆ ಎಂದು ಈಗ ಅವನಿಗೆ ಗೊತ್ತಾಯಿತು.

**೬.೨ ಜನಪದ ಗೀತೆಗಳು :**

ಜನಪದ ಸಾಹಿತ್ಯದ ಒಂದು ಮುಖ್ಯ ಪ್ರಕಾರ ಇದನ್ನು ಹಳ್ಳಿಯ ಹಾಡು ಎಂದೂ ಕರೆಯಲಾಗುತ್ತದೆ. ಜನ ಸಮುದಾಯದಲ್ಲಿ ವಾಕ್ಪರಂಪರೆಯಲ್ಲಿ ನಿರಂತರವಾಗಿ ಉಳಿದು ಬಂದಿರುವ ಹಾಡುಗಳೇ ಜನಪದ ಗೀತೆ ಎನಿಸಿಕೊಳ್ಳುತ್ತವೆ. ಜನಪದ ಸಾಹಿತ್ಯದ ಇತರ ಪ್ರಕಾರಗಳಂತೆ ಜನಪದ ಗೀತೆಗಳ ಉಗಮ, ಕಾಲ, ಯಾವುದೆಂದು ಖಚಿತವಾಗಿ ಹೇಳಲಾಗುವುದಿಲ್ಲ. ಆದರೆ ಅವು ಹುಟ್ಟಿ ಬೆಳೆದದ್ದಂತೂ ಶುದ್ಧವಾದ ವಾಕ್ಪರಂಪರೆಯಲ್ಲಿಯೇ, ಇದಕ್ಕೆ ಕಾರಣರಾದವರು ಮಾತ್ರ ಜನಪದರು. ಜನಪದ ಗೀತೆಗಳನ್ನು ರಚಿಸುವ, ಹಾಡುವ ನಿಶ್ಚಿತ ಕ್ರಮಗಳಾವುವೂ ಸಾಮಾನ್ಯವಾಗಿ ಇಲ್ಲ. ಕೇಳಿ ನೆನಪಿಟ್ಟುಕೊಳ್ಳುವುದರಿಂದ ಹಾಡುವವರ ಜೊತೆ ಧ್ವನಿಗೂಡಿಸುವದರಿಂದ ಅವುಗಳನ್ನು ಕಲಿಯಲಾಗುತ್ತದೆ. ಈ ಮಾದರಿಯಲ್ಲೇ ಅವು ತಲೆಮಾರಿನಿಂದ ತಲೆಮಾರಿಗೆ ಹರಿದು ಬಂದಿದೆ.

ಪ್ರತಿ ಭೂ ಸಂಪನ್ನವಾದ ಸಹಚರ್ಯ ಅನಿವಾರ್ಯವಾದದ್ದು, ಕ್ರಿಯಾತ್ಮಕತೆ ಜನಪದ ಗೀತೆಗಳ ಬಹುಮುಖ್ಯ ಗುಣ ನಿರ್ದಿಷ್ಟ ಸಂದರ್ಭಗಳಲ್ಲಿ ಬಳಕೆಯಾಗುವ ಜನಪದ ಗೀತೆಗಳು

ಸಾಮಾಜಿಕ, ಸಾಮೂಹಿಕ ಉದ್ದೇಶಗಳನ್ನು ನೆರವೇರಿಸುವುಂತಾಹವಾಗಿವೆ, ಸಮಾಜ ಜೀವನದಲ್ಲಿ ಹಾಸುಹೊಕ್ಕಾಗಿವೆ. ಉದಾ:- ಸೋಬಾನೆ ಪದಗಳು, ನಾಟಿ ಪದಗಳು, ದೇವರ ಪದಗಳು ಬದುಕಿನ ಪ್ರಮುಖ ಘಟ್ಟಗಳಲ್ಲಿ ಅಥವಾ ವ್ಯಕ್ತಿಯ ಜೀವನದ ನಿರ್ಣಾಯಕ ತಿರುವುಗಳಾದ ಬಾಲ್ಯ, ಯೌವ್ವನ, ಮದುವೆ, ಸಾವು ಇಂಥ ಸಂದರ್ಭಗಳಲ್ಲಿ ಹಾಡುಗಾರಿಕೆ ಜೊತೆಯಾಗುತ್ತದೆ.

ಜನಪದ ಗೀತೆಗಳಲ್ಲಿ, ಗೀತೆಗಳು ಮತ್ತು ಕಥನ ಗೀತೆಗಳು ಎನ್ನುವ ಎರಡು ದೊಡ್ಡ ಗುಂಪುಗಳನ್ನು ವಿಭಾಗಿಸಬಹುದು. ಗೀತೆಗಳಲ್ಲಿ ತೀವ್ರವಾದ ಆತ್ಮನಿಷ್ಠೆ ಮತ್ತು ಭಾವ ಪ್ರಖರತೆಯಿಂದ ಕೂಡಿರುವ ಭಾವಗೀತೆಗಳದೇ ಸಿಂಹಪಾಲು. ಇನ್ನುಳಿದಂತೆ ಜೋಗಳ, ಪ್ರಕೃತಿಗೀತೆಗಳು, ಋತುಮಾನದ ಹಾಡುಗಳು, ಪ್ರಣಯ ಗೀತೆಗಳು, ಮದುವೆ ಹಾಡುಗಳು, ಬೇಸಾಯದ ಹಾಡುಗಳು, ಕಾಯಕ ಗೀತೆಗಳು ಇತ್ಯಾದಿಗಳೆಲ್ಲಾ ವಿಭಾಗದಲ್ಲಿಯೇ ದಾಖಲಾಗುವಂಥವು.

ಜನಪದ ಗೀತೆಗಳು ಒಂದು ಸಮುದಾಯದ ಆಸ್ತಿಯಾದರೂ ಅವಗಳನ್ನು ಎಲ್ಲರೂ ಎಲ್ಲ ಸಂದರ್ಭಗಳಲ್ಲೂ ಹಾಡಲು ಬರುವುದಿಲ್ಲ. ಮಾನವ ಅತಿಮಾನುಷ ಶಕ್ತಿಯಲ್ಲಿ ನಂಬಿಕೆಯಿರಿಸಿ ಅವುಗಳೊಡನೆ ಸಂಪರ್ಕ ಹೊಂದುವ ಸಲುವಾಗಿ ಸೃಷ್ಟಿಸಿದ ಪರಮಾರ್ಥ ಗೀತೆಗಳೂ ಜನಪದ ಗೀತೆಗಳಲ್ಲಿ ಇವೆ. ದೇವರಸ್ತುತಿ ಜನಪದ ಬದುಕಿನ ಅನಿವಾರ್ಯ ಭಾಗವಾಗಿದೆ, ಕೌಟುಂಬಿಕ ಬಾಂಧವ್ಯಗಳನ್ನು ಬಿತ್ತರಿಸುವ ಗೃಹ ಜೀವನದ ಕಷ್ಟ ಸುಖಗಳನ್ನು ಬಿಂಬಿಸುವ ಹಾಡುಗಳಂತೂ ಹೃದಯಂಗಮವಾಗಿದೆ. ಕೆಲವು ಹಬ್ಬಗಳಲ್ಲಿ ಮತ್ತು ಮದುವೆಗಳಲ್ಲಿ ಹಾಡುವ ಹಾಸ್ಯಲೇಪಿತ ಶೃಂಗಾರ ಗೀತೆಗಳನ್ನು ವೈನೋದಿಕ ಹಾಡುಗಳೆನ್ನಬಹುದು. ಸಾಕಷ್ಟು ಸತ್ವದಿಂದ ಕೂಡಿರುವ ಇಂಥ ಶೃಂಗಾರ ಗೀತೆಗಳು ಅಪಾರ ಸಂಖ್ಯೆಯಲ್ಲಿ ಜನಪದ ಗೀತೆಗಳ ಕಣಜದಲ್ಲಿ ತುಂಬಿಕೊಂಡಿವೆ. ಆದರೆ ಇತ್ತೀಚಿನ ದಿನಗಳಲ್ಲಿ ಜನಪದ ಗೀತೆಗಳು ತನ್ನ ಕ್ರಿಯಾತ್ಮಕತೆಯನ್ನು ಕಳೆದುಕೊಂಡು ಮನರಂಜನೆಯ ಉದ್ದೇಶಕ್ಕಷ್ಟೇ ಬಳಕೆಯಾಗುತ್ತಿರುವುದನ್ನು ಕಾಣಬಹುದಾಗಿದೆ.

## ಸೋಬಾನೆ ಪದ

ಅತ್ತೆ ಮಾವನ ಮನೀಗೆ
ಮುತ್ತೈದೆ ಸೊಸೆ ಬಂದ
ಮಲ್ಲಮ್ಮ ಬಂದ್ರಿ ಮನಿ ಚಂದ ಸೋಬಾನವೇ
ಮಲ್ಲಮ್ಮ ಬಂದ್ರಿ ಮನಿ ಚೆಂದ ಸೋಬಾನವೇ
ಮಲ್ಲಮ್ಮ ಬಂದ್ರಿ ಮನಿ ಚೆಂದ ಸೋಬಾನವೇ
ಮಲ್ಲಮ್ಮ ಬಂದ್ರಿ ಮನಿ ಚೆಂದ ಸೋಬಾನವೇ
ಅರುತಿ ಮಾಡ್ಯಕೆ ಯಾರ‍್ಯಾರನ ಕರುಸಲ ಬೇಕ
ಕೇಳಿ ಬರಲುಬೇಕೆ ಹಿರಿಯರನ ಸೋ
ಕೇಳಿ ಬರಲುಬೇಕೆ ಹಿರಿಯರನ ಸೋ
ಕೇಳಿ ಬರಲುಬೇಕೆ ಹಿರಿಯರನ ಸೋ
ಕೇಳಿ ಬರಲುಬೇಕೆ ಹಿರಿಯರನ ಸೋ
ಈಚೇಲ ಈರಮ್ಮನ ಕರಿರೇ ಬಗಸಿ ಭಾರತಮ್ಮನ ಕರೀರೆ
ದೊಡ್ಡಾರೆ ಸೀಮಮ್ಮನ ಕರಿಸಲಿ ಬೇಕೆ ಸೋಬಾನವೇ
ದೊಡ್ಡಾರೆ ಸೀಮಮ್ಮನ ಕರಿಸಲಿ ಬೇಕೆ ಸೋಬಾನವೇ
ದೊಡ್ಡಾರೆ ಸೀಮಮ್ಮನ ಕರಿಸಲಿ ಬೇಕೆ ಸೋಬಾನವೇ
ದೊಡ್ಡಾರೆ ಸೀಮಮ್ಮನ ಕರಿಸಲಿ ಬೇಕೆ ಸೋಬಾನವೇ
ಅರಿಷಿಣ ಕುಂಕುಮ ಧರಿಸಿ ಪರಿಮಳ ಗಂಧವ ಪೂಜೆ
ಶರಣಿ ಮಲ್ಲಮ್ಮಗೆ ಜಯವನ್ನು ಸೊಬಾನವೇ
ಶರಣಿ ಮಲ್ಲಮ್ಮಗೆ ಜಯವನ್ನು ಸೊಬಾನವೇ
ಶರಣಿ ಮಲ್ಲಮ್ಮಗೆ ಜಯವನ್ನು ಸೊಬಾನವೇ
ಶರಣಿ ಮಲ್ಲಮ್ಮಗೆ ಜಯವನ್ನು ಸೊಬಾನವೇ
ಅತ್ತಿಗೆ ನಾದುನಿ ಕೂಡಿ ಹೊತ್ತಿಗಂಬಲಿ ನೀಡಿ
ಕನವಳ ಗುರುವಿಗೆ ಎಡಿ ಮಾಡಿ ಸೋಬಾನವೇ
ಕನವಳ ಗುರುವಿಗೆ ಎಡಿ ಮಾಡಿ ಸೋಬಾನವೇ
ಕನವಳ ಗುರುವಿಗೆ ಎಡಿ ಮಾಡಿ ಸೋಬಾನವೇ
ಕನವಳ ಗುರುವಿಗೆ ಎಡಿ ಮಾಡಿ ಸೋಬಾನವೇ
ಕನವಳ್ಳಿ ಕನವಳ ಗುರುವಿಗೆ ಎಡಿ ಮಾಡಿ ಮಲ್ಲಮ್ಮ
ಹಿರಿಯ ಧರಿಸ್ಯಾಳೆ ಮನಿಯಾಗೆ ಸೋಬಾನೆವೇ

ಹಿರಿಯ ಧರಿಸ್ಯಾಳೆ ಮನಿಯಾಗೆ ಸೋಬಾನೆವೇ
ಹಿರಿಯ ಧರಿಸ್ಯಾಳೆ ಮನಿಯಾಗೆ ಸೋಬಾನೆವೇ
ಹಿರಿಯ ಧರಿಸ್ಯಾಳೆ ಮನಿಯಾಗೆ ಸೋಬಾನೆವೇ
ಗುಡ್ಡದ ಮಲ್ಲಯ್ಯನ ಕರೆದು ಪೂಜೆಯ ಮಾಡಿ
ಮಲ್ಲಿಕಾರ್ಜುನನ ನೆನದಾಳೆ ಸೋಬಾನವೇ
ಮಲ್ಲಿಕಾರ್ಜುನನ ನೆನದಾಳೆ ಸೋಬಾನವೇ
ಮಲ್ಲಿಕಾರ್ಜುನನ ನೆನದಾಳೆ ಸೋಬಾನವೇ
ಮಲ್ಲಿಕಾರ್ಜುನನ ನೆನದಾಳೆ ಸೋಬಾನವೇ
ಅಪ್ಪ ಬಸವಣ್ಣನಿಗೆ ಮುತ್ತಿನ ಬಾಸಿಂಗ ಒಯ್ಯಿರಿ
ಮಲ್ಲಗಮ್ಮನ ಒಯ್ಯಿರೀ ಮಲ್ಲಿಗೆ ಮಾಲೆ ಸೋಬಾನವೇ
ಮಲ್ಲಗಮ್ಮನ ಒಯ್ಯಿರೀ ಮಲ್ಲಿಗೆ ಮಾಲೆ ಸೋಬಾನವೇ
ಮಲ್ಲಗಮ್ಮನ ಒಯ್ಯಿರೀ ಮಲ್ಲಿಗೆ ಮಾಲೆ ಸೋಬಾನವೇ
ಮಲ್ಲಗಮ್ಮನ ಒಯ್ಯಿರೀ ಮಲ್ಲಿಗೆ ಮಾಲೆ ಸೋಬಾನವೇ
ನೆನಯಕ್ಕೆ ನೆಲಗಡಲೆ ಗೊನೆಯ ಬಾಳೆಯಾಗಿ
ಶರಣೆ ಮಲ್ಲಮ್ಮನ ಉಡಿ ತುಂಬಿ ಸೋಬಾನವೇ
ಶರಣೆ ಮಲ್ಲಮ್ಮನ ಉಡಿ ತುಂಬಿ ಸೋಬಾನವೇ
ಶರಣೆ ಮಲ್ಲಮ್ಮನ ಉಡಿ ತುಂಬಿ ಸೋಬಾನವೇ
ಶರಣೆ ಮಲ್ಲಮ್ಮನ ಉಡಿ ತುಂಬಿ ಸೋಬಾನವೇ
ಹೊಸದಾಗಿ ಗಂಡರ ಹೆಸರ ಕೇಳುತವರೆ
ಬಸರಿದ್ದಾರೆ ಬಂದು ಬೆಳಗಿರಿ ಸೋಬಾನವೇ
ಬಸರಿದ್ದಾರೆ ಬಂದು ಬೆಳಗಿರಿ ಸೋಬಾನವೇ
ಬಸರಿದ್ದಾರೆ ಬಂದು ಬೆಳಗಿರಿ ಸೋಬಾನವೇ
ಬಸರಿದ್ದಾರೆ ಬಂದು ಬೆಳಗಿರಿ ಸೋಬಾನವೇ

## ಮೈನೆರೆದ ಹಾಡು

ಹೊಸ್ತಿಲ ಸಾರಿಸ್ಕಿ ಹೊಸ ಮುತ್ತ ನೆರೆಸಿ
ಇಂದಿನೇನಾ ಇವರ ಮನಿ ಯಾಗ ಸೋ
ಇಂದುವನೆ ಇವರ ಮನಿಯಾಗ
ಈ ಮನೆಯ ರಂಬೆ ಮೈನೆರೆದ ಸಡಗರ
ಬಾಗಿಲ ಸಾರಿಸಿ ಬಾಳ ಮುತ್ತನೆರೆಸಿ
ನಾಳೆನ ಇವರ ಮನಿಯಾಗ ಸೋ
ನಾಳೇ ಬಾ ಇವರ ಮನಿಯಾಗ
ಈ ಮನೆಯ ನಾರಿ ಮೈನೆರೆದ ಸಡಗರ
ಎತ್ತ ಎಳೆಯದ ಮುನ್ನ
ಪುತ್ರನ್ನೆರೆಯದ ಮುನ್ನ
ತಾಯವ್ವ ನೀರ ಎರೆದಾಳ
ತಾಯಿ ಏರೆದ ನೀರು ಬಾಗಿಲಿಗೆ ಹರಿದಾವ

## ಬೀಸುಕಲ್ಲಿನ ಪದ

ಬಸವೇಶ್ವರ ನೆನೆಯ
ಬಸವೇಶ್ವರ ನೆನೆಯ
ಎಸಳಯಾಲಕ್ಕಿ ನೆನೆಯ
ನಮ್ಮವ್ವನ ಹೆಸರು ಕೇದಗಿಗೆಳಗಿ
ಸೊಲ್ಲಾಪುರದಣ್ಣಂಗೆ ನಿಲ್ಲದೆ ಬರಹೇಳ
ಸೀರೆಲ್ಲೊನವರ ಕುಬಸೊಲ್ಲೆ
ಸೀರೆಲ್ಲೊನವರ ಕುಬಸೊಲ್ಲೆ ಅಣ್ಣನ
ಮಾರಿ ನೋಡುತ ಮನಸಿಗ
ಅಣ್ಣಾನ ಅರೊತ್ತು ತಮ್ಮನ ಮೂರೆತ್ತು
ನಮ್ಮಪ್ಪನೆತ್ತ ಹದಿನಾರು
ನಮ್ಮಪ್ಪನೆತ್ತು ಹದಿನಾರು ಬರುವಾಗ
ನಾನೂರ ಭೂಮಿ ನಡಗ್ಯಾವ
ಬಾಳಿಯ ವನದಾಗ ಬಾಯಿ ಮಾಡವರ‍್ಯಾರ ಗೆಳತಿ
ತಾಯಿ ಹೆಡೆದವ್ವನ ಕಿರಿಮಗನ ಗೆಳತಿ
ತಾಯಿ ಹೆಡೆದಾವ್ವನ ಕಿರಿಮಗನ ನನತಮ್ಮ
ಬಾಳೊಗೆ ನೀರ ಬೀಡುತನ ಗೆಳತಿ
ಬೇಸಿಗೆ ಬಿಸಲಿಗೆ ಬೇವಿನ ಮರತಂಪ
ತುಂಗಾ ಯೆಂಬ ಹೊಳೆತಂಪ
ತುಂಗಾ ಯೆಂಬ ಹೊಳೆತಂಪ ಹಡದೆವ್ವ
ನೀ ತಂಪನನ್ನ ತವರಿಗೆ
ತಾಯಿ ಮಕ್ಕಳ ದಿನಯು ತಾಳ ಬಾರಿಸಿದಂಗ
ಜೋಡ ಕಿನ್ನೂರಿ ನುಡಿದಂಗ ಗೆಳತಿ
ಜೋಡ ಕಿನ್ನುರಿ ನುಡಿದಂಗ ಹಡೆದವ್ವ
ನೀ ತಂಪು ನನ್ನ ಹೃದಯಾತ

## ಗಂಡನ ಮನೆ ಕಳುಹಿಸುವಾಗ ಹೇಳುವ ಪದ

ಒಂಭತ್ತು ತಿಂಗಳ ತುಂಬಾವೆ ದಿನಮೇಲೆ
ಅಂಬಲಿಸಿ ಮಗಳ ಹಡದೀನಿ
ಅಂಬಲಿಸಿ ಮಗಳ ಹಡದೀನಿ
ಅಂಬಲಿಸಿ ಮಗಳ ಹಡದೀನಿ ನನಮಗಳೆ
ಇಂದು ನನಮನಿಗೆ ಎರವಾದೆ !!೨!!
ನಾಕರವಿ ಹಾಸಿದ್ದೆ ನಾಕರವಿ ಹೊದಿಸಿದ್ದೆ
ಬಾಲಮ್ಮ ನಂಗೆ ಸಲುವಿದ್ದೆ
ಬಾಲಮ್ಮನಂಗೆ ಸಲುವಿದ್ದೆ ನನ ಮಗಳೆ
ಇಂದು ನನ ಮನಿಗೆ ಎರವಾದೆ !!೨!!
ಆರರವಿ ಹಾಚಿದ್ದೆ
ಆರರವಿ ಹೊಚ್ಚಿದ್ದೆ
ಪುತ್ರಮ್ಮ ನಂಗೆ ಸಲುವಿದ್ದೆ
ಪುತ್ರಮ್ಮ ನಂಗ ಇಂದು
ನನ ಮನಿಗೆ ಎರವಾದೆ
ಎಂಟರವಿ ಹಾಸಿದ್ದೆ ಎಂಟರವಿ ಹೊಚ್ಚಿದ್ದೆ
ಬಾಲಮ್ಮ ನಂಗ ಸಲುವಿದ್ದೆ
ಬಾಲಮ್ಮ ನಂಗ ಸಲುವಿದ್ದ ನನ ಮಗಳೆ
ಇಂದು ನನಮನಿಗೆ ಎರವಾದೆ !!೪!!
ಎಂಟರವಿ ಹಾಸಿದ್ದೆ ಎಂಟರವಿ ಹೊಚ್ಚಿದ್ದೆ
ಕಂದಮ್ಮ ನಂಗ ಸಲುವಿದ್ದೆ
ಕಂದಮ್ಮ ನಂಗ ಸಲುವಿದ್ದೆ ನನ್ನ ಮಗಳೆ
ಇಂದು ನನ ಮನಿಗೆ ಎರವಾದೆ !!೫!!
ಹತ್ತರವಿ ಹಾಸಿದ್ದೆ ಹತ್ತರವಿ ಹೊಚ್ಚಿದ್ದೆ
ಕಂದಮ್ಮ ನಂಗ ಸಲುವಿದ್ದೆ
ಕಂದಮ್ಮ ನಂಗ ಸಲುವಿದ್ದೆ ನನ ಮಗಳೆ
ಇಂದು ನನ ಮನಿಗೆ ಎರವಾದೆ !!೬!!
ಸುಣ್ಣದ ಗೊಂಬಿಗೆ ತಣ್ಣೀರು ಹಾಕಿದಂತೆ
ಅಣ್ಣನ ಹೊಟ್ಟೆ ತಳಮಳಿಸಿ

ಅಣ್ಣನ ಹೊಟ್ಟಿ ತಳಮಳಿಸಿ ತಂಗೆವ್ವ
ಗಂಡ ಮಗನಾಗಿ ಇರಬಾರದೆ
ಗಂಡ ಮಗನಾಗಿ ಇರಬಾರದೇ ‖೭‖
ಕುಂಬಳ ಕಾಯಿಗೆ ಕುಡಗಲ್ಲಿ ಕೊಟ್ಟಂತೆ
ನಮ್ಮ ಮಗಳ ನಿಮ್ಮ ಕೈಗೆ
ನಮ್ಮ ಮಗಳ ನಿಮ್ಮ ಕೈಗೆ
ನಂಬಿ ನನ್ನ ಮಗಳ
ನಿಮ್ಮ ಕೈಗೆ ಕೊಟ್ಟರೆ
ನಿಮ್ಮ ಮಗಳಂತೆ ಸಲುವ್ಯಾರಿ

## ಮಂಗಳಾರತಿ ಪದ (ಹಾಡು)

ಪೂಜೆ ಮಾಡನು ಬೇಗ ಬನ್ನಿರೇ
ಶಂಭು ಶಂಕರ ಮಡದಿಗೆ
ತಾಯಿ ಕೊಡವಳು ಏರಿ ಕೊಡವಳು
ಸೀರು ಪಾಕವ ಮಾಡಿ !!ಪೂಜೆ!!
ಕಾಲ ಹೇಳಿದು ಕೈಯಮುಗಿದು
ಕಾಲುಂಗರಿಟ್ಟರು ಮಗಳಿಗೆ
ವಂಕಿ ಬಾಪುರ ಇಡುವ ತೋಳಿಗೆ
ಥಂದ ಕುಪ್ಪಸ ತೊಡಸಿರೆ !!ಪೂಜೆ!!
ಪೂಜೆ ಮಾಡನು ಬೇಗ ಬನ್ನಿರೆ
ಶಂಭು ಶಂಕರ ಮಡದಿಗೆ ಇಂದ್ರ ರತನಿಯರೆಲ್ಲ
ಕೂಡಿ ಮಂಗಳಾರತಿ ಬೆಳಗಿರೆ !!ಪೂಜೆ!!
ಕಾಯ ಒಡೆದರೆ ಬೇಗ ಕೊಡವಳು
ಸೀಕು ಪಾಕವ ಮಾಡಿರಿ
ಸಣ್ಣ ಸಾವಿಗೆ ಪದರ ಪೇಣಿ
ಎಲಿಗೆ ನಾಜೂಕುಬಡಸಿರಿ !!ಪೂಜೆ!!
ಪೂಜೆ ಮಾಡನು ಬೇಗ ಬನ್ನಿರೇ
ಶಂಭು ಶಂಕರ ಮಡದಿಗೆ
ಇಂದ್ರ ರತನಿಯರೆಲ್ಲ
ಕೂಡಿ ಮಂಗಳಾರತಿ ಬೆಳಗಿರೆ

**ಜೋಗುಳ ಪದ**

ಅಂದಾಳ ಗೋಪಿ ಜೋ ಜೋ ‖ಎ‖
ಜಾಣೆ ಜಾಣೆಲರೆಲ್ಲ ಕೂಡಿ
ಮುತ್ತಿನ ಕುಮಾರರಾಮಿನಿಗ
ಅಂದಾಳ ಗೋಪಿ ಜೋ ಜೋ ‖ಎ‖
ಮುತ್ತಿನ ಕುಮಾರರಾಮನಿಗೆ
ಕುಡಗೋಲ ಉರಿಯ
ಅಂದಳ ಗೋಪಿ ಜೋ ಜೋ
ಅಂದಳ ಗೋಪಿ ಜೋ ಜೋ ‖ಎ‖
ರನ್ನದ ಕುಡಗೋಲ ಕೈಲಿ
ಕೊಯ್ದುಳ ಕಳ್ಳು
ಚಿನ್ನದ ಚೂಜಿಲಿ ಚಿಟಿಗೇಲಿ ಇಟ್ಟಾಳೆ
ಅಂದಾಳ ಗೋಪಿ ಜೋ ಜೋ
ಅಂದಾಳ ಗೋಪಿ ಜೋ ಜೋ ‖ಎ‖
ಚಿನ್ನಾದ ಚೂಜೀಲಿ ಚಿಟಗೇಲಿ ಹಾಕ್ಯಾಳ
ಬಣ್ಣದ ಚಿಟಗ್ಯಾಳ ಮಸಗೋಳ ತುಂಬಿ
ಜೋ ಅಂದಾಳ ಗೋಪಿ ಜೋ
ಅಂದಾಳ ಗೋಪಿ ಜೋ ‖ಎ‖
ಬಣ್ಣದ ಚೂಜಿಲಿ ಮುಸಗೋಲ ತುಂಬಿ
ತಣ್ಣೀರ ಬೀಸಿನೀರ ತೊಡೆಗಳ ತೊಳೆದೆ
ಅಂದಾಳ ಗೋಪಿ ಜೋ ಜೋ ‖ಎ‖
ಬಣಂತಿ ಸಂತ ಮಲಿಗ್ಯಾಳೆ
ರಾಮ ಅಣ್ಣನೆಂಬ ಮಗಣ ಬಗಲಿಗೆ
ಅಂದಾಳ ಗೋಪಿ ಜೋ ಜೋ
ಅಂದಾಳ ಗೋಪಿ ‖ಎ‖

## ಜೋಗಳ ಪದ

ಸಾಲಿಕೆಯವು ಒಳಗನ ನಡಕ
ನಮ್ಮಿ ಬಾಲನೆ ಹೆಸರ ಏನಂದ
ಇಡತಿ ಜೋ ಜೋ
ಅಂದಾಳ ಗೋಪಿ ಜೋ ಜೋ ||೨||
ನಮ್ಮ ಬಾಲನ ಹೆಸರು ನಾನೇನು ಬಲ್ಲೆ
ನಮ್ಮಿ ಅಪ್ಪಿನ ಕೇಳಿ ಹೆಸರಿಡಿ ಜೋ ಜೋ
ಅಂದಾಳ ಗೋಪಿ ಜೋ ಜೋ
ಅಂದಾಳ ಗೋಪಿ ಜೋ ಜೋ ||೨||
ಬಾಲನ ಹೆಸರು ನಾನೇನು ಬಲ್ಲೆ
ನಮ್ಮಿ ಮಾವನ ಕೇಳಿ ಹೆಸರಿಡಿ ಜೋ
ಅಂದಳಾ ಗೋಪಿ ಜೋ ಜೋ
ಅಂದಳಾ ಗೋಪಿ ಜೋ ಜೋ ||೨||
ಬಾಲನ ಹೆಸರು ನಾನೇನು ಬಲ್ಲೆ
ನಮ್ಮಿ ಮಾವನ ಕೇಳಿ ಹೆಸರಿಡಿ ಜೋ
ಅಂದಳಾ ಗೋಪಿ ಜೋ ಜೋ
ಅಂದಳಾ ಗೋಪಿ ಜೋ ಜೋ ||೨||
ಕೆಂಚ ನೀನ ಸಂತಿಗೆ ಹೋಗಿದ್ದಿ
ನಮ್ಮಿ ಕೆಂಚಗೆ ಚೋಟಂಗಿಯ
ತಂದೆ ಜೋ ಜೋ
ಅಂದಳಾ ಗೋಪಿ ಜೋ ಜೋ ||೨||
ಕೆಂಚನ ತಾಯಿ ಒಳಗಿಂದಿ ಬಂದೆ
ನಮ್ಮ ಕೆಂಚಗ ಅಂಗಿ ಒಯ್ಯನ ಗೊಂದು ಜೋ
ಅಂದಳಾ ಗೋಪಿ ಜೋ ಜೋ ||೨||
ದೊಡ್ಡಪ್ಪನ ಕರಿಯೆ
ಡೊಳ್ಳು ಹುಟ್ಟಿನ ಕರಿಯೆ
ಅವರ ದೊಡ್ಡವನ ಕರೆ
ಸಿಳ್ಳೆ ಗಣ್ಣಕಿನ ಕರಿಯೆ
ಅಂದಳಾ ಗೋಪಿ ಜೋ ||೨||

ಅವರ ಸೋದರತ್ತಿನ ಕರಿಯೆ
ಸೊಗಾಕಿನ ಸೂಳೆಯ ಕರಿಯೇ ಜೋ ಜೋ
ಅಂದಳಾ ಗೋಪಿ ಜೋ ‖೨‖
ಕೊಟ್ಟ ಊರೆಂಬ ಸಂತಿಗೆ ಹೋಗಿ
ನಮ್ಮಿ ಪುತ್ರಗ ಚೋಟಂಗಿಯ ತಂದೆ
ಜೋ ಜೋ ಅಂದಳಾ ಗೋಪಿ ಜೋ ‖೨‖
ನಮ್ಮಿ ಪುತ್ರನ ಚೋಟಂಗಿಯ
ಒಯ್ಯದೆಗೊಂದಿ ಜೋ ಜೋ
ಅಂದಳಗೋಪಿ ‖೨‖

**ಹನುಮಂತಪ್ಪ**

ಮತ್ತೆಲ್ಲಿಗೆ ಹೋಗ್ಯಾನೆ ಜಗದಾ ಬೇಟಿಗೆ
ಹನುಮಾರಿದ ಲಂಕೆಗೆ !!ಾ!!
ರೈತರ ಹೊಲದಾಗಿ ಏನೆಲ್ಲ ಬೆಳೆದಾವೆ
ಅಣ್ಣನ ಗುಡಿಯಿಂದೆ ಇನ್ನೇನು ಬೆಳೆದಾವೆ
ಸಣ್ಣ ರುದ್ರಾಕ್ಷಿ ಮರ ಅರಿಯೆ
ಹನುಮಾರಿದ ಲಂಕೆಗೆ !!ಾ!!
ಅಪ್ಪ ನಿನ್ನ ಗುಡಿಯು ಇಪ್ಪತ್ತು ಗಾವುಗೆ
ಎಣ್ಣೆಯ ಕೊಡನಾ ಹೊರಲಾರೆ
ಎಣ್ಣೆಯ ಕೊಡನಾ ಹೊರಲಾರೆ
ರೊಕ್ಕದ ಮಾನ್ಯವೇ ಕಳಲಾರೆ
ಹನುಮಾರಿದ ಲಂಕಿಗೆ !!ಾ!!
ಅಪ್ಪ ನಿನ್ನ ಗುಡಿಯು ಇಪ್ಪತ್ತುಗಾವುದೇ
ತುಪ್ಪದ ಕೊಡ ನಾ ಹೊರಲಾರೆ
ರೊಕ್ಕದ ಮಾನ್ಯವೆ ಕಳಲಾರೆ
ಹನುಮಾರಿದ ಲಂಕೆಗೆ!!ಾ!!
ಅಪ್ಪ ನಾ ಗುಡಿಮುಂದೆ ಮತ್ತೇನು ಬೆಳೆದಾವೆ
ಭತ್ತ ರುದ್ರಾಕ್ಷಿ ಮರ ಅರಿವೆ
ಹನುಮಾರಿದ ಲಂಕಿಗೆ !!ಾ!!
ಮತ್ತೆಲ್ಲಿಗೆ ಹೋಗ್ಯವೆ ಜಗದಾ ಬೇಟಿಗೆ
ಹನುಮಾರಿದ ಲಂಕಿಗೆ !!ಾ!!
ಗುಂಡ ಗುಂಡದಿರೆ
ಗುಂಡಿನ ತೋಗಿದಾಳೆ
ಗುಂಡಿನಲಿ ಬಂದಾದ ಮರನೋಟ್ಟೆ ಅರಿಯೇ
ಹನುಮಾರಿದ ಲಂಕೆಗೆ !!ಾ!!
ಬಂಡಿ ಬಂಡಿ ಎಂದು
ಬಂಡಿಯ ತೂಗಿದಾಳೆ
ಬಂಡಿನಲ್ಲಿ ನಲ್ಲಿಯ
ಮರನೊಟ್ಟೆ ಅರಿಯೇ
ಹನುಮಾರಿದ ಲಂಕಿಗೆ
ಹನುಮಾರಿದ ಲಂಕೆಗೆ

## ಗೌರಮ್ಮನ ಪದ

ಒಂದಡಿಕೆ ಒಂದೆಲೆ
ಒಂದ ಬೆರಳಲಿ ಗಂಧ
ಬಂದಳ ಗಂಗಮ್ಮ ನಿಮಿಷದಳೋ
ಬಂದಳ ಗಂಗಮ್ಮ ನಿಮಿಷದ
ತುಂಬಿಸಿ ಕೊಡತೀವಿ ನೀರ ಸೋ!!೨!!
ಎರಡಡಿಕೆ ಎರಡೆಲೆ
ಎರಡ ಬೆರಳಲಿ ಗಂಧ
ಬಂದಳ ಗಂಗಮ್ಮ ನಿಮಿಷದ ಸೋ
ಬಂದಳ ಗಂಗಮ್ಮ ನಿಮಿಷದ
ತುಂಬಿಸಿ ಕೊಡತೀವಿ ನೀರ ಸೋ !!೨!!
ನಾಕಡಿಕೆ ನಾಕೆಲೆ
ನಾಕ ಬೆರಳಲಿ ಗಂಧ
ಬಂದಳ ಗಂಗಮ್ಮ ನಿಮಿಷದ ಸೋ
ಬಂದಳ ಗಂಗಮ್ಮ ನಿಮಿಷದ
ತುಂಬಿಸಿ ಕೊಡತೀವಿನೀರ ಸೋ !!೨!!
ಐದಡಿಕೆ ಐದೆಲೆ
ಐದೆ ಬೆರಳಲಿ ಗಂಧ
ಬಂದಳ ಗಂಗಮ್ಮ ನಿಮಿಷದ ಸೋ
ಬಂದಳಾ ಗಂಗಮ್ಮ ನಿಮಿಷದ
ತುಂಬಿಸಿ ಕೊಡತೀವಿ ನೀರ ಸೋ !!೨!!
ತಂಗಿಗೇಳಿದ ಕೃಷ್ಣ
ಚಂದದಲಿ ಬುದ್ಧಿ !!೨!!
ಬಾಗಿಲಲ್ಲಿ ನಿಲ್ಲದಿರೇ
ಕೂಗಿ ಮಾತಾಡದಿರೇ

## ಗಂಡನ ಮನೆಗೆ ಕಳುಹಿಸುವಾಗ ಹೇಳುವ ಪದ

ತಂಗಿಗೇಳಿದ ಕೃಷ್ಣ
ಚಂದದಲಿ ಬುದ್ಧಿ ‼೨‼
ಬಾಗಿಲಲ್ಲಿ ನಿಲ್ಲದಿರೇ
ಕೂಗಿ ಮಾತಾಡದಿರೇ
ಅತ್ತಿಯ ಮಾತಿಗೆ ಉತ್ತರ ಕೊಡದಿರೆ
ತಂಗಿಗೇಳದ ಕೃಷ್ಣ
ಚಂದದಲಿ ಬುದ್ಧಿ
ಗಂಡ ಬಂದರೆ ಬಂಧು
ಒಳಗಕೆ ಅಂಜಬೇಡ
ತಂಗಿಗೇಳಿದ ಕೃಷ್ಣ
ಚಂದದಲಿ ಬುದ್ಧಿ
ಅತ್ತಿಯ ಮನೆಯಲ್ಲಿ ಇರುವಂಥ ಬುದ್ಧಿ ‼೨‼
ಅತ್ತಿ ಮೂವರ ಸೇವಾ ಹರತಿ
ಯಿಂದಲಿ ಮಾಡು
ತಂಗಿಗೇಳಿದ ಕೃಷ್ಣ
ಚಂದದಲಿ ಬುದ್ಧಿ
ಅತ್ತಿಯ ಮನೆಯಲ್ಲಿ ಇರುವಂಥ ಬುದ್ಧಿ ‼೨‼
ನಾಕು ಮಂದಿಯ ಒಳಗೆ
ಒಪ್ಪು ಮಾತಾಡದಿರು
ತಂಗಿಗೇಳಿದ ಬುದ್ಧಿ ಕೃಷ್ಣ
ಚಂದದಲಿ ಬುದ್ಧಿ
ಅತ್ತಿಯ ಮನಿಯಲ್ಲಿ ಇರುವಂಥ ಬುದ್ಧಿ ‼೨‼
ಹತ್ತು ಮಂದಿಯ ಒಳಗೆ
ನಿಷ್ಠುರವಾಗದಿರು
ಕೃಷ್ಣರಾಯರ ತಂಗಿಯೆನಿಸು
ತಂಗಿಗೇಳಿದ ಬುದ್ಧಿ
ಚಂದದಲಿ ಶ್ರೀಕೃಷ್ಣ
ಅತ್ತಿಯ ಮನೆಯಲ್ಲಿ ಇರುವಂಥ ಬುದ್ಧಿ ‼೨‼

೬.೩ ಗಾದೆಗಳು :

ಜನತೆಯ ಅನುಭವದ ಸಂಪತ್ತು ನೆನಪಿಡಲು ಸುಲಭವಾಗುವಂತೆ ಪ್ರಾಸಬದ್ಧವಾದ ಚಿಕ್ಕ ವಾಕ್ಯಗಳಾಗಿ ಗಾದೆಗಳ ರೂಪದಲ್ಲಿ ಕಾಣಿಸಿಕೊಳ್ಳುತ್ತವೆ. ಜನಪ್ರಿಯವಾದ ಸಾಹಿತ್ಯ ಪ್ರಕಾರಗಳಲ್ಲಿ ಗಾದೆಗಳು ಮುಖ್ಯವಾಗಿ ಗಮನ ಸೆಳೆಯುತ್ತವೆ. ಒಂದು ಸಮುದಾಯದ ಮನಸ್ಸು ಗಾದೆಗಳಲ್ಲಿ ಅಡಕವಾಗಿರುವುದನ್ನು ಕಾಣಬಹುದು. ಪುರಾಣ, ಚರಿತ್ರೆ, ಸ್ಥಳಗತೆ, ಅನುದಿನದ ಘಟನೆಗಳು ಕಷ್ಟ ಕೋಟಲೆಗಳು ಮತ್ತು ಆನಂದದ ವಿಶಾಲ ಹಿನ್ನಲೆ ಹೊಂದಿರುವ ಗಾದೆಗಳು ಜನತೆಯ ಮನಸ್ಸನ್ನು ಅರ್ಥ ಮಾಡಿಕೊಳ್ಳಲು ವಿಶೇಷವಾಗಿ ನೆರವಾಗುತ್ತ ಬದುಕನ್ನು ತಿದ್ದುವಲ್ಲಿ, ರಹಸ್ಯಗಳ ಬೆನ್ನಟ್ಟಿ ಹೋಗುವಲ್ಲಿ ಇವು ಯಾವಾಗಲೂ ಮುಂದಾಗಿರುತ್ತವೆ.

ಒಂದು ದೇಶದ ನಿಜವಾದ ಬಣ್ಣ ಬದುಕು ಅಲ್ಲಿನ ಗಾದೆಗಳ ಮೂಲಕ ಬಯಲಾಗುತ್ತದೆ. ಜನತೆಯ ಕಳೆದ ದಿನಗಳ ರೋಷ, ಕೆಚ್ಚು, ಮೌಢ್ಯ, ಮಾನಸಿಕ ವಿಕಾರ, ನಗು, ನೋವು, ನ್ಯಾಯ–ಅನ್ಯಾಯ ಮೊದಲಾದ ಎಲ್ಲಾ ಸಂಗತಿಗಳ ಮಡು ಈ ಗಾದೆಗಳು. ಇವನ್ನೆಲ್ಲಾ ವಿಂಗಡಿಸಿ ನಿತ್ಯದ ಬದುಕಿಗೆ ಹೇಗೆ ಬಳಸಿಕೆಳ್ಳಬೇಕು ಎನ್ನುವುದು ಮುಖ್ಯ ಸಂಗತಿಯಾಗಬೇಕು ಹೀಗಾಗಿ ಸಮಾಜ ಸಾಹಿತ್ಯ, ಚರಿತ್ರೆ, ಭಾಷೆ, ಮನಸ್ಸು ಮಾನವ ಮುಂತಾದ ಬಗೆ ಬಗೆಯ ವಿಷಯಗಳ ಬಗ್ಗೆ ಅಧ್ಯಯನ ನಡೆಸುವವರಿಗೆ ಗಾದೆಗಳು ಸವಾಲಾಗಿವೆ ಮತ್ತು ಹೆಚ್ಚಿನ ಗುಟ್ಟಾಗಿವೆ.

ಹೆಚ್ಚಿನ ಗಾದೆಗಳಿಗೆ ಯಾರ, ಯಾವ ಬಗೆಯ ಹಂಗೂ ಇಲ್ಲ ಏನು ಹೇಳಬೇಕೋ ಅದನ್ನೇ ಹೇಳಿ ಮುಗಿಸುತ್ತವೆ. ಸ್ವಂತವಾಗಿ ಅನುಭವಿಸಿ ಗೊಂದಲಗಳೊಡನೆ ಬೇಸತ್ತ ಜನತೆಯು ಕೊನೆಗೆ ಕಂಡು ಕೊಂಡ ನಿಜದ ಕಿಡಿಗಳು ಈ ಗಾದೆಗಳು.

ಗಾದೆಗಳು ಹಲವು ಬಗೆಯ ಕಾರ್ಯಗಳನ್ನು ಸಮಾಜದಲ್ಲಿ ನಿರ್ವಹಿಸುತ್ತವೆ. ಮುಖ್ಯವಾಗಿ ಅನಕ್ಷರಸ್ಥ ಸಮಾಜದಲ್ಲಿ ತಿಳುವಳಿಕೆ, ನೀಡುವ ಕೆಲಸವನ್ನು ಅವು ನಿರಂತರವಾಗಿ ಮಾಡುತ್ತಾ ಬಂದಿವೆ. ಹಾಗೆ ಪರಂಪರಾನುಗತವಾದ ತಿಳುವಳಿಕೆಯನ್ನು ಅವು ಬಗೆಯ ಸಾಮಾಜಿಕ ಹತೋಟಿಯನ್ನು ಸಾಧಿಸುತ್ತವೆ. ಎಷ್ಟೋ ಗಾದೆಗಳು ಬುದ್ಧಿ ಮಾತುಗಳಾಗಿರುವುದರಿಂದ ಸಾಂಸ್ಕೃತಿಕ ಮಾಲ್ಯಗಳ ರಕ್ಷಣೆಯ ಕೆಲಸವೂ ಗಾದೆಗಳ ಮೂಲಕ ನಡೆದು ಬಿಡುತ್ತದೆ. ಈ ಅರ್ಥದಲ್ಲಿ ಗಾದೆಗಳು ಸಾಂಸ್ಕೃತಿಕ ಮುಂದುವರಿಕೆಯ ಸಾಧನಗಳು ಹೌದು.

ಗಾದೆಗಳಲ್ಲಿ ಉಪಮೆ, ವಿರೋಧಾಬಾಸ, ಅತ್ಯುಕ್ತಿ ಮೊದಲಾಧ ಅಲಂಕಾರಗಳು, ಪ್ರಾಸ, ಅನುಪ್ರಾಸ, ಪುನರಾವರ್ತನೆ, ಸಮತೂಕ ಮುಂತಾದ ವಿಶಿಷ್ಟ ಗುಣಗಳು ಅಡಕವಗಿರುತ್ತವೆ. ಉದಾಹರಣೆಗೆ 'ಕತೆಗೆ ಕಾಲಲ್ಲ' ಎಂಬ ಗಾದೆಯನ್ನು ಗಮನಿಸಬಹುದು. ಅದು ಅತ್ಯಂತ ಸಂಕ್ಷಿಪ್ತವಾಗಿದೆ. ವಿವೇಕ ಪೂರ್ಣವಾಗಿದೆ, ತೀಕ್ಷ್ಣವಾಗಿದೆ, ಜನಪ್ರಿಯವಾಗಿದೆ, ಸೂತ್ರ ಪ್ರಾಯದಲ್ಲಿದೆ, ಪ್ರಾಸಬದ್ಧವಾಗಿದೆ ಮತ್ತು ನಿರೂಪಣೆಯಲ್ಲಿ ಸಮತೂಕವನ್ನು ಸಾಧಿಸಿದೆ. ಇಂಥ ಗುಣಗಳೇ ಗಾದೆಯ ಲಕ್ಷಣಗಳಾಗಿವೆ.

'ಗುಂಪಿನಲ್ಲಿ ಗೋವಿಂದ'

'ತಳನೋಡಿ ಪಾಯ ಹಾಕು'

'ಬೆಕ್ಕಿಗೆ ಆಟ, ಇಲಿಗೆ ಪ್ರಾಣ ಸಂಕಟ.'

'ರಟ್ಟೆ ಮುರುದು ರೊಟ್ಟಿ ತಿನ್ನು'

ಮೊದಲಾದ ಗಾದೆಗಳಲ್ಲಿ ಈ ಲಕ್ಷಣಗಳನ್ನು ಕಾಣಬಹುದು.

**ಬೆನ್‌ಹಂನ** ಪ್ರಕಾರ "ಗಾದೆಗಳೆಂದರೆ ಬೀದಿಯಲ್ಲಿ ಸಿಕ್ಕುವ ಜ್ಞಾನ"

**ರಸೆಲ್ಗೆ** "ಗಾದೆಯೆಂದರೆ ಹಲವರ ಜ್ಞಾನ ಮತ್ತು ಒಬ್ಬನ ವಿವೇಕ"

**ಸೊಪೋಕ್ಲಿಸ್** ಹೇಳಿದ ಪ್ರಕಾರ "ಹೆಚ್ಚು ಜ್ಞಾನವನ್ನು, ಒಳಗೊಂಡ ಸಂಕ್ಷಿಪ್ತ ಹೇಳಿಕೆಯೇ ಗಾದೆ". ಇವರೆಲ್ಲರ ಮಾತುಗಳನ್ನು ನೋಡಿದಾಗ ಗಾದೆಯು ಜನ ಸಮೂಹದಿಂದ ಮೂಡಿಬರವುದು ಅಥವಾ ಜನರಿಂದ ಅದು ಸತ್ಯವೆಂದು ಅಂಗೀಕೃತವಾಗುವುದು ಅಗತ್ಯವೆಂಬ ಅಂಶ ಸ್ಪಷ್ಟವಾಗುತ್ತದೆ.

**ಸರ್ವಾಂಟಿಸನ** ಪ್ರಕಾರ ಗಾದೆ ಎಂದರೆ "ದೀರ್ಘ ಅನುಭವದ ಕಟ್ಟಿದ ಸಂಕ್ಷಿಪ್ತ ವಾಕ್ಯ" ಎಂದು ಗಾದೆಯನ್ನು ವಿವರಿಸಿದ್ದಾರೆ.

**ಥಾಮಸ್‌ಪೂಲ್ಲರ್** ಸಿ. ಪ್ರಕಾರ "ಕೆಲವೇ ಶಬ್ದಗಳಲ್ಲಿ ಹೆಚ್ಚು ವಿಚಾರವನ್ನು ಒಳಗೊಂಡಿರುವುದೇ ಗಾದೆ".

**ಯೋಬರ್ಟ್‌ದ** ಪ್ರಕಾರ "ಮುಖ್ಯವಾದ ಮತ್ತು ಪ್ರಶ್ನಾತೀತವಾದ ಒಂದು ಸತ್ಯದ ನಿರ್ದಿಷ್ಟ ಹಾಗೂ ಪ್ರಾಮಾಜಿಕ ಅಭಿವ್ಯಕ್ತಿಯೇ ಗಾದೆಯಾಗಿದೆ."

**ಲಾರೆಂಜನ** ಪ್ರಕಾರ "ಶಬ್ದಗಳಲ್ಲಿ ಸಂಕ್ಷಿಪ್ತವಾಗಿದ್ದು ಜ್ಞಾನದಲ್ಲಿ ಅಗಾಧವಾಗಿರುತ್ತದೆ."

ತಾಯಿ ಇದ್ದರೆ ತವರು ಹೆಚ್ಚು, ತಂದೆ ಇದ್ದರೆ ಬಳಗ ಹೆಚ್ಚು

ಆಚಾರ ಹೇಳೋದು, ಬದ್ನೆಕಾಯಿ ತಿನೋದು

ವಲ್ಲದ ಗಂಡನಿಗೆ ಮೊಸರಿನಲ್ಲಿ ಕಲ್ಲು

ತಾಯಿಯಂತೆ ಮಗಳು ನೂಲಿನಂತೆ ಸೀರೆ

ಕರಿಬ್ರಾಹ್ಮಣನನ್ನು ಬಿಳಿ ಕೋಮಟಿಗನನ್ನು ನಂಬಬಾರದು

ಕುಲಗೆಟ್ಟರು ಸುಖ ಪಡು

ಮನೆ ಕಟ್ಟಿ ನೋಡು ಮದುವೆ ಮಾಡಿ ನೋಡು

ಹೆಂಗಸರ ಬುದ್ಧಿ ಮೊಣಕಾಲಿನ ಕೆಳಗೆ

ಬೆರಳು ಕೊಟ್ಟರೆ ಹಸ್ತ ನುಂಗುತ್ತಾರೆ

ಶಂಖದಿಂದ ಬಂದರೆ ತೀರ್ಥ

ಕೆಟ್ಟ ಮೇಲೆ ಬುದ್ಧಿ ಬಂತು

ಗಂಡ ಸೇರದಿದ್ರೆ ಗುಂಡುಕಲ್ಲು ಸೇರಲ್ಲ

ಹಿರಿಯಕ್ಕನ ಚಾಳಿ ಮನೆ ಮಂದಿಗೆಲ್ಲ

ಎತ್ತಿಗೆ ಜ್ವರ ಬಂದ್ರೆ ಎಮ್ಮೆಗೆ ಬರೆ

ಅತಿಯಾದರೆ ಅಮೃತ ಕೂಡ ವಿಷ

ಗಂಡು ಕೂತು ಕೆಟ್ಟ, ಹೆಣ್ಣು ತಿರುಗಿ ಕೆಟ್ಟಳು

ಅಳುವ ಗಂಡಸನ್ನು, ನಗುವ ಹೆಂಗಸನ್ನು ನಂಬಬಾರದು

ಗಡ್ಡಕ್ಕೆ ಬೆಂಕಿ ಹತ್ತಿದಾಗ ಬಾವಿ ತೋಡಿದಂತೆ

ನೆಲಕ್ಕೆ ಬಿದ್ದರೂ ಮೀಸೆ ಮಣ್ಣಾಗಿಲ್ಲ

ಬೇಲಿ ಎದ್ದು ಹೊಲ ಮೇಯ್ದಂತೆ

ಹಾಡ್ತಾ ಹಾಡ್ತಾ ರಾಗ, ಉಗುಳ್ತಾ ಉಗುಳ್ತಾ ರೋಗ

ಹಿಟ್ಟು ಇದ್ದಷ್ಟು ರೊಟ್ಟಿ

ಊರು ಬೆಂಕಿ ಮಾಡಿ ಮುಲ್ಲ ಕೊರಗಿದನಂತೆ

ಮಾತು ಮನಿ ಕೆಡಿಸ್ತು, ತೂತೂ ಒಲೆ ಕೆಡಿಸ್ತು

ಎದ್ದರೆ ಕಾಲು ಹಿಡಿತಾರೆ, ಬಿದ್ದರೆ ಜುಟ್ಟು ಹಿಡಿತ್ತಾರೆ

ಎತ್ತು ಏರಿಗೆ ಎಳಿದ್ರೆ, ಕೋಣ ನೀರಿಗೆಳಿತಂತೆ

ಎಲ್ಲರ ಮನೆ ದೋಸೆ ತೂತು

ಹೋಯಿತಲ್ಲಾ ಪೀಡೆ ಎಂದರೆ, ಬಂದೆ ನಾ ಗವಾಕ್ಷಿಯಲ್ಲಿ ಅಂದಾಂಗೆ

ಆಳು ಮಾಡಿದ್ದು ಹಾಳು

ಆಯಾ ನೋಡಿ ಪಾಯ ಹಾಕು

ಮಾಡಿದ್ದಣ್ಣೊ ಮಾರಾಯ

ಗಿಡವಾಗಿ ಬಗ್ಗದ್ದು, ಮರವಾಗಿ ಬಗ್ಗೀತೆ

ಬೆಳೆಯುವ ಸಿರಿ ಮೊಳಕೆಯಲ್ಲಿ

ಹುಣಿಸೇ ಮುಪ್ಪಾದರೂ ಹುಳಿ ಮುಪ್ಪ

ಬೆಂಕಿಯಲ್ಲದೆ ಹೋಗೆ ಬರಲ್ಲಿ

ಬಯಸಿ ಬಾಳೆಹಣ್ಣು ತಿಂದ್ರೆ, ಕಿಸಗಾಲಂತ ಮಗ ಹುಟ್ಟಿದ್ನಂತೆ

ದೇವರು ಕೊಟ್ಟರು ಪೂಜಾರಿ ಕೊಡಲ್ಲ

ಜಾತಿ ಬಿಟ್ಟರೂ ನೀತಿ ಬಿಡಬಾರದು

ತಿರ್‍ಕೊಂಡು ತಿಂದ್ರು ಕರ್‍ಕೊಂಡು ಉಣ್ಣು

ತುಸುತಿಂದರು ರಸ ತಿನ್ನು

ಹೊಟ್ಟೆಗೆ ಹಿಟ್ಟಿಲ್ಲ, ಜುಟ್ಟಿಗೆ ಮಲ್ಲಿಗೆ ಹೂ

ನಾಲಿಗೆ ಒಳ್ಳೆಯದಾದರೆ, ನಾಡೆಲ್ಲಾ ಒಳ್ಳೆಯದು

ಇಬ್ಬರ ಜಗಳ ಮೂರನೇ ಲಾಭ

ಕೂಳು ಹೆಚ್ಚಾದರೆ, ಕೋಡು ಹೆಚ್ಚಾಗುತ್ತ

ಕಳ್ಳನಿಗೊಂದು ಪಿಳ್ಳೆ ನೆವ

ಜಾಣರಿಗೆ ಮಾತಿನ ಪೆಟ್ಟು, ಕೋಣನಿಗೆ ಲದ್ದೆ ಪೆಟ್ಟು

ದಡ್ಡ ಮನೆ ಕಟ್ಟುತ್ತಾನೆ, ಬುದ್ಧಿವಂತ ಅದರಲ್ಲಿ ಇರುತ್ತಾನೆ

ನಾಯಿ ಬಾಲ ಡೊಂಕು

ನೆಗಡಿಯಂತ ರೋಗ ಇಲ್ಲ, ಬುಗುಡಿಯಂತ ವಸ್ತುವಿಲ್ಲ

ಬಡವನ ಸಿಟ್ಟು ದವಡೆಗೆ ಮೂಲ

ಊರು ಸುಟ್ರು ಹನುಮಪ್ಪ ಹೊರಗ

ಪುಣ್ಯಕ್ಕೆ ಎಮ್ಮಿಕೊಟ್ರೆ, ಹಲ್ಲು ಎಷ್ಟು ಅಂದನ್ನಂತೆ

ಮೀಸೆ ಬಂದವನಿಗೆ ದೇಶ ಕಾಣಲ್ಲ, ಮೊಲೆ ಬಂದಾಕಿಗೆ ನೆಲ ಕಾಣಲ್ಲ

ಮಾಡಿದೋರ ಪಾಪ ಆಡಿದೋರ ಬಾಯಲ್ಲಿ

ಮಳೆ ನಿಂತು, ಮಳೆ ಹನಿ ನಿಲ್ಲಲಿಲ್ಲ

ಹಣ್ಣು ರಂಬೆ ನನ್ನು ಹೂವು ಕೊಟ್ಟು ಮುಡಿ

ಮೇಲೆಲ್ಲಾ ತಳಕು, ಒಳಗೆಲ್ಲಾ ಹುಳುಕು

ಮಧ್ಯರಾತ್ರಿಯಲ್ಲಿ ಸರಿ ಬಂದ್ರೆ ಅರ್ಧ ರಾತ್ರಿಯಲ್ಲಿ ಕೊಡೆಯಿಡಿದ್ರಂತೆ

ಹಗಲ ಕಾಯಿಗೆ, ಬೇವಿನ ಕಾಯಿ ಸಾಕ್ಷಿ

ಹೆತ್ತೋರಿಗೆ ಹೆಗ್ಗಣ ಮುದ್ದು

ಹುಟ್ಟು ಗುಣ ಸುಟ್ರೂ ಹೋಗಲ್ಲ

ಅಟ್ಟ ಮೇಲೆ ಒಲೆ ಉರಿತು, ಕೆಟ್ಟ ಮೇಲೆ ಬುದ್ದಿ ಬಂತು

ಈಚಲ ಗಿಡದ ಕೆಳಗೆ ಕೂತು ಮಜ್ಜಿಗೆ ಕುಡಿದರೂ ಸಾರಾಯಿ ಕುಡಿದಾಂಗೆ

ಕಳ್ಳನ ಹೆಂಡತಿ ಎಂದಿದ್ರು ಮುಂಡೆ

ಬಂಡಿ ಕಂಡ್ರೆ ಕಾಲು ನೋವು. ಬುತ್ತಿ ಕಂಡ್ರೆ ಹೊಟ್ಟೆ ಹಸಿವು

ಕೂತು ಉಂಡ್ರೆ ಕುಡುಕೆ ಹೊನ್ನು ಸಾಲದು

ಉಪ್ಪು ತಿಂದ ಮೇಲೆ ನೀರು ಕುಡಿಯಲೇ ಬೇಕು

ಬಂಗಾರದ ಸೂಜಿ ಆದ್ರು, ಕಣ್ಣಿಗೆ ಚುಚ್ಚುಕೊಳ್ಳಕೆ ಆಗತ್ತ

ಬೇಕಾದವರ ಮಾತು ಬೆಲ್ಲಕ್ಕಿಂತ ಸಿಹಿ

ದಿನಾ ಸಾಯೋರಿಗೆ ಅಳುವವರ‍್ಯಾರು

ಕೋತಿ ಕೈಯಾಗೆ ಮಾಣಿಕ್ಯ ಕೊಟ್ಟಂಗ

ಯಾರದು ದುಡ್ಡು ಎಲ್ಲಮ್ಮನ ಜಾತ್ರೆ

ಉದುವುದು ಕೊಟ್ಟು ಬಾರಿಸೊದು ತಗೊಂಡಂಗೆ

ಉಗಾದಿ ಉರ್ಕೊಂಡು ಹೋಯಿತು. ಕಾರು ಹುಣ್ಣಿಮೆ ಕರ್ಕೊಂಡು ಬಂತು

ಆಡು ಮುಟ್ಟದ ಸೊಪ್ಪಿಲ್ಲ, ಗಾದೆಯಿಲ್ಲದ ಭಾಷೆಯಿಲ್ಲ

## ೬.೪ ಒಗಟುಗಳು :

ಒಗಟು ಬುದ್ಧಿವಂತಿಕೆಗೆ ಒಡ್ಡುವ ಸವಾಲುಗಳು. ಒಂದು ವಸ್ತುವನ್ನು ಮತ್ತೊಂದರ ಮೂಲಕ ತುಂಬಾ ಚಮತ್ಕಾರವಾಗಿ ಮಣಿಸುವ ಕ್ರಿಯೆ ಇಲ್ಲಿ ನಡೆದಿರುತ್ತದೆ ಒಗಟುಗಳು ಅನುಮಾನದ ಮೂಲಕ ಅರ್ಥ ಹುಡುಕಲು ತೊಡಗಿಸುತ್ತವೆ. ಈ ಒಗಟುಗಳು ಮೂಲದಲ್ಲಿ ಒಬ್ಬನೇ ವ್ಯಕ್ತಿಯಿಂದ ರಚಿತವಾಗಿದ್ದರೂ ಜನ ಬಳಕೆಯಲ್ಲಿ ಹೆಚ್ಚು ಹೆಚ್ಚು ಪ್ರಯೋಗವನ್ನು ಕಂಡುಕೊಂಡಿದೆ.

ಬುದ್ಧಿಗೆ ಕಸರತ್ತನ್ನು ನೀಡುವ ಒಗಟುಗಳು ಮನೋರಂಜನೆಗಾಗಿಯೂ ಜನರು ಇವುಗಳಿಂದ ಆನಂದವನ್ನು ಪಡೆಯುತ್ತ ಕಾಲಕಳೆಯುವಲ್ಲಿಯೂ ಉಪಯುಕ್ತವಾಗಿವೆ. ಮದುವೆಯ ಕಾರ್ಯಕ್ರಮದಲ್ಲಿ ಒಗಟೆನ ಪಾತ್ರ ಮುಖ್ಯವಾಗಿರುವುದನ್ನು ಗಮನಿಸಬಹುದು.

ಪ್ರಕೃತಿಯಲ್ಲಿ ತಾನು ಕಂಡ ಅನೇಕ ವಸ್ತುಗಳನ್ನು ಬೇರೊಂದು ಕ್ರಿಯೆಯ ಮೂಲಕ ಚಮತ್ಕಾರ ಪೂರ್ಣವಾಗಿ ಸುಂದರವಾದ ಸಾಲುಗಳಲ್ಲಿ ಹೇಳುವ ಬೆಡುಗು, ಒಗಟುಗಳಲ್ಲಿ ವಿಶೇಷವಾಗಿ ಕಂಡು ಬರುತ್ತವೆ. ಲೆಕ್ಕಕ್ಕೆ ಸಂಬಂಧಿಸಿದ ಕೆಲವು ಒಗಟುಗಳು ಬುದ್ಧಿ ಶಕ್ತಿಯನ್ನೂ ಪರೀಕ್ಷಿಸುವ ಸಾಧನವಾಗಿವೆ. ಸೂಕ್ಷ್ಮ ಬುದ್ಧಿಯವನಿಗೆ ತಟ್ಟನೆ ಹೊಳೆಯುವಂತಹ ಸಂಗತಿಗಳು ಸಾಮಾನ್ಯವಾಗಿ ಅಲ್ಲಿ ಕಂಡು ಬರುತ್ತವೆ.

ಒಗಟುಗಳ ಮಹತ್ವವನ್ನು ಕುರಿತು ಹೇಳುವುದಾದರೆ ಅವುಗಳನ್ನು ರೂಡಿಸಿ ಬಳಸುವ ಜನತೆಯ ಯುಗದರ್ಮ, ನಂಬಿಕೆ ಆಸಕ್ತಿ ಹಾಗೂ ಸಂಸ್ಕೃತಿಯನ್ನು ಅವಲಂಬಿಸಿರುತ್ತವೆ ಹಾಗಾಗಿ ಸಮುದಾಯಗಳ ಬಗ್ಗೆ ಹೇಳುವಲ್ಲಿ ಆ ಸಮುದಾಯಗಳ ಸಾಹಿತ್ಯದಲ್ಲಿ ಒಗಟುಗಳು ಪ್ರಾಮುಖ್ಯತೆಯನ್ನು ಪಡೆಯುತ್ತವೆ ಎಂದು ಹೇಳಬಹುದು.

ಒಗಟುಗಳು ಪ್ರಪಂಚದಾದ್ಯಂತ, ಎಲ್ಲ ಸಮುದಾಯ ಜನಾಂಗಗಳಲ್ಲಿಯೇ ಕಾಣಸಿಗುವ ಪ್ರಮುಖ ಪ್ರಕಾರವಾಗಿದೆ. ಎಲ್ಲ ವಯಸ್ಸಿನ ಜನರು ಇದರಲ್ಲಿ ಭಾಗವಹಿಸುತ್ತಾರೆ. ಒಗಟು ಕಟ್ಟುವವನು ಒಂದೇ ವಸ್ತುವನ್ನು ಆಧಾರವಾಗಿರಿಸಿ ತನ್ನ ರೂಪಕ ಸಾಮಾರ್ಥ್ಯದಿಂದ, ಕೆಲವು ಬಾರಿ ಉಪಮೇಯ ಬಲದಿಂದ, ಬಗೆ ಬಗೆಯ ಸುಂದರವಾದ ಶಬ್ದಗಳನ್ನು ವಾಕ್ಚಾತುರ್ಯದಿಂದ ಹಲವು ಒಗಟುಗಳನ್ನೇ ಕಟ್ಟಬಹುದು.

ಬಿಳಿ ಕುದುರೆಗೆ ಹಸಿರು ಬಾಲ–ಮೂಲಂಗಿ

ನಾರಿ ನೀರಿಗೆ ಹೋಗಬ್ಯಾಡ ನೀರಾಗೆ ಕಾಲ್ ಇಡಬ್ಯಾಡ, ನೀರಿಲ್ಲದ ಮನೆಗೆ ಬರಬ್ಯಾಡ–ತೆಂಗಿನ ಕಾಯಿ

ಬೆಳಿಗ್ಗೆ ಎರಡು ಕಾಲು, ಮಧ್ಯಾಹ್ನ ಮೂರು ಕಾಲು ಸಾಯಂಕಾಲ ನಾಲ್ಕು ಕಾಲು– ಮನುಷ್ಯ

ಮೂಲೆ ಇರುವ ಮುದುಕಿಗೆ ಮೈಯಲ್ಲಿ ಕಣ್ಣು– ಜತವೆ

ತಲೆಯಿಲ್ಲದ ಅಜ್ಜ ಊರಿಂದ ಊರಿಗೆ ಪ್ರಯಾಣ ಮಾಡುತ್ತಾನೆ-ದಿಮ್ಮಿ

ಮರದಾಗ ಮರ ಹುಟ್ಟಿ, ಮರಕಾಯಿ ಹಣ್ಣಾಗಿ ತಿನ್ನಲಾರದ ಹಣ್ಣು ಬಲುರುಚಿ-ಮಗು

ಓಡೋಡಿ ಬಂದ, ಅಂಗಿ ಚಣ್ಣ ಬಿಚ್ಚಿದ ಬಾವಿಯೊಳಗೆ ಬಿದ್ದ- ಬಾಳೆಹಣ್ಣು

ಹಸಿರು ಗಿಡದಾಗ ಮೊಸರು ಚೆಲ್ಯಾವ-ಮಲ್ಲಿಗೆ

ಅಂಗಣ್ಣ, ಮಂಗಣ್ಣ ಅಂಗಿಬಿಚ್ಚಿ ನುಂಗಣ್ಣ-ಬಾಳೆಹಣ್ಣು

ಕಾಲು ಇಲ್ಲದ ಕುಂಟ ಸರಸರ ಹೋಗ್ತಾನ- ಹಾವು

ನೀರುಂಟು ಕೆರೆಯಲ್ಲಿ, ಬೆಳ್ಳಗಿದ್ದೇನೆಹಾಲಿಲ್ಲ, ಕಪ್ಪಗಿದ್ದೇನೆ, ಕಾಗೆಯಲ್ಲ ರೆಕ್ಕೆಯುಂಟು ಪಕ್ಷಿಯಲ್ಲ-ಕಣ್ಣು

ಊರಿಗೆ ಒಕ್ಕಲುದಾರ, ಜಂತಿಗೆ ಜಮೀನುದಾರ, ಬಚ್ಚಲಬಹುದ್ದೂರ-ನಾಯಿ, ಇಲಿ, ಕಪ್ಪೆ

ಹಾರುತ್ತೇನೆ ಹನುಮನಲ್ಲ ಕೂಗುತ್ತಾನೆ ಹುಲಿಯಲ್ಲ, ಹಾಗಾದರೆ ನಾನಾರು-ಕಪ್ಪೆ

ಅಪ್ಪನ ದುಡ್ಡು ಎಣಿಸಲಾರೆ, ಅಮ್ಮನ ಸೀರೆ ಮಡಿಚಲಾರೆ- ನಕ್ಷತ್ರ ಆಕಾಶ

ಕರಿಸೀರೆ ಉಟ್ಟಾಳ, ಕಾಲುಂಗರ ತೊಟ್ಟಿಲ ಮೇಲೆ ಕೆಳಗೆ ಓಡುತ್ತಾಳೆ- ಒನಕೆ

ಮೇಲೆ ಬಂಗಾರ, ಒಳಗೆ ಬೆಳ್ಳಿ- ತೆಂಗಿನ ಕಾಯಿ

ಕತ್ತಲಲ್ಲಿ ಕರೆಮ್ಮ ಕುಂತಾಳ - ಅಂಚು

ಸಂತೆಯಲ್ಲಿ ತರುತ್ತೇನೆ. ಮನೆಯು ಕೂತು ಅಳುತ್ತಾನೆ - ಈರುಳ್ಳಿ

ಅಂಕು ಡೊಂಕು ಬಾವಿ, ಅಣಿಕಿ ಹಾಕಿದರೆ ನೀರಿಲ್ಲ- ಕಿವಿ

ತುತ್ತರಗಿಂಡಿ, ತಾಮ್ರಗಿಂಡಿ, ಮಚ್ಚಳ ತೆಗೆದೆ, ಸಾವಿರ ಗುಂಡಿ- ದಾಳಿಂಬೆ

ಸಾವಿರ ಕಾಳಿಗೆ ಒಂದೇ ಕಲ್ಲು - ನಕ್ಷತ್ರ, ಚಂದ್ರ

ಊರಿಗೆಲ್ಲಾ ಒಂದೇ ಕಂಬಳಿ ಹಿಡಿಯೋಕಾಗಲ್ಲ ಮಡಚೋಗಾಲ್ಲ- ಆಕಾಶ

ಒಂದು ತೇಲತ್ತ, ಒಂದು ಮುಳುಗತ್ತ, ಒಂದು ಕರಗತ್ತೆ- ಎಲೆ, ಅಡಿಕೆ, ಸುಣ್ಣ

ಸುತ್ತಮುತ್ತ ಸುಣ್ಣದ ಗೋಡೆ ಬಾಗಿಲು ಇಲ್ಲ- ಮೊಟ್ಟೆ

ಜಗತ್ತಿನ ಅತಿದೊಡ್ಡ ಪಟ್ಟಣ - ಬೆಂಕಿಪಟ್ಟಣ

ಮನೆಯಲ್ಲಿ ತಿರುಗುತ್ತ, ಮೂಲ್ಯಾಗೆ ಕುರುತ್ತೆ - ಕಸಬರಿಗೆ

ಊರುಲ್ಲ ತಿರುಗುತ್ತ ಮನೆಗೆ ಬಂದು ಮೂಲೆ ಸೇರುತ್ತ - ಚಪ್ಪಲಿ

ಊರೆಲ್ಲಾ ಕಾಡು ಕಾಡಲ್ಲಿ ಹುಲಿಗಳು- ಹೇನು

ಒಂದು ಕುಣಿಯೊಳಗೆ ಎರಡು ಹೆಣ -ಶೇಂಗಾ

ಅಕ್ಕ ಅಕ್ಕ ಗಿಡನೋಡು ಗಿಡದ ತುಂಬಾ ಕಾಯಿ ನೋಡು ತಿಂದವರ ಬಾಯಿ ನೋಡು –ಏಲಕ್ಕಿ

ಉದ್ದಾನಾಕಿ, ಬುದ್ಧಿಯಾಲ್ಲಾದಾರೆ ಮಕ್ಕಳನ ಹಡೆದು ಮನೆ ಮನೆಗೆ ಕೊಡ್ತಾಳೆ–ಮೆಣಸಿನ ಕಾಯಿ

ಬಂಡಿ ಹೋಗತ್ತೈತಿ ಬಂಡಾರ ಚೆಲ್ಲತ್ತೈತಿ– ಬೀಸುವ ಕಲ್ಲು ಮತ್ತು ಹಿಟ್ಟು

ಚೋಟುದ್ದ ಹುಡುಗಿ ಮಾರುದ್ದ ಜಡೆ – ಸೂಜಿ, ದಾರ

ನಾಲ್ಕು ಕಾಲಿನ ನಾಗಣ್ಣ, ಬೀಗರ ಕಂಡ್ರೆ ಬಗ್ಗಣ್ಣ – ಹೊರ್ಸು

ಕತ್ತಲ ಮನಿಯಾಗ ಕತ್ತಿ ಬಿಸುತ್ತ – ಎಮ್ಮೆ ಬಾಲ

ಗಿಡ್ಡನ ಗುದ್ದದರೆ ಮನೆ ತುಂಬಾ ಮಕ್ಕು – ಬೆಳ್ಳುಳ್ಳಿ

ಕೂಸು ಕುದುರೆಗಾತ್ರ, ಮಾಸು ಮನೆಗಾತ್ರ, ಕುಸಿನವರತಾಯಿ ಸಾಸಿವೆಗಾತ್ರ– ರಾಗಿ

ಅಪ್ಪ ಉದ್ದ, ಅಮ್ಮ ದೈವ ಮಗದಪ್ಪ– ತೆಂಗಿನ ಕಾಯಿ

ಸಣ್ಣ ಮನಿಗೆ ಬಣ್ಣದ ಬೀಗದ ಕೈ – ಮೂಗುತಿ

ನಡಸಣ್ಣ ನಗರ ಬಣ್ಣ ಹಿಡಿಯಲಿಕ್ಕೋದ, ಕಡಿಯಲಿಕ್ಕೆ ಬರುತ್ತೆ– ಜೇನುಹುಳ

## ೬.೫ ಭಾಷೆ :

ಮನುಷ್ಯ ತನ್ನ ಭಾವನೆಯನ್ನು ಅಭಿವ್ಯಕ್ತಗೊಳಿಸಲು ಮಾಡಿಕೊಂಡಿರುವ ಪ್ರಮುಖ ಸಾಧನೆ ಭಾಷೆ. ಭಾಷೆ ಮನುಷ್ಯನಿಗೆ ಒದಗಿ ಬಂದಿರುವ ನಿಧಿಯಾಗಿದೆ. ಜೊತೆಗೆ ಮಾನವನ ಪರಂಪರೆಯ ಲಾಂಛನವಾಗಿದೆ. ಭಾಷೆ ಸಂಸ್ಕೃತಿಯ ಪ್ರಮುಖ ಅಂಗ ಸಾಮಾಜಿಕ ಕ್ರಿಯೆ ಅದಕ್ಕೆ ತನ್ನದೇ ಆದ ಪ್ರತ್ಯೇಕ ಸ್ಥಾನವಿಲ್ಲ. ಅದು ಬಳಸುವ ವ್ಯಕ್ತಿಯನ್ನು ಅವಲಂಬಿಸಿದೆ. ಹೀಗಾಗಿ ಭಾಷೆಗೂ ಅದನ್ನು ಬಳಸುವು ವ್ಯಕ್ತಿಗೂ ನಿಕಟವಾದ ಸಂಬಂಧವಿದೆ.

ಭಾಷೆಯನ್ನು ಕಂಠಸ್ಥ ಹಾಗೂ ಗ್ರಂಥಸ್ಥವೆಂದೂ ಎರಡು ಭಾಗಗಳಾಗಿ ವಿಂಗಡಿಸಬಹುದು ಜನ ಆಡುವ ಭಾಷೆ ಕಂಠಸ್ಥವಾದರೆ, ಲಿಪಿ ಬದ್ದಗೊಳಿಸಿದುದು ಗ್ರಂಥಸ್ಥ ಭಾಷೆಯಾಗುವುದು. ಬರಹದ ಭಾಷೆ ನಿಜವಾದ ಸ್ವಾಭಾವಿಕ ಭಾಷೆಯಾಗದು ಕಂಠಸ್ಥ ಅಥವಾ ಜನಪದ ಭಾಷೆ ನೈಸರ್ಗಿಕವಾದುದಾಗಿದೆ. ಅದನ್ನೆ, ದೇಸಿ ಎಂದು ಪ್ರಾಚೀನ ಕವಿಗಳು ಕರೆದಿದ್ದಾರೆ. ಇದನ್ನೆ ನಾವು ಶಿಷ್ಠ ಪದ ಮತ್ತು ಜಾನಪದ ಎನ್ನತ್ತೇವೆ. ಶಿಷ್ಟಪದ ಸಾಹಿತ್ಯ ಶಾಸ್ತ್ರ, ನಿರ್ದೇಶನದಲ್ಲಿ ಹುಟ್ಟಿದರೆ, ಜನಪದ ಸಾಹಿತ್ಯ "ನೆಲಸಿದಂ ಕಾವ್. ಕಾವ್ಯಕ್ಕೆ ಲಕ್ಷಣಂ" ಎಂಬಂತೆ ಈ ಮೊದಲು ಹುಟ್ಟಿದ ಸಾಹಿತ್ಯದ ಮಾದರಿಯಲ್ಲಿ ರೂಪ ಪಡೆಯುತ್ತದೆ. ಹೀಗೆ ಅನುಸೃಷ್ಟಿ ಕ್ರಮದಲ್ಲಿ ಹುಟ್ಟಿ ಒಮ್ಮೆ ಆಕಾರ ಪಡೆದು ಅದು ಮುಂದೆ ಕಾಲ ದೇಶಗಳಿಗೆ ಅನುಗುಣವಾಗಿ ನಿದ್ದೆಗೊಮ್ಮೆ ನಿತ್ಯ ಮರಣ ಎದ್ದ ಸಲ ನವೀನ ಜನನ ಎಂಬಂತೆ ಪುನಃ ಸೃಷ್ಟಿಗೊಳ್ಳುತ್ತಾ ನಡೆಯುತ್ತದೆ.

ಭಾಷೆ ವ್ಯಕ್ತಿಯ ಅಂತರಂಗದ ಅಭಿವ್ಯಕ್ತಿ ಮಾಧ್ಯಮ ಪದಗಳೇ ಅದರ ಅಂಗ ನೈಸರ್ಗಿಕತೆಯಿಂದ ಕೂಡಿದ ಈ ಭಾಷಾ ಲಿಪಿಯನ್ನು ರೂಪಿಸಿಕೊಳ್ಳುವುದಕ್ಕಿಂತ ಪೂರ್ವದಿಂದಲೇ ಆದಿ ಮಾನವನ ಗುಂಪುಗಳು ತಮ್ಮ ಭಾವನೆಯನ್ನು ಶಾಬ್ಧಿಕ ರೂಪದಲ್ಲಿ ಅಭಿವ್ಯಕ್ತಗೊಳಿಸುತ್ತಾ ಬಂದರು ತಮ್ಮಗುಂಟಾದ ಸುಖ-ದುಃಖವನ್ನು ಅದ್ಭುತ ಆಶ್ಚರ್ಯವನ್ನೋ ಸೋಲುಗೆಲುವನ್ನೋ ಕುಣಿತದಲ್ಲಿ ಹಾಡುಗಳಲ್ಲಿ ಮೂರ್ತಗೊಳಿಸಿದರು. ಇಂತಹ ಜನಪದರು ತಮ್ಮ ಪರಿಸರದಲ್ಲಿ ತಮ್ಮ ಮೇಲೆ ಪ್ರಭಾವ ಬೀರಿದ. ಬೀರುವ ವಸ್ತುಗಳನ್ನು ಕುರಿತು ಸಾಮೂಹಿಕವಾಗಿ ತಮಗೆ ತಿಳಿದ ಚಾರಿತ್ರೆ, ಪರಾಕ್ರಮ, ಶೌರ್ಯ ತಾವು ನೋಡಿದ ದಾರ್ಮಿಕ, ಸಾಮಾಜಿ, ತ್ಯಾಗ, ಬಲಿದಾನ, ಕೌಟುಂಬಿಕ ಸುಖ-ದುಃಖ ಸಂದರ್ಭಗಳಿಗೆ ಸಹಜವಾಗಿಯೇ ಸ್ಪಂಧಿಸಿ ಅಂತಹ ಘಟನೆಗಳನ್ನು ವಿವರವಾಗಿ ಸೆರೆಹಿಡಿದು ಗೀತೆ, ಕಥೆ, ಐತಿಹಾಸಿಕ ಕಥನ, ಕಾವ್ಯಗಳ ಮುಖಾಂತರ ಮನಮೋಹಕವಾಗಿ ಹೃದಯ ಸ್ಪರ್ಶಿಯಾಗಿ ಮುಂದಿನ ತಲೆಮಾರಿಗೆ ಬಳುವಳಿಯಾಗಿ ಕೊಡುತ್ತಾ ಬಂದಿದ್ದಾರೆ.

### ಮಾತೃಭಾಷೆ ಮತ್ತು ಕಲಿತ ಭಾಷೆ :

ಮರಿಯಮ್ಮನಹಳ್ಳಿಯಲ್ಲಿ ನೆಲೆಸಿರುವ ಮತ್ತು ಮೂಲವಾಸಿಗಳಲ್ಲಿ ಬಹುತೇಕ ಸಮುದಾಯದವರು ಮಾತೃ ಭಾಷೆ ಕನ್ನಡವಾಗಿದೆ. ವಲಸೆ ಬಂದಂತಹ ಸಮುದಾಯಗಳಾದ

ವೈಶ್ಯರು ತೆಲುಗು ಮಾತೃ ಭಾಷೆಯಾಗಿದೆ. ವ್ಯಾವಹಾರಿಕವಾಗಿ ಕನ್ನಡವನ್ನು ಮಾತನಾಡುತ್ತಾರೆ, ಮುಸ್ಲಿಂರು ಉರ್ದು ಮಿಶ್ರಿತ ಹಿಂದಿಯನ್ನು ಮಾತಾನಾಡುತ್ತಾರೆ. ಅಲ್ಲದೇ ಅವರು ಕನ್ನಡವನ್ನು ವ್ಯಾವಹಾರಿಕವಾಗಿ ಮಾತನಾಡುತ್ತಾರೆ. ಜೈನರು ತಮ್ಮ ಮಾತೃ ಭಾಷೆಯಾದ ರಾಜಾಸ್ಥಾನಿಯನ್ನು ಆಡುವವರು ಅವರ ಮನೆಗಳಿಗೆ ಕೆಲಸ ಮಾಡುವಂತಹವರು ಕೂಡ ರಾಜಾಸ್ಥಾನಿ ಮಿಶ್ರಿತ ಕನ್ನಡ ಭಾಷೆಯನ್ನು ಆಡುತ್ತಾರೆ. ಇಲ್ಲಿ ನೆಲೆಸಿರುವ ಕ್ಷೌರಿಕ ಮಾತೃಭಾಷೆ ತೆಲುಗು, ಅವರು ವ್ಯಾಪಾರ ವೃತ್ತಿಯಲ್ಲಿ ಕನ್ನಡವನ್ನು ವ್ಯವಹಾರಿಕ ಭಾಷೆಯನ್ನಾಗಿ ಬಳಸುತ್ತಾರೆ. ನಾಯಕರು, ಹರಿಜನರು ಕುರುಬ, ಸಮುದಾಯದವರ ಮಾತೃ ಭಾಷೆಯು ಕನ್ನಡವಾಗಿದೆ. ಈ ಸಮುದಾಯಗಳಲ್ಲಿ ಕಲಿತ ಭಾಷೆಗಳು ಹಿಂದಿ, ತೆಲುಗು, ಇಂಗ್ಲೀಷ್ ಭಾಷೆಯನ್ನು ಅಲ್ಪಸ್ವಲ್ಪ ಬಳಕೆ ಮಾಡುತ್ತಾರೆ. ಇಂಗ್ಲೀಷ್ ಭಾಷೆಯನ್ನು ಸಾಮಾನ್ಯವಾಗಿ ಎಲ್ಲಾ ವರ್ಗಗಳಲ್ಲಿ ವಿದ್ಯಾವಂತರು ಮಾತ್ರ ಸರಳವಾಗಿ ಮಾತನಾಡಬಲ್ಲವರಾಗಿದ್ದಾರೆ.

# ಅಧ್ಯಾಯ - ೭

## ರಾಜಕೀಯ ಜೀವನ

ಭಾರತದ ರಾಜಕೀಯ ವ್ಯವಸ್ಥೆಯಲ್ಲಿ ಹಣವಂತ ಸಮೂಹಗಳಿಗೆ ಮಾತ್ರ ಅಧಿಕಾರ ಎಂಬ ಒಂದು ಅನುಶಾಸನ ಮೌಖಿಕ ಅರ್ಥವಂತಿಕೆಯಾಗಿ ಇಲ್ಲಿ ಉಳಿದು ಬಂದಿದೆ. ಒಂದು ಗ್ರಾಮದ ರಾಜಕೀಯ ಜೀವನವನ್ನು ಕುರಿತು ವಿವರಿಸುವಾಗ ಒಂದು ಹಳ್ಳಿಯಲ್ಲಿ ಹಲವು ಸಮುದಾಯಗಳಿದ್ದು ಅಲ್ಲಿ ನಡೆಯುವಂತ ರಾಜಕೀಯ ವಿದ್ಯಾಮಾನಗಳನ್ನು ಕುರಿತು ತಿಳಿಯುವಲ್ಲಿ ಆ ಗ್ರಾಮದಲ್ಲಿರುವ ಜಾತಿ ವ್ಯವಸ್ಥೆ, ರಾಜಕೀಯ ಜ್ಞಾನ, ವಿದ್ಯಾವಂತರ ಸಂಖ್ಯೆ, ಜನಸಂಖ್ಯೆ ಹೀಗೆ ಹತ್ತು ಹಲವು ದೃಷ್ಟಿಯಿಂದ ಅಧ್ಯಯನ ಮಾಡಬೇಕಾಗುತ್ತದೆ.

ನಮ್ಮ ಗ್ರಾಮಗಳಲ್ಲಿರುವ ಕೆಳವರ್ಗದ ಸಮುದಾಯಗಳಲ್ಲಿ ವಿದ್ಯಾವಂತ ಜನಸಂಖ್ಯೆ ಕಡಿಮೆ ಇದ್ದು ಆರ್ಥಿಕ ಪರಿಸ್ಥಿತಿಯು ತುಂಬಾ ಹೀನಾಯ ಸ್ಥಿತಿಯಲ್ಲಿರುವುದರಿಂದ ಇವರ ರಾಜಕೀಯ ಜೀವನವನ್ನು ಅಧ್ಯಯನ ಮಾಡಿದರೆ ಈ ಸಮುದಾಯಗಳಿಗೆ ಸೌಲಭ್ಯ ಎಂದರೇನು? ಸರ್ಕಾರ ಎಂದರೇನು? ರಾಜಕೀಯ ಎಂದರೇನು ಎಂಬುದನ್ನು ಅರ್ಥಮಾಡಿಕೊಳ್ಳಲು ಹೋಗದೆ, ತಮ್ಮ ದಿನನಿತ್ಯದ ಸಾಂಸಾರಿಕ ಹೊಣೆಯನ್ನು ಸಾಗಿಕೊಂಡು ಮುಂದೆ ನಡೆಯುವುದರಲ್ಲಿ ಇವರು ತೃಪ್ತರಾಗಿ ನಾಳೆಯ ಬಗ್ಗೆ ಯೋಚಿಸಿದರೆ ಇಂದು ಇದ್ದುದರಲ್ಲಿ ಜೀವನ ನಡೆಸುತ್ತಾರೆ. ಅರೆಹೊಟ್ಟೆಯಲ್ಲೇ ಜೀವನ ಸಾಗಿಸುವ ಹಲವು ಸಮುದಾಯಗಳನ್ನು ನಾವು ಇಂದು ಕಾಣಬಹುದು. ಒಂದು ಗ್ರಾಮದ ಅಧ್ಯಯನದ ಸಂದರ್ಭದಲ್ಲಿ ಈ ಸಮುದಾಯಗಳು ಹೊಂದಿರುವ ರಾಜಕೀಯ ಜ್ಞಾನವು ಮುಖ್ಯವೆನಿಸುತ್ತದೆ. ಸಮುದಾಯಗಳನ್ನು ಕುರಿತು ವಿವರಿಸುವಾಗ ಅವರು ಯಾವುದೇ ಸರಕಾರದ ಸೌಲಭ್ಯ ಪಡೆಯುವಲ್ಲಿ ಒಂದು, ಈ ಸಮುದಾಯಗಳು ತಮ್ಮ ಮಾತುಗಳನ್ನು ಬಲಿಷ್ಟ ಜಾತಿಗಳಿಗೆ ಮಾರಬೇಕು. ಇಲ್ಲ ಸರಕಾರ ಇವರ ಮೇಲೆ ಕರುಣೆಯನ್ನು ತೋರಬೇಕು. ಹಾಗಾದಾಗ

ಮಾತ್ರ ಏನಾದರು ಅಲ್ಪಸ್ವಲ್ಪ ಸೌಲಭ್ಯ ಸಿಗಲು ಸಾಧ್ಯವೆಂದು ಹೇಳಬಹುದು. ಭಾರತ ಹಳ್ಳಿಗಳ ನಾಡು. ಇಂದಿಗೂ ಹಳ್ಳಿಗಳಲ್ಲಿ ಜಾತಿಪದ್ಧತಿಯು ಅಷ್ಟೊಂದು ಸಡಿಲವಾಗಿಲ್ಲ. ಕೆಳವರ್ಗ ಜಾತಿಗಳಿಗೆ ಹೆಚ್ಚಿನ ಸೌಲಭ್ಯಗಳು ದೊರೆಯುವುದು ಭಾರತದ ಇಂದಿನ ಪರಿಸ್ಥಿತಿಯಲ್ಲಿ ಕಷ್ಟ ಸಾಧ್ಯದ ವಿಷಯವಾಗಿದೆ. ಈ ಕುರಿತು ರಾಮ ಮನೋಹರ ಲೋಹಿಯಾರವರು ಹೀಗೆ ತಿಳಿಸುತ್ತಾರೆ. "ರಾಜಕೀಯ ಪಕ್ಷಗಳಲ್ಲಿ ಅಧಿಕಾರದ ಹುದ್ದೆಗಳನ್ನು ಸೂಕ್ತ ಪ್ರಮಾಣದಲ್ಲಿ ನೀಡಬೇಕಾಗಿದೆ. ಸಮಿತಿಗಳನ್ನು ರಚಿಸುವಾಗ ಶೂದ್ರ ಹರಿಜನ ಮತ್ತು ಮುಸಲ್ಮಾನರಿಗೆ ಹೆಚ್ಚಿನ ಪ್ರಾತಿನಿಧ್ಯವನ್ನು ನೀಡಬೇಕಾಗಿದೆ. ಅಗಸ, ಕ್ಷೌರಿಕ, ಗಾಣಿಗ, ಕಮ್ಮಾರ ಮತ್ತು ಇತರ ಹಿಂದುಳಿದ ಜಾತಿಗಳಲ್ಲಿ ನೂರಾರು ಬಗೆಯ ಸಮಸ್ಯೆಗಳಿವೆ. ಅವರ ಕೇರಿಗಳಿಗೆ ಒಳ್ಳೆಯ ರಸ್ತೆಗಳು, ಸೂಕ್ತ ಬೆಲೆಗೆ ಕಚ್ಚಾ ಸಾಮಾಗ್ರಿಗಳು ದೊರೆಯಬೇಕು, ಪೋಲೀಸರ ದಬ್ಬಾಳಿಕೆ ಇವರ ಮೇಲೆ ನಿಲ್ಲಬೇಕು. ಇವರಿಗೆ ಎಲ್ಲಾ ಮೂಲಭೂತ ಸೌಲಭ್ಯಗಳನ್ನು ದೊರಕಿಸಿಕೊಟ್ಟು ಆ ಮೂಲಕ ಅವರ ವಿಶ್ವಾಸವನ್ನು ಗಳಿಸಿಕೊಂಡು ಈ ನತದೃಷ್ಟ ಜಾತಿಗಳು ಸಂಘಟನೆಯನ್ನು ರಾಜಕೀಯ ಕ್ಷೇತ್ರದೊಳಗೆ ತರುವುದರಿಂದ ಬಹುಜನ ಸಮಾಜ ರೂಪಿತವಾಗಬಲ್ಲದು" (ರಾಮ ಮನೋಹರ ಲೋಹಿಯಾ ೧೯೯೮:೧೭೮).

ಇಂದು ಭಾರತದ ರಾಜಕೀಯ ಸ್ತಂಭ ನಿಂತಿರುವುದೇ ಜಾತಿಗಳ ಆಧಾರದ ಮೇಲೆ ಜನಸಂಖ್ಯೆ ವೃದ್ಧಿಯಿಂದ ಪ್ರಭಾವವಾಗಿರುವ ಬಹುಸಂಖ್ಯಾತ ಜಾತಿಗಳು ಸರ್ಕಾರದಿಂದ ಸಿಗುವ ಅಲ್ಪ ಅವಕಾಶಗಳನ್ನು ತಮ್ಮದಾಗಿಸಿಕೊಳ್ಳುತ್ತಿವೆ. ಮತ್ತು ಅಂತಹ ಸಮುದಾಯದವರು ಇಂದು ತುಂಬಾ ಪ್ರಜ್ಞಾವಂತರಾಗಿದ್ದು ತಾವು ಮತಗಳ ಠೇವಣಿ (Voting Bank) ಎಂಬುದನ್ನು ಸೂಚ್ಯವಾಗಿ ಆಡಳಿತಾರೂಢ ರಾಜಕೀಯ ಪಕ್ಷಗಳಿಗೆ ಎಚ್ಚರಿಕೆ ಕೊಡುವುದರ ಮೂಲಕ ತಮಗೆ ಬೇಕಾದ ಸೌಲಭ್ಯಗಳನ್ನು ಹೊಂದುವ ಗುಣಗಳನ್ನು ಪಡೆದಿವೆ.

ಮೇಲೆ ಹೇಳಿದ ಹಿನ್ನಲೆಯಲ್ಲಿ ಯೋಚಿಸಿದಾಗ ಹೀಗೆ ಕೆಳಜಾತಿಗಳಿಗೆ ರಾಜಕೀಯ ಅಧಿಕಾರವೆಂಬುದು ಕನಸಾಗುತ್ತದೆ. ಹಾಗೆಯೇ ಹಳ್ಳಿಗಳಲ್ಲಿಯೂ ವಿಧಾನ ಸಭೆ, ವಿಧಾನ ಪರಿಷತ್ತು, ಲೋಕಸಭೆಗಳಲ್ಲಿ ಸ್ಥಾನ ಪಡೆಯುವ ವ್ಯಕ್ತಿಗಳು ಅಪರೂಪ. ಏಕೆಂದರೆ, ಹೇಗೆ ರಾಜಕಾರಣವೆಂಬುದು ಮೇಲ್ಜಾತಿಗಳು ಹಾಗೂ ಮೇಲ್ಜಾತಿ ಪರವಾಗಿರುವ ಕೆಳ ಸಮುದಾಯದ ಜನಗಳಿಗೆ ದೊರೆಯುವುದೋ ಹಾಗೆ, M.L.A., M.L.C. ಲೋಕ ಸಭೆ ಸದಸ್ಯತ್ವ, ರಾಜ್ಯಸಭೆ ಸದಸ್ಯತ್ವಗಳೂ ಸಹ ನಗರ ಕೇಂದ್ರಿತ ವ್ಯಕ್ತಿಗಳಿಗೆ ಹೆಚ್ಚಾಗಿರುವುದನ್ನು ಕಾಣುತ್ತೇವೆ. ಹಾಗಾಗಿ ಮರಿಯಮ್ಮನಹಳ್ಳಿಯಂಥ ಪರಿಸರದಲ್ಲಿರುವ ಜನ ಸಮುದಾಯಗಳಿಗೆ, M.L.A., M.Pಗಳಿಗೆ ಓಟು ಹಾಕುವುದನ್ನು ಬಿಟ್ಟರೆ ಬೇರೇನೂ ಗತಿ ಇಲ್ಲ. ಇಲ್ಲಿಯವರೆ ನಿಂತು ಸ್ಪರ್ಧಿಸಬೇಕೆಂದರೆ ಆರ್ಥಿಕ ಅನುಕೂಲತೆ ಇಲ್ಲದಿರುವುದು ಜೊತೆಗೆ ಒಂದು M.L.A or M.P ಸೀಟಿನ ಓಟುಗಳ ಲೆಕ್ಕಾಚಾರ ಹಾಕಿದಾಗ ಮರಿಯಮ್ಮನ ಹಳ್ಳಿಯ ಓಟುಗಳು ಏನೂ ಅನಿಸುವುದಿಲ್ಲ. ಹಾಗಾಗಿ ಇಲ್ಲಿ ಇವರ ಪೈಪೋಟಿ ಏನಿದ್ದರು ಒಂದು ರೀತಿಯಲ್ಲಿ ಇಲ್ಲವೆಂದೇ ಹೇಳಬಹುದು.

೧೯೫೦ ರಿಂದ ಇತ್ತೀಚಿನವರೆಗೂ ನಡೆದ ಎಲ್ಲಾ ಚುನಾವಣೆಗಳನ್ನು ಗಮನಿಸಿದಾಗ ೧೯೯೪-೯೫ರ M.L.A ಅಭ್ಯರ್ಥಿಯಾಗಿ ಮರಿಯಮ್ಮನಹಳ್ಳಿಯ ಶ್ರೀ.ಜೊಳ್ಳಿನ ರಾಮಪ್ಪನವರು ಸ್ಪರ್ಧಿಸಿದ್ದರು ಸಹ ಅವರ ಸ್ಪರ್ಧೆ ಕೇವಲ ನಿಮಿತ್ತ ಮಾತ್ರವಾಗಿ ಕಂಡು ಬಂದಿತ್ತು.

೧೯೫೦ರಿಂದಲೂ ಈ ಸ್ಥಳೀಯ ರಾಜಕೀಯ ಜೀವನವನ್ನು ನೋಡಿದಾಗ ೧೯೫೩ರವರೆಗೆ ಮರಿಯಮ್ಮನಹಳ್ಳಿ ಕಂದಾಯ ರಹಿತ ಗ್ರಾಮವಾಗಿತ್ತು. ಈ ಗ್ರಾಮ ಸಮೀಪದ ಡಣಾಯಕನ ಕೆರೆ ಗ್ರೂಪ್ ಪಂಚಾಯ್ತಿಯ ಆಡಳಿತಕ್ಕೆ ಒಳಪಟ್ಟಿತ್ತು. ೧೯೫೪ರ ನಂತರ ಈ ಗ್ರಾಮಕ್ಕೆ ನಾರಾಯಣ ದೇವರ ಕೆರೆ ಮತ್ತು ಇತರ ಹಳ್ಳಿಗಳಿಂದ ವಲಸೆ ಬಂದ ಜನಸಂಖ್ಯೆ ೯ ಸಾವಿರ ದಷ್ಟು ಇತ್ತು. ನಂತರ ವರ್ಷಗಳಲ್ಲಿ ಸರ್ಕಾರ ಮರಿಯಮ್ಮನಹಳ್ಳಿ ಗ್ರೂಪ್ ಪಂಚಾಯ್ತಿಯಾಗಿ ಮಾಡಿದರು. ಅಲ್ಲಿಂದು ಛೇರಮನ್‌ರಾಗಿ ಆರ್.ಸಿ.ಅನಂತಚಾರ್ಯ, ಸಣ್ಣ ಬಾವಸಾಬ್, ಈಡಿಗರ ಶೇಷಪ್ಪ, ಕಾಕುಬಾಳು ಗೋಪಾಲ ಶೆಟ್ಟಿ, ವೈ.ರಾಜೇಂದ್ರಪ್ಪ ಶೆಟ್ಟಿ, ಕಾಸಿಂಸಾಬ್‌ರವರುಗಳು ಊರಿನ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸಿದರು.

ಸರಕಾರ ಗ್ರಾಮ ಪಂಚಾಯ್ತಿ ಪರಿಕಲ್ಪನೆ ಜಾರಿಗೆ ತಂದನಂತರ ಗ್ರಾಮ ಪಂಚಾಯಿತಿ

**ಅಧ್ಯಕ್ಷರಾಗಿ**

| | |
|---|---|
| ವಿಶ್ವನಾಥ ಶೆಟ್ಟಿ | ೧೯೮೭ ರಿಂದ ೧೯೯೭ ನಾಣಿಕೇರಿ |
| ಮಾಯಮ್ಮ | ೧೯೯೭ ರಿಂದ ೨೦೦೦ - " - |
| ಚಂದ್ರಪ್ಪ | ೧೯೯೭ ರಿಂದ ೨೦೦೧ - " - |
| ಶ್ರೀಮತಿ ಸೀತಮ್ಮ | ೨೦೦೧ ರಿಂದ ೨೦೦೧ - " - |
| ಶ್ರೀಮತಿ ನಂದಿಹಳ್ಳಿ ಅನೂಸುಯಾ | ೨೦೦೧ ರಿಂದ ೨೦೦೫ - " - |
| ಶ್ರೀಮತಿ ಬಣಕಾರ ಚಂದ್ರಮ್ಮ | ೨೦೦೫ ರಿಂದ ೨೦೦೭ ಮರಿಯಮ್ಮನಹಳ್ಳಿ |

**ಉಪಾಧ್ಯಕ್ಷರು**

| | |
|---|---|
| ನಬಿಸಾಬ್ | ೧೯೮೭ ರಿಂದ ೧೯೯೨ ನಾಣಿಕೇರಿ |
| ಭೀಮಪ್ಪ | ೧೯೯೪ ರಿಂದ ೨೦೦೫ - " - |
| ಸೀತಮ್ಮ | ೨೦೦೦ ರಿಂದ ೨೦೦೩ - " - |
| ಮಹ್ಮಮದ್ ರಫಿ | ೨೦೦೩ ರಿಂದ ೨೦೦೫ - " - |
| ರಾಘವೇಂದ್ರ ಶೆಟ್ಟಿ | ೨೦೦೫ ರಿಂದ ೨೦೦೭ - " - |

ಇಲ್ಲಿನ ಸ್ಥಳೀಯ ಸಂಸ್ಥೆಯಾದ ಗ್ರಾಮ ಪಂಚಾಯಿತಿಯಲ್ಲಿನ ಅಧ್ಯಕ್ಷ, ಉಪಾಧ್ಯಕ್ಷರಾಗಿ ಆಯ್ಕೆಯಾದವರಲ್ಲಿ ಶ್ರೀಮತಿ ಬಣಕಾರ ಚಂದ್ರಮ್ಮ ಎನ್ನುವವರು ಮಾತ್ರ ಮೂಲ ಮರಿಯಮ್ಮನಹಳ್ಳಿಯವರು. ಇವರು ಆಯ್ಕೆ ಆಗಿದ್ದು ೨೦೦೫ರಲ್ಲಿ.

೨೦೦೫ರ ವರೆಗೆ ಇಲ್ಲಿ ರಾಜಕೀಯದಲ್ಲಿ ಆಡಳಿತ ವಹಿಸಿಕೊಂಡವರು ವಲಸೆ ಬಂದು ನೆಲೆನಿಂತವರು. ರಾಜಕೀಯದಲ್ಲಿ ಇವರ ಪ್ರಾಬಲ್ಯವೇ ಹೆಚ್ಚಾಗಿ ಕಂಡುಬರುತ್ತದೆ. ಅಲ್ಲದೇ ಜಿಲ್ಲಾ ಪಂಚಾಯ್ತಿ, ತಾಲ್ಲೂಕು ಪಂಚಾಯ್ತಿ ಆಯ್ಕೆಯಾದವರಲ್ಲಿ ವಲಸೆ ಬಂದವರೇ ಆಯ್ಕೆ ಆಗಿದ್ದಾರೆ.

ಮರಿಯಮ್ಮನಹಳ್ಳಿಯವರು ರಾಜ್ಯಮಟ್ಟದಲ್ಲಿ ಯಾರು ಪ್ರಸಿದ್ಧಿ ಪಡೆಯಲಿಲ್ಲ ಕಾರಣ

೧. ೧೯೫೩ರಲ್ಲಿ ಈ ಗ್ರಾಮಕ್ಕೆ ಬಂದು ನೆಲೆಸಿದಾಗ ಮೂಲಭೂತ ಸಮಸ್ಯೆಗಳು ಹೆಚ್ಚಾಗಿದ್ದವು.

೨. ನಾಣೀಕೇರಿಯ ರಾಜ್ಯಮಟ್ಟದ ರಾಜಕಾರಣಿಗಳು ಮರಿಯಮ್ಮನಹಳ್ಳಿಯಲ್ಲಿ ನೆಲೆಸದೆ ಬೇರೆ ಊರುಗಳಿಗೆ ಹೋಗಿ ನೆಲೆಸಿದರು.

೩. ಇಲ್ಲಿನ ರಾಜಕಾರಣಿಗಳಿಗೆ ಮಾಗದರ್ಶಲನದ ಕೊರತೆ. ಉತ್ಸಾಹದ ಕೊರತೆ ಕಂಡುಬರುತ್ತದೆ.

ಈ ಕಾರಣದಿಂದಾಗಿ ಇಲ್ಲಿನವರು ಸ್ಥಳೀಯ ಸಂಸ್ಥೆಗಳಿಗೆ ಮಾತ್ರ ಸೀಮಿತವಾಗಿದ್ದರೆ. ಇಲ್ಲಿನ ಮೂಲ ನಿವಾಸಿಗಳು ಮತ್ತು ವಲಸೆ ಬಂದವರಲ್ಲಿ, ವಲಸೆ ಬಂ್ಧವರ ಪ್ರಾಬಲ್ಯವೇ ಹೆಚ್ಚಾಗಿ ಇರುವುದನ್ನು ನೋಡಬಹುದಾಗಿದೆ. ಈಗ ಮೂಲ ಮರಿಯಮ್ಮನಹಳ್ಳಿ ಒಂದು ವಾರ್ಡ್ ಆಗಿ ರೂಪಗೊಂಡಿದ್ದು ಈ ವಾರ್ಡಿನಿಂದ ಇಬ್ಬರು ಅಭ್ಯರ್ಥಿಗಳು ಆಯ್ಕೆಯಾಗಿ ಬರುತ್ತಿದ್ದಾರೆ.

ಮರಿಯಮ್ಮನಹಳ್ಳಿ ತಾಲ್ಲೂಕು ಪಂಚಾಯ್ತಿಗೆ ಇಬ್ಬರನ್ನು ಆರಿಸಿ ಕಳುಹಿಸಿರುತ್ತಾರೆ. ಮೊದಲನೆಯದಾಗಿ ಮರಿಯಮ್ಮನಹಳ್ಳಿಯಿಂದ, ೨ನೇಯದು ಮರಿಯಮ್ಮನಹಳ್ಳಿ ತಾಂಡ ಸುತ್ತಮುತ್ತಲಿನ ಹಳ್ಳಿಯಿಂದ ಆಯ್ಕೆ ಮಾಡಿರುತ್ತಾರೆ.

ಜಿಲ್ಲಾ ಪಂಚಾಯ್ತಿಗೆ ಒಬ್ಬ ಅಭ್ಯರ್ಥಿ ಆಯ್ಕೆಯಾಗಿರುತ್ತಾರೆ. ಗ್ರಾಮ ಪಂಚಾಯ್ತಿ ಇದ್ದು ಒಟ್ಟು ಸದಸ್ಯರ ಸಂಖ್ಯೆ ೩೬. ಇದರಲ್ಲಿ ಮರಿಯಮ್ಮನಹಳ್ಳಿಯ ೬ ವಾರ್ಡ್‌ಗಳು ಮತ್ತು ಮರಿಯಮ್ಮನಹಳ್ಳಿ ತಾಂಡ ೪ ಸದಸ್ಯರು ಮತ್ತು ಗುಂಡ ತಾಂಡದಿಂದ ಇಬ್ಬರು ಇದ್ದಾರೆ. ಅಧ್ಯಕ್ಷ, ಉಪಾಧ್ಯಕ್ಷರನ್ನು ಸದಸ್ಯರೇ ಆರಿಸುತ್ತಾರೆ. ಮರಿಯಮ್ಮನಹಳ್ಳಿ ಕ್ಷೇತ್ರವು ಮೊದಲಿಸಿಂದಲೂ ಕಾಂಗ್ರೆಸ್ ಹಿಡಿತವಿದ್ದು, ಇತ್ತೀಚಿನ ವರ್ಷಗಳಿಂದ ಇತರ ಪಕ್ಷದ ಅಭ್ಯರ್ಥಿಗಳು ಆಯ್ಕೆ ಆಗುತ್ತಿದ್ದಾರೆ.

ಇಲ್ಲಿನ ರಾಜಕೀಯ ಪರಿಸ್ಥಿತಿಯ ಬಗ್ಗೆ ಮೊದಲಿನಿಂದಲೂ ಅವಲೋಕಿಸುತ್ತಾ ಬಂದರೆ ಈ ಮಾಹಿತಿಗಳು ಗೊತ್ತಾಗುತ್ತವೆ.

# ಅಧ್ಯಾಯ – ೮

## ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳು

ಮರಿಯಮ್ಮನ ಹಳ್ಳಿಯ ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರವನ್ನು ಕುರಿತು ಬರೆಯುವಾಗ ಮೊದಲು ಈ ಗ್ರಾಮದ ಹೆಸರು ಮಾರಿಹಳ್ಳಿ ಎಂದಿದ್ದು ಮರಿಯಮ್ಮನಹಳ್ಳಿ ಎಂದು ಬದಲಾಗಿರುವುದು ಒಂದು ಗ್ರಾಮದ ಹೆಸರಿಗೆ ಆಧುನಿಕತೆಯ ಸ್ಪರ್ಶ ಹೇಗೆ ತಟ್ಟುತ್ತೆ ಎಂಬುದನ್ನು ಸೂಚಿಸುತ್ತದೆ. ಇನ್ನೂ ಎರಡು ಪ್ರಮುಖ ಹೆದ್ದಾರಿಗಳ ಮಧ್ಯವಿರುವ ಈ ಹಳ್ಳಿ ಜನರಿಗೆ ಆಧುನಿಕತೆ ತಟ್ಟದೆ ಇರುವುದೆ? ಖಂಡಿತವಾಗಿಯೂ, ಇಂದು ಎಲ್ಲಾ ಹಳ್ಳಿಗಳು ಬಹುಬೇಗನೆ ಆಧುನೀಕರಣಕ್ಕೆ ಒಳಗಾಗುತ್ತಿರುವುದು ಆಶ್ಚರ್ಯದ ಸಂಗತಿಯೇನಲ್ಲ. ಇದಕ್ಕೆ ಕಾರಣ ಸಮೂಹ ಮಾಧ್ಯಮಗಳು. ರಾಷ್ಟ್ರೀಯ ಹೆದ್ದಾರಿಗಳ ಪಕ್ಕಕ್ಕಿರುವುದರಿಂದ ಈ ಹಳ್ಳಿಯು ಬಹುಬೇಗನೆ ಬದಲಾವಣೆಗೆ ಒಳಗಾಗುವುದಕ್ಕೆ ಹವಣಿಸುತ್ತಿದೆಯೇನೋ ಎಂದೆನಿಸುತ್ತದೆ. ಏಕೆಂದರೆ ಹೆದ್ದಾರಿಯ ಪಕ್ಕಕ್ಕಿರುವುದರಿಂದ ಒಂದು ದಟ್ಟ ಜನಸಂದಣಿಯ ಪ್ರಭಾವ, ಇನ್ನೊಂದು ಮೈನಿಂಗ್ ಕೆಲಸಕ್ಕೆ ಬರುವ ಬೇರೆ ಬೇರೆ ರಾಜ್ಯಗಳ ಜನತೆಯ ಪ್ರಭಾವ, ಹಾಗೆಯೇ ಟಿ.ವಿ. ವಾಹಿನಿಯ ಪ್ರಭಾವದಿಂದಾಗಿಯೂ ಈ ಹಳ್ಳಿಯ ಸುತ್ತಲಿರುವ ಬಳ್ಳಾರಿ, ಹೊಸಪೇಟೆ, ಹರಪನಹಳ್ಳಿ, ಇಂತಹ ನಗರಗಳ ಬೆಳವಣಿಗೆಯ ಪ್ರಭಾವವು ಈ ಹಳ್ಳಿಯ ಮೇಲೆ ಇಲ್ಲಿಯ ಜನತೆಯ ಮೇಲೆ ಪ್ರಭಾವ ಬೀರಿದೆ ಎಂದು ಹೇಳಬೇಕು. ನಮ್ಮ ದೇಶದ ಹಳ್ಳಿಗಳಲ್ಲಿ ಜಾತಿಪದ್ಧತಿ ಎನ್ನುವುದು ತುಂಬಾ ದೊಡ್ಡ ಸಮಸ್ಯೆ. ಇಂದಿಗೂ ಹಳ್ಳಿಗಳಲ್ಲಿ ಜಾತಿ ಪದ್ದತಿ ಜೀವಂತವಾಗಿದೆ ಎಂದೇ ಹೇಳಬಹುದು. ಇನ್ನು ಮರಿಯಮ್ಮನ ಹಳ್ಳಿಯಂತ ಒಂದು ಗ್ರಾಮವು ಇದಕ್ಕೆ ಹೊರತಾಗಿಲ್ಲ. ಅಂದರೆ ಇಲ್ಲಿಯೂ ಜಾತಿಪದ್ಧತಿ ಇದೆ ಎಂದು ಕಂಡು ಬಂದರೂ ಅದರ ಸ್ವರೂಪದಲ್ಲಿ ಬದಲಾವಣೆಯಾಗಿರುವುದನ್ನು ಕಾಣಬಹುದು. ಇದಕ್ಕೆ ಮುಖ್ಯ ಕಾರಣ ಮರಿಯಮ್ಮನ ಹಳ್ಳಿಯಲ್ಲಿರುವ ಮೂಲ ಜನತೆ ಮತ್ತು ನಾರಾಯಣದೇವರ ಕೆರೆಯಿಂದ ವಲಸೆ

ಬಂದಂತ ಜನರಿಗೆ ಬ್ರಿಟಿಷರು ಕಟ್ಟಿಸಿಕೊಟ್ಟಿರುವ ಒಂದು ಊರಿನ ಚಿತ್ರಣವನ್ನು ನೋಡಿದಾಗ ನಮ್ಮ ಜಾತಿವ್ಯವಸ್ಥೆಯು ಎಷ್ಟು ಹಿಂದಿನಿಂದಲೂ ಪರಂಪರಾಗತವಾಗಿ ಒಂದು ಊರಿನಲ್ಲಿ ಯಾವ ಯಾವ ಜಾತಿಯ ಜನ ಎಲ್ಲೆಲ್ಲಿ ಇರಬೇಕು ಹೇಗೆ ಒಂದು ಊರು ರಚಿತವಾಗಿರಬೇಕು ಎಂಬುದು ಪೂರ್ವ ನಿರ್ಧಾರಿತವಾಗಿರುವಂತೆ ಈ ಮರಿಯಮ್ಮನಹಳ್ಳಿಯ ಗ್ರಾಮವು ರಚಿತಗೊಂಡಿರುವುದು ಕಂಡು ಬರುತ್ತದೆ. ಊರಿನ ಮಧ್ಯದಲ್ಲಿ ಬ್ರಾಹ್ಮಣರು, ಪ್ರಮುಖ ವಹಿವಾಟು ವ್ಯಾಪಾರದ ಭಾಗದಲ್ಲಿ ವೈಶ್ಯರು, ಊರಿನ ಅಕ್ಕಪಕ್ಕದ ರಸ್ತೆಗಳಲ್ಲಿ ಸ್ವಲ್ಪ ಕೆಳವರ್ಗ ಹಾಗೂ ಊರಿನ ಅಂಚಿನಲ್ಲಿ ಹರಿಜನರಿರುವುದು ಕಂಡು ಬರುತ್ತದೆ. ಈ ಹಳ್ಳಿಯನ್ನು ಅಧ್ಯಯನ ಮಾಡುವಾಗ ಇಷ್ಟೊಂದು ಖಚಿತವಾಗಿ ಒಂದೊಂದು ಸಮುದಾಯದವರ ವಾಸ್ತವ್ಯ ಕಂಡು ಬಂದರು ತನ್ನದೇ ಆದ 'ಜಾತಿ ಸಡಿಲಿಕೆ'ಯ ವಾತಾವರಣ ಈ ಊರಿನಲ್ಲಿ ಸೃಷ್ಟಿಗೊಂಡಿರುವುದು ಒಂದು ಸೋಜಿಗದ ಸಂಗತಿಯಾಗಿದೆ ಎಂದು ಹೇಳಬಹುದು. ಇದಕ್ಕೆ ಕಾರಣವೂ ಇದೆ. ಮರಿಯಮ್ಮನ ಹಳ್ಳಿ ಕಲೆಗೆ ನಮ್ಮ ರಾಜ್ಯದಲ್ಲೇ ಪ್ರಸಿದ್ಧವಾದಂತ ತಾಣ ಕಲೆಯ ಹುಚ್ಚಿನವರು ಇಲ್ಲಿ ಎಷ್ಟಿದ್ದಾರೆಂದರೆ ಇದಕ್ಕೆ ಇಲ್ಲಿ ಒಂದು ಉಕ್ತಿಯು ಉದ್ಭವಿಸಿರುವುದನ್ನು ನೋಡಬಹುದು 'ಮರಿಯಮ್ಮನ ಹಳ್ಳಿಯ ಒಂದು ಬೀದಿಯಲ್ಲಿ ಕಲ್ಲನ್ನು ಎಸೆದರೆ ಅದು ಒಬ್ಬ ಕಲಾವಿದನಿಗೆ (ಈ ಕಲಾವಿದ ನಟ–ನಟಿ, ವಾದ್ಯ ಸಂಗೀತಗಾರ, ಬಯಲಾಟದ ಭಾಗವತ, ಚಿತ್ರ ಕಲಾವಿದ ಯಾರಾದರೊಬ್ಬರಾಗಿರುತ್ತಾರೆ.) ತಾಗುತ್ತದೆ' ಎಂದು ಹೇಳಬಹುದಾದಷ್ಟು ಜನ ಕಲಾವಿದರು ಈ ಊರಲ್ಲಿದ್ದಾರೆ. ಕಲೆಯು ಕೆಳವರ್ಗದ ಸಮುದಾಯಗಳಲ್ಲಿ ತುಂಬಾ ಪ್ರಭಾವಿಸಿರುವ ಅವರಲ್ಲಿ ಬೇರು ಬಿಟ್ಟಿರುವ ಕಲೆಯಾಗಿದೆ. ಈ ಕಲೆಯಿಂದಾಗಿಯೇ ಇಲ್ಲಿ ಹಲವು ಸಮುದಾಯಗಳ ನಡುವೆ ಉತ್ತಮ ಬಾಂಧವ್ಯ, ವಿದ್ಯೆ, ವೃತ್ತಿರಂಗ ಭೂಮಿಯಿಂದಾಗಿ ಸುತ್ತಮುತ್ತಲಿನ ನಗರಗಳ ಪ್ರಭಾವದಿಂದಾಗಿ, ಆಧುನಿಕತೆಯ ಸ್ಪರ್ಶದಿಂದಾಗಿ ಜಾತಿಪದ್ಧತಿಯು ಈ ಗ್ರಾಮದಲ್ಲಿ ಸಡಿಲಗೊಂಡಿರುವುದಕ್ಕೆ ಕಾರಣ ಎಂದು ಹೇಳಬಹುದು. ಇನ್ನು ಈ ವೃತ್ತಿರಂಗಭೂಮಿಯನ್ನು ಕುರಿತು ಹೇಳುವುದಾದರೆ ಹಿಂದೆ ಇದ್ದಂತ ವೃತ್ತಿರಂಗಭೂಮಿಯ ಪರಿಸ್ಥಿತಿ ಮತ್ತು ಇಂದು ವೃತ್ತಿರಂಗಭೂಮಿಯ ಸ್ಥಿತಿಗತಿಯನ್ನು ವಿವರಿಸಬೇಕಾಗುತ್ತದೆ. ಸಾಮಾಜಿಕ ಜೀವನದಲ್ಲಿ ಕಲೆಯಲ್ಲಿ ವೃತ್ತಿರಂಗಭೂಮಿ ಬಗ್ಗೆ ವಿವರವಾಗಿ ಚರ್ಚಿಸಲಾಗಿದೆ.

ಹಿಂದೆ ವೃತ್ತಿರಂಗಭೂಮಿಯು ಈ ಹಳ್ಳಿಯಲ್ಲಿ ತುಂಬಾ ಉಚ್ಛ್ರಾಯ ಸ್ಥಿತಿಯಲ್ಲಿತ್ತು – ಇಂದು ಆಧುನಿಕ ಟಿ.ವಿ. ಮಾಧ್ಯಮ, ಸಿನೇಮಾಗಳಿಂದಾಗಿ ವೃತ್ತಿರಂಗಭೂಮಿಯು ಮೂಲೆಗುಂಪಾಗಿದೆ. ಹಾಗೂ ಸ್ತ್ರೀಯರ ಪರಿಸ್ಥಿತಿಯಂತು ತುಂಬಾ ಶೋಚನೀಯವಾಗಿದೆ ಎಂದೇ ಹೇಳಬಹುದು. ಗಂಡಸರು ಕಲೆಯ ನಂತರ ತಮ್ಮನ್ನು ಇತರ ಉದ್ಯೋಗಗಳಲ್ಲಿ ತೊಡಗಿಸಿಕೊಂಡರು. ಸ್ತ್ರೀಯರು ಅದರಲ್ಲೂ ಕೆಳವರ್ಗದ ಕಲಾವಿದರಾದ ಇವರಿಗೆ ವಿದ್ಯಾಭ್ಯಾಸದ ಕೊರತೆ ಇದ್ದು ಬೇರೆ ಉದ್ಯೋಗಗಳಿಗೆ ಹೋಗುವುದಕ್ಕಾಗಿದೆ. ಇತರ ಚಿಕ್ಕ ಪುಟ್ಟ ತರಕಾರಿ ವ್ಯಾಪಾರ, ಕೂಲಿಗಳಾಗಿ ಇಂದು ಮೈನಿಂಗ್‌ನಲ್ಲಿ ಕಾರ್ಮಿಕರಾಗಿ ದುಡಿಯುತ್ತಿರುವುದನ್ನು ನೋಡಬಹುದು. ಉದ್ಯೋಗವನ್ನೇ

ಇವರು ಹುಡುಕಿಕೊಂಡರು. ಆದರೆ ಸಾಮಾಜಿಕವಾಗಿ ಇವರ ಸ್ಥಿತಿಗತಿ ಹೇಳಿಕೊಳ್ಳಲಾರದಷ್ಟು ಹಿಂದುಳಿದು ಪ್ರಪಾತಕ್ಕೊಳಗಾಗಿದೆ ಎಂದು ಹೇಳಬಹುದು. ಯಾಕೆಂದರೆ ರಂಗ ನಟಿಯರೆಲ್ಲ ಮೈಮಾರುವವರು ಎನ್ನುವಂತ ಪರಿಕಲ್ಪನೆ ಬೆಳೆದು ಬಿಟ್ಟಿರುವುದರಿಂದ ಈ ಕಲೆಯಿಂದ ಇವರು ದೂರ ಸರಿದರು. ಸಾಮಾಜಿಕವಾಗಿ ಇಂದು ಅವಮಾನಕ್ಕೆ, ಮಾನಸಿಕವಾಗಿ ಹಿಂಸೆಗೆ ಒಳಗಾಗುತ್ತಿರುವುದನ್ನು ಕಾಣಬಹುದು. ಸುತ್ತಮುತ್ತಲಿನ ಹಳ್ಳಿಗಳಲ್ಲಿ ನಾಟಕ ಕಲೆಯನ್ನು ಪ್ರದರ್ಶನ ಮಾಡಬೇಕೆಂದರೆ ಮರಿಯಮ್ಮನಹಳ್ಳಿಯ ಸೂಳೆಯರಿಗೆ ಕರೆಯಿರಿ ಎನ್ನುವ ಮಾತು ಈ ಸ್ತ್ರೀಯರ ಪರಿಸ್ಥಿತಿಯನ್ನು ತೋರಿಸುತ್ತದೆ. ದೇವದಾಸಿ ಪದ್ಧತಿ ಇರುವ ಈ ಕುಗ್ರಾಮದಲ್ಲಿ ಸ್ತ್ರೀಯರ ಸಾಮಾಜಿಕ ಪರಿಸ್ಥಿತಿ ಶೋಚನೀಯವಾಗಿದೆ. ಆದರೆ ಇಂದು ಇವರು ತಮ್ಮ ಮಕ್ಕಳಿಗೆ ವಿದ್ಯಾಭ್ಯಾಸ ಕೊಡಲು ಮುಂದಾಗಿದ್ದಾರೆ. ಸರಕಾರ ಇಲ್ಲಿ ಕಲಾವಿದರಿಗೆ ಯಾವ ಮಾಸಾಶನ ಮತ್ತು ಹೆಚ್ಚಿನ ಯಾವ ಸೌಕರ್ಯವನ್ನು ಕೊಟ್ಟರೂ ತಲುಪದಿರುವಂತ ಪರಿಸ್ಥಿತಿ ಇಲ್ಲಿ ಕಂಡು ಬ್ರುತ್ತದೆ.

ಪ್ರಾಥಮಿಕ, ಮಾಧ್ಯಮಿಕ, ಪ್ರೌಢ, ಪದವಿಪೂರ್ವ ಶಿಕ್ಷಣದ ವ್ಯವಸ್ಥೆ ಇದ್ದಾಗಲೂ ಐ.ಟಿ., ಬಿ.ಟಿ. ಕಂಪ್ಯೂಟರ್ ಈ ತರಹದ ಅಂದರೆ, ಇಂದಿನ ಜಾಗತೀಕರಣದ ಹೊತ್ತಲ್ಲಿ ತುಂಬಾ ಮುಂಚೂಣಿಯಲ್ಲಿರುವ ಉದ್ಯೋಗಗಳಿಗೆ ಇಲ್ಲಿಯವರು ಶಿಕ್ಷಣ ಪಡೆಯಲು ಸಾಧ್ಯವಾಗದ ಪರಿಸ್ಥಿತಿ ಇದೆ. ಮೈನಿಂಗ್ ಮತ್ತು ಇತರ ಸುತ್ತಲಿರುವ ಫ್ಯಾಕ್ಟರಿಗಳಿಗೆ ನೌಕರರು ದೊರೆಯುವ ಅನುಕೂಲವಾಗಲೆಂದು ಐ.ಟಿ.ಐ. ಯಂತ ಕಾಲೇಜು ಸ್ಥಾಪನೆಯಾಗಿರುವುದನ್ನು ಕಾಣಬಹುದು. ಬಹಳಷ್ಟು ವಿದ್ಯಾವಂತರು ಮೈನಿಂಗ್‌ನಲ್ಲಿ ಲೆಕ್ಕ ಬರೆಯುವ ಕೆಲಸಕ್ಕೆ ಹೋಗುವುದನ್ನು ಕಾಣಬಹುದು. ಹೀಗೆ ಆಧುನಿಕ ಶಿಕ್ಷಣದ ಸೌಕರ್ಯವನ್ನು ಇಲ್ಲಿ ಕಲ್ಪಿಸಬೇಕಾಗಿದೆ. ಸರಕಾರದ ಯೋಜನೆಗಳಂತೆ ಇಲ್ಲಿ ಸೌಕರ್ಯ ಸಿಕ್ಕರು ಅದು ಪರಿಪೂರ್ಣವಾಗಿ ಯಶಸ್ವಿಯಾಗದಿರುವಂತ ವಾತಾವರಣವಿದೆ. ಉದಾ:-ಇಲ್ಲಿರುವ ಎಸ್.ಸಿ., ಎಸ್.ಟಿ ಹಾಸ್ಟೆಲ್ ನೋಡಿದರೆ ನೀರಿನ ವ್ಯವಸ್ಥೆ, ಶೌಚಾಲಯ ವ್ಯವಸ್ಥೆ ಇಲ್ಲದಿರುವುದು ಕೆಲವೊಮ್ಮೆ ಶಾಲೆಗಳಿದ್ದರು ಮಾಸ್ತರರಿಲ್ಲದ ಪರಿಸ್ಥಿತಿ ಇದೆ. ಹಾಗಾಗಿ ಸರಕಾರ ತುಂಬಾ ಅಚ್ಚುಕಟ್ಟಾಗಿ ಕ್ರಮಕೈಗೊಂಡು ಇಲ್ಲಿ ಶಿಕ್ಷಣದ ಅಭಿವೃದ್ಧಿಗಾಗಿ ಹೊಸ ಕ್ರಮವನ್ನು ಕೈಗೆತ್ತಿಕೊಳ್ಳಬೇಕಾಗಿದೆ.

ಕೂಡ್ಲಿಗಿ ಶಾಸಕರಾದ ಅನಿಲ್‌ಲಾಡ್ ಅವರು ಕಳೆದ ನಾಲ್ಕು ವರ್ಷದಿಂದ ವಿದ್ಯಾರ್ಥಿಗಳಿಗೆ ಉಚಿತವಾಗಿ ಬಸ್‌ಪಾಸ್ ಅನ್ನು ಮಾಡಿಸಿಕೊಡುತ್ತಿದ್ದಾರೆ.

ವಿದ್ಯಾರ್ಥಿಗಳಿಗೆ ತಮ್ಮ ಅನುದಾನದಲ್ಲಿ ಉಚಿತ ಕಂಪ್ಯೂಟರ್ ಶಿಕ್ಷಣ ಕೊಡಿಸುತ್ತಿದ್ದಾರೆ. ಮರಿಯಮ್ಮನಹಳ್ಳಿ ಬಸ್ ನಿಲ್ದಾಣದ ನವೀಕರಣಕ್ಕೆ ೨೫ ಲಕ್ಷ ರೂಪಾಯಿಯ ಕಾಮಗಾರಿಯನ್ನು ಪ್ರಾರಂಭಿಸಿದ್ದಾರೆ.

ಶಾಸಕರು ಸರ್ಕಾರದಿಂದ ಮರಿಯಮ್ಮನಹಳ್ಳಿ ಮತ್ತು ಸುತ್ತಮುತ್ತಲಿನ ಅಭಿವೃದ್ಧಿ ಕಾರ್ಯಗಳಿಗಾಗಿ ೬೦ ಕೋಟಿ ಕಾಮಗಾರಿಯನ್ನು ಮರಿಯಮ್ಮನಹಳ್ಳಿಯಲ್ಲಿ ಪ್ರಾರಂಭಿಸುತ್ತಿದ್ದಾರೆ.

ಮರಿಯಮ್ಮನಹಳ್ಳಿ ಸರಕಾರಿ ಪ್ರಥಮ ದರ್ಜೆ ಕಾಲೇಜು ಪ್ರಾರಂಭಿಸಿದ್ದಾರೆ.

ಇಲ್ಲಿನ ರೈತರ ಬಹುದಿನದ ಕನಸಾದ ಡಣಾಯಕನಕೆರೆ ಏತ ನೀರಾವರಿ ಯೋಜನೆಯನ್ನು ಸುಮಾರು ೪.೫೦ ಕೋಟಿ ವೆಚ್ಚದಲ್ಲಿ ಪ್ರಾರಂಭಿಸಿದ್ದಾರೆ.

ಮರಿಯಮ್ಮನಹಳ್ಳಿ ಸುತ್ತಲಿನ ಸುಮಾರು ೨೦ ಹಳ್ಳಿಗಳಿಗೆ ಕೇಂದ್ರ ಸ್ಥಾನದಲ್ಲಿರುವುದರಿಂದ ರಾಜ್ಯ ಹೆದ್ದಾರಿಯ ಬದಿಯಲ್ಲಿರುವುದರಿಂದ ೧೫ ಸಾವಿರಕ್ಕೂ ಮಿಕ್ಕ ಜನ ಸಂದಣಿ ಇರುವ ಫಿರ್ಕಾ ಕೇಂದ್ರವಾಗಿರುವುದರಿಂದ ಸಹಜವಾಗಿ ಇಲ್ಲಿನ ವ್ಯಾಪಾರ, ವಾಣಿಜ್ಯ, ವಿದ್ಯಾ ಕೇಂದ್ರಗಳು, ಕರಕುಶಲತೆ ಬೆಳೆದಿದೆ. ಎಷ್ಟೇ ಆಧುನಿಕತೆಯ ಸ್ಪರ್ಶವಿದ್ದರೂ ಇಲ್ಲಿ ಜನರ ಜೀವನ ವಿಧಾನವನ್ನು ಒಮ್ಮೆ ಹತ್ತಿರವಾಗಿ ನೋಡಿದರೆ ಇವರು ಆ ದಿನದ ಜೀವನೋಪಾಯಕ್ಕೆ ಬೇಕಾಗುವ ಕೂಲಿ ಮಾತ್ರ ಪಡೆಯಲು ಹವಣಿಸುತ್ತಾರೆ. ಹಾಗೂ ಇಲ್ಲಿಯ ವ್ಯಾಪಾರದ ಉದ್ಯೋಗದ ಸ್ವರೂಪವೂ ಹೀಗೆಯೇ ಇದೆ. ಎಲ್ಲಿಯೂ ಒಂದು ಭದ್ರ ಉದ್ಯೋಗ, ಗಟ್ಟಿ ನೆಲೆಯನ್ನು ಇವರಿಗೆ ಕೊಡಲು ಮೈನಿಂಗ್ ಓನರ್‌ಗಳಿಗೂ ಆಸಕ್ತಿಯಿಲ್ಲ. ಹಾಗೆಯೇ ಯಾವ ಲಾಭದಾಯಕ ಉದ್ಯೋಗಗಳು ಇಲ್ಲಿ ಕಂಡು ಬರುವುದಿಲ್ಲ. ಆ ದಿನದ ಮಟ್ಟಿಗೆ ಮಾತ್ರ ಹೊಟ್ಟೆ ತುಂಬಲು ಬೇಕಾದಂತ ಆದಾಯ ತರುವಂತ ಉದ್ಯೋಗದ ಸ್ವರೂಪವನ್ನಿಲ್ಲಿ ಕಾಣಬಹುದು.

ಮರಿಯಮ್ಮನಹಳ್ಳಿಗೆ ೧೯೫೦ರ ದಶಕದಿಂದಲೂ ಬೇರೆ ಬೇರೆ ಗ್ರಾಮಗಳಿಂದ ವಲಸೆ ಬಂದ ಸಮುದಾಯದವರು ಸರಕಾರದ ಅನುಕೂಲಕ್ಕಾಗಿ ಈಗಲೂ ಕಾಯುತ್ತಿದ್ದಾರೆ. ಆದರೆ ನಮ್ಮ ಘನ ಸರಕಾರ ಇದುವರೆಗೂ ವಲಸೆ ಬಂದಂತಹ ಸಮುದಾಯದವರಿಗೆ ಯಾವುದೇ ರೀತಿಯ ಸವಲತ್ತುಗಳನ್ನು ಕೊಡದೆ ಅತಂತ್ರರಾಗಿ ಬದುಕುವಂತೆ ನೋಡಿಕೊಳ್ಳುತ್ತಿದೆ. ಹಾಗಾಗಿ ೧೯೫೦ರ ದಶಕದಲ್ಲಿ ವಲಸೆ ಬಂದಂತಹ ಬಹುಪಾಲು ಕುಟುಂಬಗಳು ಮತ್ತೊಂದೆಡೆಗೆ ವಲಸೆ ಹೋಗುತ್ತಿದ್ದಾರೆ. ಒಂದು ಉದಾಹರಣೆಯನ್ನು ಕೊಡುವುದಾದರೆ; ತುಂಗಭದ್ರಾ ಜಲಾಶಯದ ನೀರನ್ನು ಡಣಾಯಕನ ಕೆರೆಗೆ ಹಾಯಿಸುವ ಪ್ರಮುಖ ಬೇಡಿಕೆಯನ್ನು ಮರಿಯಮ್ಮನಹಳ್ಳಿ ಹಾಗೂ ಸುತ್ತಮುತ್ತಲಿನ ಜನರು ಅನೇಕ ವರ್ಷಗಳಿಂದ ಈ ಭಾಗದ ಜನ ಪ್ರತಿನಿಧಿಗಳಿಗೆ ಅನೇಕ ಬಾರಿ ಬೇಡಿಕೊಂಡರೂ ಸಹ ಇದುವರೆಗೂ ಯಾರು ಈ ಕೆರೆಯ ಬಗ್ಗೆ ಗಮನ ಹರಿಸಿಲ್ಲ. ತುಂಗಭದ್ರಾ ಜಲಾಶಯದಿಂದ ಡಣಾಯಕನಕೆರೆಗೆ ನೀರು ಹಾಯಿಸುವ ಯೋಜನೆ ಇನ್ನೂ ಕನಸಿನ ಕೂಸೇ ಆಗಿದ್ದು ಇಲ್ಲಿನ ಜನ ಹತಾಶರಾಗಿದ್ದು ನನಸಾಗುವ ದಿನಕ್ಕಾಗಿ ಜಾತಕ ಪಕ್ಷಿಯಂತೆ ಕಾಯುತ್ತಿದ್ದಾರೆ.

ತುಂಗಭದ್ರ ಜಲಾಶಯ ಕಟ್ಟಲು ಸುಮಾರು ೫ ಸಾವಿರ ಎಕರೆ ಫಲವತ್ತಾದ ಭೂಮಿ, ಆಸ್ತಿ ಮನೆ ಬಿಟ್ಟು ಬಂದು ವ್ಯವಸಾಯಕ್ಕೆ ನೀರೇ ಇಲ್ಲದೆ ಊರಿನಲ್ಲಿ ಇಂದಿಗೂ ಮರಳು ಮಿಶ್ರಿತ ಭೂಮಿಯಲ್ಲಿ ಮಳೆಯಾಧಾರಿತ ವ್ಯವಸಾಯದಿಂದಲೇ ಇಲ್ಲಿನ ಜನತೆ ಜೀವನ ಸಾಗಿಸುತ್ತಿದ್ದಾರೆ. ಆದರೆ ಇತ್ತೀಚೆಗೆ ಮಳೆ ಕಡಿಮೆಯಾಗಿ ನೀರಿನ ಮಟ್ಟ ಇಳಿದು ತೋಡಿದ ಬಾವಿಗಳಲ್ಲಿ ನೀರೇ ಇಲ್ಲದೆ ಭತ್ತಿ ಹೋಗಿವೆ. ಇಲ್ಲಿನ ವ್ಯವಸಾಯ ಜೋಳ, ಸಜ್ಜೆ, ಮೆಕ್ಕೆ ಜೋಳ,

ಸೂರ್ಯಕಾಂತಿ, ನೀರಾವರಿ ಸೌಲಭ್ಯವಿದ್ದವರು ಮಾತ್ರ ಕಬ್ಬು, ಭತ್ತ, ಸೊಪ್ಪು, ತರಕಾರಿಯ ಬೆಳೆಗಳನ್ನು ಬೆಳೆಯುತ್ತಾರೆ. ಸಮುದ್ರದ ನೆಂಟಸ್ತನ ಇದ್ದರೂ ಉಪ್ಪಿಗೆ ಬಡತನವೆಂಬಂತೆ ಪಕ್ಕದಲ್ಲೇ ತುಂಗಭದ್ರಾ ನದಿಯ ಜಲಾಶಯವಿದ್ದರೂ ಕುಡಿಯುವ ನೀರಿಗೂ ಸಹ ಮರಿಯಮ್ಮನಹಳ್ಳಿಯಲ್ಲಿ ಇಂದಿಗೂ ಬರವಿದೆ.

ಈಗಿನ ೨೫ ಸಾವಿರ ಜನಸಂಖ್ಯೆಯ ಮರಿಯಮ್ಮನಹಳ್ಳಿಗೆ ನೀರುಣಿಸಬಹುದಾದ ಈ ಭಾಗದಲ್ಲೇ ದೊಡ್ಡದಾದ ಡಣಾಯಕನಕೆರೆಗೆ ತುಂಗಭದ್ರಾ ನದಿಯ ನೀರು ಹರಿಸುವ ಯೋಜನೆಗೆ ಸರಕಾರದಿಂದ ಅನುಮೋದನೆ ದೊರೆತಿದ್ದರೂ ಇಲ್ಲಿಯ ರಾಜಕೀಯ ಸಂಘರ್ಷದಿಂದಾಗಿ ಇನ್ನೂ ಚಾಲನೆ ನೀಡಲಾಗಿಲ್ಲ.

ಅಷ್ಟಕ್ಕೂ ನೀರು ಇಲ್ಲಿಯೂ ಹರಿದಿದ್ದರೆ, ಇಲ್ಲಿಯ ಜನರಿಗೆ ಉಪಯೋಗವಾಗುತ್ತಿತ್ತು ಎಂಬ ಮಾತು ಅನ್ವಯಿಸುವುದು ಜಮೀನು ಇದ್ದವರಿಗೆ ಮಾತ್ರ, ಜಮೀನಿಲ್ಲದ, ಇದ್ದರೂ ತುಂಡುಭೂಮಿ ಇರುವವರ ಸಂಖ್ಯೆಯೇ ಇಲ್ಲಿ ಜಾಸ್ತಿ. ಇವರಲ್ಲಿ ಬಹುಪಾಲು ನಾಯಕ, ಬೆಸ್ತ, ಈಡಿಗ, ಕಮ್ಮಾರ, ಮುಸ್ಲಿಂ, ಹೊಲೆ, ಮಾದಿಗ ಮುಂತಾದ ಹಿಂದುಳಿದ ಸಮುದಾಯಗಳಿಗೆ ಸೇರಿದವರು. ಪರಿಶಿಷ್ಟ ಬುಡಕಟ್ಟಿನ ನಾಯಕ ಸಮುದಾಯದವರಂತೂ ಇಲ್ಲಿ ದಟ್ಟವಾಗಿದ್ದಾರೆ. ಕೂಲಿ ಅರಸುತ್ತಿದ್ದ ಈ ಸಮುದಾಯದ ಮಹಿಳೆಯರಿಗೆ ದೊರೆತದ್ದು ಕಲೆ. ಇದನ್ನೇ ಹೊಟ್ಟೆಪಾಡಿಗಾಗಿ ಮಾಡಿದರು. ಆದರ ಕಲೆ ಇವರ ಜೀವನದ ಮೇಲೆ ಬೀರಿದ ಪರಿಣಾಮ ಗಂಭೀರವಾದುದು ಇದರ ಬಗೆಗೆ ಆಲೋಚಿಸಿದಾಗ ಕೆಲವು ವಿಚಾರಗಳನ್ನು ನಮ್ಮನ್ನು ಕಾಡುತ್ತಿವೆ ಅವುಗಳೆಂದರೆ, ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಮಹಿಳೆಯರು ಹೀಗೆ ಮುಂದೆ ಬರಲು ಸಾಧ್ಯವಾದದ್ದಾದರೂ ಹೇಗೆ? ಕಲಾವಿದೆಯಾಗಿ ಒಂದು ವ್ಯಕ್ತಿತ್ವವನ್ನು ಗಳಿಸಿಕೊಳ್ಳಲು ಸಾಧ್ಯವಾದದ್ದಾದರೂ ಹೇಗೆ? ಒಂದು ಅರ್ಥದಲ್ಲಿ ಈ ಸಮುದಾಯದಲ್ಲಿರುವ ದೇವದಾಸಿ ಪದ್ಧತಿಯೇ ಕಲಾವಿದೆಯಾಗಲು ಕಾರಣವಾಯಿತು. ದೇವದಾಸಿ ಎಂದರೆ ವೇಶ್ಯಾವೃತ್ತಿಯಲ್ಲ. ನಾಯಕ ಹಾಗೂ ಬೆಸ್ತ ಸಮುದಾಯದಲ್ಲಿ ಮಾತ್ರ ಪರಂಪರಾಗತವಾಗಿ ಬಂದಿರುವ ಈ ಪದ್ಧತಿಯನ್ನು ಕೆಲವು ಕುಟುಂಬಗಳು ಅನುಸರಿಸುತ್ತಿದ್ದವು. ದೇವದಾಸಿಯಾದ ಮಹಿಳೆ ಕುಟುಂಬದ ಪುರುಷ ಸದಸ್ಯರಿಗೆ ಸಮಾನ ಸ್ಥಾನ ಪಡೆಯುತ್ತಾಳೆ. ಆಸ್ತಿ ಇದ್ದರೆ ಅದರಲ್ಲಿ ಆಕೆಗೂ ಸಮಪಾಲು ದೊರೆಯುತ್ತದೆ. ತನ್ನ ಬಾಳ ಸಂಗಾತಿಯಾಗಿ ಯಾರನ್ನಾದರೂ ಆರಿಸಿಕೊಳ್ಳಲು ಆಕೆಗೆ ಸ್ವಾತಂತ್ರ್ಯ ಇದೆ. ಇಬ್ಬರ ಮಧ್ಯೆ ಹೊಂದಾಣಿಕೆ ಆಗದಿದ್ದರೆ ವಿಚ್ಛೇದನಕ್ಕಿರುವ ಕಟ್ಟುಪಾಡುಗಳು ಕಡಿಮೆ. ಗೃಹಿಣಿಯಾಗಿ ಗಂಡನ ಮನೆ ತುಂಬುವ ಹೆಣ್ಣಿಗಿಲ್ಲದ ಸ್ವಾತಂತ್ರ್ಯ ದೇವದಾಸಿಗಿದೆ. ಮಹಿಳೆ ಕಲಾವಿದೆಯಾಗಬೇಕಾದರೆ, ಪುರುಷನಿಂದ ಆಕೆಗೆ ಅಡ್ಡಿ-ಆತಂಕಗಳು ಬರಕೂಡದು. ದೇವದಾಸಿಯಾಗುವುದರಿಂದ ಇಂತಹ ಸ್ವಾತಂತ್ರ್ಯ ಲಭಿಸುತ್ತದೆ. ಇದೇ ಕಾರಣಕ್ಕೆ ತನ್ನ ವೈಯಕ್ತಿಕ ಬದುಕಿನಲ್ಲಿ ಸದಾ ಅಭದ್ರತೆಯಲ್ಲಿ ತೊಳಲಾಡುವುದು ಇದರ ಇನ್ನೊಂದು ಮುಖ. ದೇವದಾಸಿಯನ್ನು ವೇಶ್ಯೆಯೆಂದು ಸಮೀಕರಿಸುವುದರಿಂದ ಈ ಪದ್ಧತಿಯನ್ನು ಅರ್ಥ

ಮಾಡಿಕೊಂಡಂತಾಗುವುದಿಲ್ಲ. ವೇಶ್ಯೆ ಯಾರಾದರೂ ಆಗಬಹುದು. ದೇವದಾಸಿಯೇ ಆಗಬೇಕೆಂದೇನೂ ಇಲ್ಲ. ಈ ಪದ್ಧತಿ ಆಚರಿಸುತ್ತಿದ್ದ ಕೆಲ ಕುಟುಂಬಗಳು ಈಗೀಗ ಕೈ ಬಿಡುತ್ತಿವೆ. ಹಾಗಾಗಿ ಮಹಿಳಾ ಕಲಾವಿದರೂ ಕಡಿಮೆಯಾಗುತ್ತಿದ್ದಾರೆ.

ಜೊತೆಗೆ ಈ ಗ್ರಾಮದಲ್ಲಿ ಈಗಲೂ ಮೈನಿಂಗ್‌ನಲ್ಲಿ ಕೆಲಸ ಮಾಡಲು ಬೇರೆ ಬೇರೆ ರಾಜ್ಯಗಳ ಸಮುದಾಯಗಳು ಇಲ್ಲಿ ನೆಲೆ ಕಂಡುಕೊಳ್ಳುತ್ತಿದ್ದಾರೆ. ಹಾಗಾಗಿ ಇದೊಂದು ವಲಸಿಗರ ತಾಣವಾಗಿ ಮಾರ್ಪಟ್ಟಂತಿದೆ.

# ಅಧ್ಯಾಯ - ೯

## ಉಪಸಂಹಾರ

ಮರಿಯಮ್ಮನಹಳ್ಳಿ ಸಂಕಥನವು ಮುಖ್ಯವಾಗಿ ಮರಿಯಮ್ಮನಹಳ್ಳಿಯ ಮೂಲನಿವಾಸಿಗಳು ಹಾಗೂ ವಲಸಿಗರುಗಳು ಕೂಡಿ ಬಾಳುವ ಸಂಸ್ಕೃತಿಯ ಅಂಶಗಳನ್ನು ಅಧ್ಯಯನಕ್ಕೆ ಒಳಪಡಿಸುವುದಾಗಿದೆ. ಇಲ್ಲಿಯ ಅಂಶಗಳು ಮುಖ್ಯವಾಗಿ ಸಂಸ್ಕೃತಿಯನ್ನು ರೂಪಿಸುವಲ್ಲಿ ವಹಿಸಿರುವ ಪಾತ್ರವನ್ನು ಭೌತಿಕವಾಗಿ ವಿವರಿಸಲಾಗಿದೆ. ಮರಿಯಮ್ಮನಹಳ್ಳಿಯ ಪ್ರಾಚೀನತೆಯನ್ನು ಗ್ರಹಿಸುವುದಕ್ಕಾಗಿ ಲಭ್ಯವಿದ್ದ ಮೌಖಿಕ ಆಕರಗಳು, ಚಾರಿತ್ರಿಕ ಆಕರಗಳು, ಪ್ರಸ್ತುತದ ಮಾಹಿತಿಗಳನ್ನು ಗಮನಿಸಿ ಸಾಂಸ್ಕೃತಿಕ ವಿವರಗಳನ್ನು ವಿಷದ ಪಡಿಸುವ ಪ್ರಯತ್ನ ಮಾಡಲಾಗಿದೆ.

ಮರಿಯಮ್ಮನಹಳ್ಳಿಯಲ್ಲಿ ಪ್ರಸ್ತುತದಲ್ಲಿರುವ ಜನಪದರ ಕಲ್ಪನೆ, ನಂಬಿಕೆ, ಆಚರಣೆ, ಸಂಪ್ರದಾಯ, ಭಾಷೆ, ಸಾಹಿತ್ಯ, ಕಲೆ, ಮೂಲ ಹಾಗೂ ವಲಸೆ ಬಂದಿರುವ ಸಮುದಾಯಗಳ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ವಿವಿಧ ನೆಲೆಗಳಲ್ಲಿ ಜನಪದ ಸಂಸ್ಕೃತಿ ಹಾಗೂ ಶಿಷ್ಟ ಸಂಸ್ಕೃತಿಯ ಅಂಶಗಳನ್ನು ಸಾಧ್ಯವಾದಷ್ಟು ವಿವರವಾಗಿಯೇ ಕ್ಷೇತ್ರಕಾರ್ಯವನ್ನಾಧರಿಸಿ ಅಧ್ಯಯನಕ್ಕೊಳಪಡಿಸಲಾಗಿದೆ. ಇಷ್ಟಾದರೂ ಈ ಅಧ್ಯಯನ ಮರಿಯಮ್ಮನಹಳ್ಳಿಯ ಬಗೆಗಿನ ಶೋಧದಲ್ಲಿ ಪರಿಪೂರ್ಣತೆಯೆಂಬುದಾಗಲಿ ಅಥವಾ ಪರಿಸಮಾಪ್ತಿಯಾದದಾಗಲಿ ಇಲ್ಲವೆಂಬುದು ನನ್ನ ಪ್ರಾಮಾಣಿಕ ತಿಳುವಳಿಕೆ. ಇಲ್ಲಿನ ಅನೇಕ ಅಂಶಗಳು ನಾಡಿನಾದ್ಯಂತ ಕಂಡು ಬರುವ ಸಾಂಸ್ಕೃತಿಕ ಗುಣಸ್ವಭಾವಗಳನ್ನೇ ಹೊಂದಿದ್ದರೂ ಸಂಸ್ಕೃತಿಯ ಸಂದರ್ಭದಲ್ಲಿ ಮರಿಯಮ್ಮನಹಳ್ಳಿ ಪ್ರದೇಶದ ಸಾಂಸ್ಕೃತಿಕ ವೈವಿಧ್ಯತೆಗಳನ್ನು ಮತ್ತು ವೈಶಿಷ್ಟ್ಯತೆಗಳನ್ನು ಗುರುತಿಸುವುದು ಅಧ್ಯಯನದ ಮುಖ್ಯ ಉದ್ದೇಶವಾಗಿತ್ತು. ಈ ದೃಷ್ಟಿಯಿಂದ ಮರಿಯಮ್ಮನಹಳ್ಳಿ ಪರಿಸರದ ಮೂಲಿಗರು ಮತ್ತು ವಲಸಿಗರ ಸಂಸ್ಕೃತಿಗಳೆರಡರ ವೈಶಿಷ್ಟ್ಯತೆಯನ್ನು ನಿರ್ಧಿಷ್ಟವಾಗಿ ಗುರುತಿಸಲಾಗಿದೆ. ಆದರೂ ಸಂಸ್ಕೃತಿಯ ಇತರ ಅನೇಕ ಆಯಾಮಗಳನ್ನು ಪ್ರಬಂಧದ

ವ್ಯಾಪ್ತಿಯನ್ನು ಮೀರಿ ಅಧ್ಯಯನ ಮಾಡುವುದಕ್ಕೆ ಅವಕಾಶವಿದೆ. ಜನಜೀವನ ವಿಸ್ತಾರವಾದಂತೆಲ್ಲ ಸಂಸ್ಕೃತಿ ಶೋಧದ ನೆಲೆಗಳೂ ವ್ಯಾಪಕವಾಗುತ್ತವೆಯೆಂಬುದನ್ನು ತಿಳಿದಿದ್ದೇನೆ.

ಆಧುನಿಕ ಜೀವನ ವಿಧಾನಗಳು ಪರಂಪರಾಗತವಾದ ಬದುಕಿನ ಶೈಲಿಯನ್ನು ವಿಘಟಿಸಿರುವುದರಿಂದಾಗುವ ಅನೇಕ ವೈರುದ್ಯಗಳ ನಡುವೆಯೂ ಸೌಹಾರ್ದಯುತವಾದ ಸಹಬಾಳ್ವೆಗೆ ತುಡಿಯುವ ಜೀವನೋತ್ಸಾಹ ಕುಗ್ಗಿಲ್ಲದಿರುವುದು ಇಲ್ಲಿನ ಸಂಸ್ಕೃತಿಯಿಂದ ತಿಳಿಯುತ್ತದೆ. ಜನಪದರ ಪರಂಪರಾಗತವಾದ ನಂಬಿಕೆಗಳಲ್ಲಿನ ಪಲ್ಲಟಗಳಿಗೆ ಅವರ ಆರ್ಥಿಕ ಬದುಕಿನಲ್ಲಾಗಿರುವ ವ್ಯತ್ಯಾಸಗಳು ಕಾರಣವಾಗಿದ್ದರೂ, ಆಚರಣೆ, ಸಂಪ್ರದಾಯ ಇವುಗಳನ್ನು ಸಂಪೂರ್ಣವಾಗಿ ತೊರೆಯಲಾಗದೆ ಸಾಮಾಜಿಕ ಅಗತ್ಯಗಳನ್ನಾಗಿ ರೂಢಿಸಿಕೊಂಡಿದ್ದಾರೆ. ಹೀಗಾಗಿ ನಗರೀಕರಣ ಮತ್ತು ನಾಗರೀಕತೆಗಳ ತೀವ್ರದಾಳಿಗೆ ತುತ್ತಾಗಿರುವ ಮರಿಯಮ್ಮನಹಳ್ಳಿ ಪರಿಸರದಲ್ಲಿ ಪ್ರಾಚೀನವಾದ ಪದ್ಧತಿಗಳು ಆಧುನಿಕವಾದ ಹೊಸ ಹೊಸ ಪ್ರಕ್ರಿಯೆಗಳು ಏಕಕಾಲದಲ್ಲಿ ಸಮ್ಮಿಳಿತಗೊಂಡಿರುವ ಸಂಕ್ರಮಣಾವಸ್ಥೆಯ ಸಂಸ್ಕೃತಿ ಸ್ವರೂಪವನ್ನು ಕಾಣುತ್ತೇವೆ. ಕೃಷಿ ಮತ್ತು ಕುಲಕಸುಬುಗಳನ್ನಾಧರಿಸಿ ಸಂಸ್ಕೃತಿಗೆ ಪರ್ಯಾಯವಾಗಿ ಕೈಗಾರಿಕೆ ಮತ್ತು ವ್ಯಾಪಾರಿ ಸಂಸ್ಕೃತಿಗಳು ಪ್ರವೇಶ ಪಡೆದು ಹಲವಾರು ರೀತಿಯ ಸಾಂಸ್ಕೃತಿಕ ವೈರುಧ್ಯಗಳಿಗೆ ಕಾರಣವಾಗಿರುವುದನ್ನು ನಿರೂಪಿಸಲಾಗಿದೆ. ವರ್ಗ ಮತ್ತು ವರ್ಣ ಶ್ರೇಣೀಕರಣ ವ್ಯವಸ್ಥೆಯಲ್ಲಿ ಉಳ್ಳವರು ಮತ್ತು ವೈದಿಕವರ್ಣ ವಿಧಾನಗಳನ್ನು ಅನುಸರಿಸಿ ಸಾಮಾಜಿಕ ಶ್ರೇಷ್ಠತೆಗೆ ಹಾತೊರೆಯುವ ಸ್ಥಿತಿ ಅನೇಕ ಶೂದ್ರ ಮತ್ತು ಕೆಳಜಾತಿ ಸಮುದಾಯಗಳಲ್ಲಿದೆ. ಇದೇ ಕಾರಣಕ್ಕೆ ಅವರ ಆಚರಣಾ ವಿಧಿಗಳಲ್ಲಿ ಬದಲಾವಣೆಯ ಪ್ರಕ್ರಿಯೆಗಳಾಗಿದ್ದು ಅಂತಿಮವಾಗಿ ಸಾಮಾಜಿಕ ಸ್ಥಾನ-ಮಾನಗಳನ್ನು ಗಳಿಸುವ ಉದ್ದೇಶವನ್ನು ಹೊಂದಲಾಗಿದ್ದರೂ ಒಟ್ಟು ಸಮುದಾಯ ಸಮಾಜದ ರಚನೆ ಬದಲಾಗಲಿಲ್ಲ. ಇವರ ಆಚರಣಾ ಸಂಸ್ಕೃತಿಯಲ್ಲಿದ್ದ ಮೂಲದಲ್ಲಿನ ಸಹಜತೆಗಳು ಕಣ್ಮರೆಯಾಗಿ ಕೃತಕವಾಗಿ ಪರಿಣಮಿಸಿ ಸತ್ವ ಹೀನಗೊಂಡಿವೆ. ಮೇಲ್ನೋಟಕ್ಕೆ ಬದಲಾದಂತೆ ಕಾಣುವ ಸಮಾಜದ ಅಂತರಂಗದಲ್ಲಿಯೇ ಅಸ್ಪೃಶ್ಯತೆ, ಜಾತೀಯತೆ, ಶೋಷಕ ಪ್ರವೃತ್ತಿ ಮುಂತಾದ ಕ್ರೂರ ಸಂಗತಿಗಳು ಅಡಗಿದ್ದು, ಆಧುನಿಕತೆಯ ತಂತ್ರಗಳು ಜನ ಸಾಮಾನ್ಯರ ಶೋಷಣೆಯನ್ನು ಘೋಷಿಸುವ ಅಸ್ತ್ರಗಳಾಗಿ ಪರಿಣಮಿಸಿರುವುದು ಇಲ್ಲಿನ ರಾಜಕೀಯ, ಸಾಮಾಜಿಕ, ಧಾರ್ಮಿಕ, ಪ್ರವೃತ್ತಿಗಳಿಂದ ಎದ್ದು ಕಾಣುತ್ತದೆ. ಈ ದೃಷ್ಟಿಯಿಂದ ಪ್ರಾಧಾನ್ಯತೆಯನ್ನು ಪಡೆಯಬೇಕಾದ ಅವಶ್ಯಕತೆಯಿದೆ. ಭೌತಿಕವಾದ ಪರಿವರ್ತನೆಗಳು ಹೊರನೋಟಕ್ಕೆ ತೋರಿ, ಬಂದರೂ ಜನ ಜೀವನದಲ್ಲಿ ಗುಣಾತ್ಮಕವಾದ ಬದಲಾವಣೆಗಳಿಗೆ ಅವಕಾಶವಿಲ್ಲದಂತಾಗಿದೆ. ನಗರ-ಹಳ್ಳಿ, ಅಕ್ಷರಸ್ಥ-ಅನಕ್ಷರಸ್ಥ, ಬುದ್ಧಿ-ಶ್ರಮ ಇವುಗಳ ನಡುವಿನ ಹೊಂದಾಣಿಕೆ ಸಾಧ್ಯವಾಗದೆ ಅಂತರಗಳು ವಿಸ್ತಾರಗೊಂಡು ಒಂದು ರೀತಿ ಸಾಮಾಜಿಕ ಸಾಮರಸ್ಯ ಸಾಧ್ಯವಾಗದೆ ಅಂತರಗಳು ವಿಸ್ತಾರಗೊಂಡು ಒಂದು ರೀತಿಯ ಸಾಮಾಜಿಕ ಕ್ಷೋಭೆ, ಇಲ್ಲಿನ ಅಧ್ಯಯನದಿಂದ ಸ್ಪಷ್ಟವಾಗುತ್ತದೆ.

ಆಧುನೀಕರಣ, ಪಾಶ್ಚಾತ್ಯೀಕರಣ ಇವುಗಳ ಪ್ರಕ್ರಿಯೆಯಿಂದಾಗಿ ಸಾಂಪ್ರಾದಾಯಿಕವಾದ ಸಾಮಾಜಿಕ ತಾರತಮ್ಯಗಳು ದೂರ ಸರಿದು ಮಾನವೀಯ ಸಮಾಜ ನಿರ್ಮಾಣಗೊಳ್ಳುತ್ತದೆಂದು ನಿರೀಕ್ಷಿಸಿದ್ದವರಿಗೆ ನಿರಾಶೆಯಾದಂತಾಗಿದೆ. ತಮ್ಮ ನೆಲೆಯಲ್ಲಿಯೇ ಪರಕೀಯರಾಗಿ ಪರಿಣಮಿಸಿದ್ದಾರೆ. ಇತ್ತೀಚಿನ ದಿನಗಳಲ್ಲಿ ಆರ್ಥಿಕ ಅಸಮರ್ಥತೆ ಮನುಷ್ಯನನ್ನು ಕೆಳಹಂತಕ್ಕೆ ನೂಕುವ ಪ್ರವೃತ್ತಿಗಳು ಹೆಚ್ಚುತ್ತಿರುವುದರಿಂದ ಆರ್ಥಿಕವಾಗಿ ಬಡತನದಲ್ಲಿದ್ದ ಕೆಳ ಸಮುದಾಯಗಳು ಹತಾಶವಾಗಿವೆ.

ಸಂಪ್ರದಾಯ ಸಮಾಜದಲ್ಲಿನ ಜಾತೀಯ ತಾರತಮ್ಯಗಳನ್ನು ಆಧುನಿಕ ಸಮಾಜದಲ್ಲಿ ಹಣದ ಮೂಲಕ ಮಾಡಲಾಗುತ್ತದೆ. ಒಟ್ಟಿನಲ್ಲಿ ಆಧುನಿಕ ವಿದ್ಯಮಾನಗಳು, ಜನ ಸಾಮಾನ್ಯರ ಒತ್ತಾಸೆಯಾಗಿ ಮೂಡಿಬರಲಿಲ್ಲವೆಂದು ಸ್ಪಷ್ಟವಾಗಿ ಕಂಡುಬರುತ್ತದೆ.

ಜನಪದ ಸಂಪ್ರದಾಯ ಒಂದು ಜನಸಮುದಾಯದ ಸಮಷ್ಠಿ ಸೃಷ್ಠಿ. ಸಾಮಾಜಿಕ ಜೀವನದ ಸಂಕೇತ, ದೇಶದ ಸಂಸ್ಕೃತಿಯ ತಾಯಿ ಬೇರು. ಅದು ಜನ ಸಾಮಾನ್ಯರ ಕೃತಿಯೂ ಹೌದು, ಸ್ಮೃತಿಯೂ ಹೌದು, ಅದು ವಂಶ ಪಾರಂಪರಿಕವಾಗಿ ಪೀಳಿಗೆಯಿಂದ ಪೀಳಿಗೆಗೆ ಹರಿದು ಬಂದುದು. ಹೀಗೆ ಹರಿದುಬರುತ್ತಿರುವ ಮತ್ತು ಈಗ ಕಣ್ಮರೆಯಾಗುತ್ತಿರುವ ಹಂತದಲ್ಲಿರುವ ನಂಬಿಕೆ, ಆಚರಣೆ, ರೂಢಿ, ಸಂಪ್ರದಾಯಕ್ಕೆ ಸಂಬಂಧಿಸಿದ ಅನೇಕ ಅಂಶಗಳನ್ನು ಇಲ್ಲಿ ಪರಿಚಯಿಸಲಾಗಿದೆ. ಕ್ರೈಸ್ತ, ಮುಸ್ಲಿಂ ಸಮುದಾಯದ ಆಚರಣೆಗಳು ಹಿಂದೂ ಧರ್ಮದಂತೆ ಪ್ರಭಾವಿಯಾಗಿದ್ದು ಅವುಗಳನ್ನು ಅಧ್ಯಯನದಲ್ಲಿ ನಿರೂಪಿಸಲಾಗಿದೆ.

ಹೀಗೆ ಪ್ರಮುಖವಾಗಿ ಒಂಬತ್ತು ಅಧ್ಯಾಯಗಳ ಹರುಹುವುಳ್ಳ ಈ ಮಹಾ ಪ್ರಬಂಧದ ಒಂದೊಂದು ಅಧ್ಯಾಯದಲ್ಲೂ ಅದರ ವ್ಯಾಪ್ತಿಗೆ ಸಂಬಂಧಿಸಿದ ವಿಷಯದ ಪದರಗಳು ಉಪ ವಿಂಗಡಣೆಗಳಾಗಿ ಬಿಚ್ಚಿಕೊಳ್ಳುತ್ತಾ ಹೋಗುತ್ತವೆ. ಅಧ್ಯಯನದಲ್ಲಿ ಸಾಮಾನ್ಯವಾಗಿ ಇರುವ ನಂಬುಗೆಗಳು ವಿಕಸಿತಗುಣಗಳು ಹಾಗೂ ಪ್ರಸ್ತಾಪಿತವಾದ ಸಂಬಂಧ ಮತ್ತು ಸಭ್ಯತೆಗಳು ಇವುಗಳ ಸಂಕೀರ್ಣಕ್ಕೆ ಸಂಸ್ಕೃತಿ ಎನ್ನಲಾಗುತ್ತದೆ. ಒಂದು ಸಮುದಾಯದ ಜೀವನ ವಿಧಾನವೇ ಆ ಸಮಾಜದ ಸಂಸ್ಕೃತಿಯಾಗುತ್ತದೆ ಎಂಬ ದೃಷ್ಠಿಯಿಂದ ಜೀವನದ ರೀತಿ–ನೀತಿಗಳನ್ನು ನಿರೂಪಿಸಲಾಗಿದೆ.

ಪರಿವರ್ತನೆಯ ಗಾಳಿ ಎಲ್ಲ ವಲಯಗಳಿಗೂ ಬೀಸಿರುವುದರಿಂದಾಗಿ ಇಲ್ಲಿನ ಸಂಸ್ಕೃತಿ ವಿವರಗಳೂ ಬದಲಾವಣೆಗಳ ಗುರಿಯಾಗಿರುವುದರಿಂದ ಬದಲಾದ ಸನ್ನಿವೇಶಗಳನ್ನು ಸಂಸ್ಕೃತಿ ಸಂದರ್ಭಗಳನ್ನು ಪ್ರಬಂಧದಲ್ಲಿ ವಿವೇಚಿಸಲಾಗಿದೆ. ಶಿಷ್ಟವಲ್ಲವೆಂಬ ಕಾರಣಕ್ಕಾಗಿ ಜನಪದ ಸಾಹಿತ್ಯ, ಕಲೆ, ಕಸುಬುಗಳು ಹಿಂದಿನ ಕಾಲದಲ್ಲಿ ಅವಗಣನೆಗೊಳಪಟ್ಟಿವೆ. ಆಧುನಿಕವಾಗಿ, ಆರ್ಥಿಕ ಮತ್ತು ರಾಜಕೀಯ ಕಾರಣಗಳಿಂದ ಕಡೆಗಣಿಸಲ್ಪಟ್ಟು ನಸಿಸುವಂತಾಗಿವೆ. ಹೀಗಾಗಿ ಸಂಸ್ಕೃತಿಯನ್ನು ಕುರಿತು ನಿರ್ವಚಿಸಲ್ಪಟ್ಟಿರುವ ಅಭಿಪ್ರಾಯಗಳಿಗಿಂತ ಭಿನ್ನವಾದ ಬದುಕಿನ ವಿವರಗಳ ನಿರ್ವಚನೆಗಳು ಸಂಸ್ಕೃತಿಯ ಬೇರೆ ಬೇರೆ ಮುಖಗಳನ್ನು ಅನಾವರಣ ಮಾಡುತ್ತವೆ. ಅಂತಿಮವಾಗಿ ಸಂಸ್ಕೃತಿಯನ್ನು ಪೋಷಿಸುವುದು ಅಥವಾ ಬೆಳೆಸುವುದೆಂದರೆ ಬದುಕನ್ನು ಸಮೃದ್ಧಗೊಳಿಸುವುದೆಂದೇ ಪರಿಗಣಿಸಬೇಕಾದ

ಅಗತ್ಯವಿದೆ. ಆ ಮೂಲಕ ಬದುಕಿಗೆ ಸಂಬಂಧಿಸಿದ ಸಂಸ್ಕೃತಿಯನ್ನು ಸಂಸ್ಕಾರಕ್ಕೊಳಪಡಿಸಿ ಅದರ ಗುಣಾವಗುಣಗಳನ್ನು ಪರಿಶೀಲಿಸಬೇಕಾಗುತ್ತದೆ. ಆದುದರಿಂದ ಮನುಷ್ಯ ಸಂಬಂಧಿತವಾದ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಧಾರ್ಮಿಕ, ಸಂಗತಿಗಳು ಸಂಸ್ಕೃತಿಯ ಅಧ್ಯಯನಕ್ಕೆ ಪೂರಕವಾಗಿ ಅಂತರ ಸಂಬಂಧವನ್ನು ಪಡೆದುಕೊಂಡು ಸುವ್ಯವಸ್ಥೆಯನ್ನು ಹೊಂದಬೇಕಾದ ಅಗತ್ಯವಿದೆ.

ಇತ್ತೀಚಿನ ದಿನಗಳಲ್ಲಿ ಆರ್ಥಿಕ ಮತ್ತು ರಾಜಕೀಯ ನೆಲೆಗಳಲ್ಲಿ ಪೈಪೋಟಿಯ ಪ್ರವೃತ್ತಿ ಬೆಳೆದು ಏಕ ಸಂಸ್ಕೃತಿಯ ಸಿದ್ಧಾಂತಗಳನ್ನು ಮಂಡಿಸುವ ಅನಾರೋಗ್ಯದ ಬೆಳವಣಿಗೆಗಳ ಬದಲಾಗಿ ಜಾಗತಿಕವಾದ ಸಾಮೂಹಿಕ ಬದುಕನ್ನು ಸುವ್ಯವಸ್ಥೆಗೊಳಿಸಿ ಸಮೃದ್ಧಿಗೊಳಿಸುವುದರ ಮೂಲಕ ಸಂಸ್ಕೃತಿಯನ್ನು ವಿವೇಚಿಸುವುದನ್ನು ಮತ್ತು ಪೋಷಿಸುವುದು ಸೂಕ್ತ ಎಂಬುದು ನನ್ನ ಭಾವನೆ.

ಮರಿಯಮ್ಮನಹಳ್ಳಿ ನಾನು ಹುಟ್ಟಿದ ಊರಾಗಿದ್ದು ಬಹುಪಾಲು ಕ್ಷೇತ್ರ ಕಾರ್ಯದ ಆಧಾರದ ಮೇಲೆಯೇ ಈ ಪ್ರಬಂಧದ ಅಧ್ಯಯನ ಅವಲಂಬಿತವಾಗಿರುವುದರಿಂದ ವಕ್ತೃಗಳಿಂದ ಅಪಾರ ಸಹಾಯ ಹಾಗೂ ಸಹಕಾರಗಳನ್ನು ಪಡೆಯಲಾಗಿದೆ. ಹೀಗಾಗಿ ವಕ್ತೃ ಪರಿಚಯ ಪಟ್ಟಿಯನ್ನು ಅಳವಡಿಸಿದ್ದೇನೆ. ವಿಷಯ ಸಂಬಂಧಿತವಾದ ಛಾಯಚಿತ್ರಗಳನ್ನು ಅನುಬಂಧದಲ್ಲಿ ಕೊಡಲಾಗಿದೆ. ಜೊತೆಗೆ ಅಧ್ಯಯನಕ್ಕೆ ಬಳಸಿಕೊಂಡಿರುವ ಪ್ರಕಟಿತ ಜನಪದ ಸಾಹಿತ್ಯ ಹಾಗೂ ಇತರ ಕೃತಿಗಳನ್ನು ಮುಂತಾದವುಗಳನ್ನು ಪಟ್ಟಿ ಮಾಡಿದ್ದೇನೆ.

## ಆಧಾರಗ್ರಂಥಗಳು


೧. ಅರ್ಜುನ ಗೊಳಸಂಗಿ, ದಲಿತರ ಬದುಕು ಮತ್ತು ಸಂಸ್ಕೃತಿ, ಜಾನಪದಿಯ ಅಧ್ಯಯನ, ವಿಮೋಚನಾ ಪ್ರಕಾಶನ. ಅಥಣಿ ೨೦೦೦

೨. ಗುಡಿಹಳ್ಳಿ ನಾಗರಾಜ್, ಮರಿಯಮ್ಮನಹಳ್ಳಿ ರಂಗ ಸಿರಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೧೯೯೯

೩. ಎಚ್.ಎಸ್.ಗುರುಪ್ರಸಾದ್, ಮರಿಯಮ್ಮನಹಳ್ಳಿ ಆಂಜನೇಯ ಮತ್ತು ಶ್ರೀ ಲಕ್ಷ್ಮಿ ನಾರಾಯಣ ದೈವಗಳ ಸಾಂಸ್ಕೃತಿಕ ಅಧ್ಯಯನ (ಅಪ್ರಕಟಿತ) ಸಂಪ್ರಬಂಧ-೨೦೦೪

೪. ಗುಡಿಹಳ್ಳಿ ನಾಗರಾಜ್, ಕಲಾಗ್ರಾಮ, ಮರಿಯಮ್ಮನಹಳ್ಳಿ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ-೧೯೯೯

೫. ಶ್ರೀಮತಿ. ಎಸ್.ಎಂ.ಸಾವಿತ್ರಿ- ಕಂಪ್ಲಿ ಜಾನಪದ ಅಧ್ಯಯನ, ಪಿಎಚ್.ಡಿ., (ಅಪ್ರಕಟಿತ) ಕನ್ನಡ ವಿಶ್ವವಿದ್ಯಾಲಯ, ಹಂಪಿ. ೨೦೦೦

೬. ವೀರಣ್ಣ ದಂಡೆ. ದೇಸೀ ದೃಷ್ಠಿ, ಕವಿರಾಜ ಮಾರ್ಗ ಪ್ರಕಾಶನ, ಕಲುಬುರ್ಗಿ-೨೦೦೧

೦೭. ಸಂಧ್ಯಾರೆಡ್ಡಿ ಕೆ.ಆರ್., ಜನಪದ ಸಾಹಿತ್ಯದಲ್ಲಿ ಮಹಿಳೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೨೦೦೦

೮. ತಾರಮತಿ. ಬಿ. ಕರ್ನಾಟಕದ ಖಾಟಿಕ್ ಸಮುದಾಯ. ಪಿಎಚ್.ಡಿ (ಅಪ್ರಕಟಿತ) ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ-೨೦೦೭

೯. ದ್ರುವ ನಾರಾಯಣ, ನಾರಾಯಣ ದೇವರ ಕೆರೆ, ಯುವಕರ ಸಂಘ ಹಗರಿಬೊಮ್ಮನಹಳ್ಳಿ-೧೯೭೮

೧೦. ಜಿ.ವಿ.ಸುಬ್ಬರಾವ್ ಮತ್ತು ಹವಲ್ದಾರ್. ಎಸ್.ಹರಿಪ್ರಸಾದ್. ನೋಡು ಬಾ ನಮ್ಮೂರ, ಶ್ರೀ ಹರಿಪ್ರಿಯ ಪ್ರಕಾಶನ ಮರಿಯಮ್ಮನಹಳ್ಳಿ-೨೦೦೩

ಲೇಖನಗಳು:-

೧೧. ಎಚ್.ಎಸ್.ಗುರುಪ್ರಸಾದ್. ಬದಲಾಗುತ್ತಿರುವ ಮರಿಯಮ್ಮನಹಳ್ಳಿಯ ವಾಲ್ಮೀಕಿ ಮಹಿಳೆ, Tribe, state and empowermet: The indian experience- ವಿಚಾರ ಸಂಕಿರನದಲ್ಲಿ ಮಂಡಿಸಿದ ಪ್ರಬಂಧ-೨೦೦೬

೧೨. ಡಾ.ಎಚ್.ಜೆ.ಲಕ್ಕಪ್ಪಗೌಡ. ಜಾನಪದ ಕೈಪಿಡಿ. ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು-೧೯೯೭

೧೩. ಡಾ.ಟಿ.ಗೋವಿಂದರಾಜು. ಜನಪದ ವೈದ್ಯ. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ. ಬೆಂಗಳೂರು-೨೦೦೩

## ವಕ್ತೃಗಳ ವಿವರ

| ಹೆಸರು | ವಯಸ್ಸು | ಸಮುದಾಯ | ವೃತ್ತಿ | ಊರು |
|---|---|---|---|---|
| ೧. ಕೊಟ್ರಪ್ಪ | ೬೫ | ವಾಲ್ಮೀಕಿ | ವ್ಯವಸಾಯ | ಮರಿಯಮ್ಮನಹಳ್ಳಿ |
| ೨. ಚೆನ್ನಬಸಪ್ಪ | ೬೦ | – " – | – " – | – " – |
| ೩. ಲಕ್ಷಮ್ಮ | ೫೦ | – " – | – " – | – " – |
| ೪. ತಳವಾರ ಬಸಪ್ಪ | ೬೮ | – " – | – " – | – " – |
| ೫. ಶಾಂತಮ್ಮ | ೩೬ | – " – | ಮನೆಗೆಲಸ | – " – |
| ೬. ಬಸಮ್ಮ | ೪೦ | – " – | – " – | – " – |
| ೭. ತಳವಾರ್ ದೊಡ್ಡ ಬಾಲಪ್ಪ | ೮೦ | – " – | ವ್ಯವಸಾಯ | – " – |
| ೮. ಹುಲುಗಮ್ಮ | ೫೦ | ಚಾರಿಕರು | ಮನೆಗೆಲಸ | – " – |
| ೯. ಕಲಾವತಿ | ೪೦ | ವಾಲ್ಮೀಕಿ | ರಂಗಕಲಾವಿದರು | – " – |
| ೧೦. ಬಿ.ಸರೋಜಮ್ಮ | ೫೫ | ಚಾರಿಕರು | ಮನೆಗೆಲಸ | – " – |
| ೧೧. ಬಿ.ಹನುಮಂತಪ್ಪ | ೬೦ | – " – | ಹೋಟೆಲ್ ವೃತ್ತಿ | – " – |
| ೧೨. ಈರಮ್ಮ | ೪೫ | – " – | ಮನೆಗೆಲಸ | – " – |
| ೧೩. ರುದ್ರಮನಿ | ೪೦ | ಬಲಿಜ | ವ್ಯಾಪಾರ | – " – |
| ೧೪. ಎಮ್ಮೆ ಹನುಮಂತಪ್ಪ | ೪೫ | ಹರಿಜನ | ಕೃಷಿಕ | – " – |
| ೧೫. ಬಸವರಾಜ | ೩೫ | – " – | ಪೂಜಾರಿ | – " – |
| ೧೬. ಖಾಜಿ ಮಹ್ಮಮದ್ ಷರೀಫ್ | ೭೫ | ಮುಸ್ಲಿಂ | ಮೌಲ್ವಿ | – " – |
| ೧೭. ಪೀರ್ ಸಾಬ್ | ೫೫ | – " – | ಕಲಾವಿದರು | – " – |
| ೧೮. ಗೌಳೇರ ಅಣ್ಣಪ್ಪ | ೬೦ | ಲಿಂಗಾಯಿತ | ಜನಪದ ವೈದ್ಯ | – " – |
| ೧೯. ಮಂಜಮ್ಮ | ೪೦ | ವೈಶ್ಯ | ಜೋಗತಿ | – " – |
| ೨೦. ಚಿದಂಬರ್ ದೀಕ್ಷಿತ್ | ೪೫ | ಬ್ರಾಹ್ಮಣ | ಅರ್ಚಕ | – " – |

| | | | | |
|---|---|---|---|---|
| ೨೧. ಶ್ರೀನಿವಾಸ್‌ರಾವ್ | ೬೩ | - " - | ವ್ಯಾಪಾರ | - " - |
| ೨೨. ನಾಗರತ್ನಮ್ಮ | ೫೫ | ವಾಲ್ಮೀಕಿ | ಕಲಾವಿದರು | - " - |
| ೨೩. ರಾಮ ಚಂದ್ರಪ್ಪ | ೫೦ | - " - | ವ್ಯವಸಾಯ | - " - |
| ೨೪. ವೆಂಕಣ್ಣ | ೪೮ | ಕ್ಷೌರಿಕರು | ಕ್ಷೌರಿಕ | - " - |
| ೨೫. ಶ್ರೀಹರ ಪ್ರಸಾದ್ | ೨೭ | ಬ್ರಾಹ್ಮಣ | ಪತ್ರಕರ್ತ | - " - |
| ೨೬. ಡಾ.ಅಂಬಣ್ಣ | ೬೮ | ಚಾರಿಕರು | ವೈದ್ಯ | - " - |
| ೨೭. ಪಿ.ಬಾಗಮ್ಮ | ೪೫ | ವಾಲ್ಮೀಕಿ | ಶಿಕ್ಷಕಿ | - " - |
| ೨೮. ಸುಬ್ರಮಣ್ಯ | ೩೫ | ಬ್ರಾಹ್ಮಣ | ಅರ್ಚಕ | - " - |
| ೨೯. ಎಲ್.ಕೃಷ್ಣ | ೩೪ | ಹರಿಜನ | ವ್ಯಾಪಾರ | - " - |
| ೩೦. ಕೆ.ಸೋಮಶೇಖರ್ | ೨೪ | ವಾಲ್ಮೀಕಿ | ಕೆಲಸ | - " - |
| ೩೧. ಜಿ.ಶ್ರೀಧರ್ | ೨೬ | ಲಿಂಗಾಯಿತ | ಕೆಲಸ | - " - |
| ೩೨. ಶ್ರೀನಿವಾಸ್ | ೨೬ | ಕ್ಷೌರಿಕರು | ವ್ಯಾಪಾರ | - " - |
| ೩೩. ದೇವಣ್ಣ | ೨೮ | - " - | - " - | - " - |
| ೩೪. ಗೋವಿಂದ. ಪಿ | ೪೦ | - " - | - " - | - " - |
| ೩೫. ಶಂಕರ | ೨೧ | - " - | - " - | - " - |
| ೩೬. ವೆಂಕಟೇಶ್. ಪಿ | ೩೦ | - " - | - " - | - " - |
| ೩೭. ಶಿವು. ಎನ್ | ೨೦ | ನಾಯಕರು | - " - | - " - |
| ೩೮. ಕೃಷ್ಣಪ್ಪ | ೪೫ | - " - | - " - | - " - |
| ೩೯. ಚರಂತಿ ಮಠ | ೪೮ | ಲಿಂಗಾಯಿತ | ಡ್ರೈವರ್ | - " - |
| ೪೦. ಪೂರ್ವಾಚಾರಿ | ೪೦ | ವಿಶ್ವಕರ್ಮ | ಕಂಡಕ್ಟರ್ | - " - |
| ೪೧. ಲತಾ (ಪೂರ್ಣಿಮ) | ೩೫ | - " - | ಶಿಕ್ಷಕಿ | - " - |
| ೪೨. ಸಿಂಧುಬಾಯಿ | ೪೬ | ಬ್ರಾಹ್ಮಣ | - " - | - " - |
| ೪೩. ಸುಲ್ತಾನ್ ಸಾಬ್ | ೫೦ | ಮುಸ್ಲಿಂ | - " - | - " - |
| ೪೪. ನಾಗಮಣಿ | ೪೮ | ಬ್ರಾಹ್ಮಣ | - " - | - " - |

| | | | | |
|---|---|---|---|---|
| ೪೫. ಲೀಲಾವತಿ | ೪೯ | ವಾಲ್ಮೀಕಿ | - " - | - " - |
| ೪೬. ಹುಲಿಗೇಮ್ಮ | ೫೨ | - " - | - " - | - " - |
| ೪೭. ಹುರುಕಳಿ ಮಂಜುನಾಥ | ೩೮ | ಲಿಂಗಾಯಿತ | ಕೆಲಸ | - " - |
| ೪೮. ನಾಗಪ್ಪ ಕೂಟಗಿ | ೪೮ | - " - | ಸೊಸೈಟಿ ಅಧ್ಯಕ್ಷರು (ಮಾಜಿ) | - " - |
| ೪೯. ತಳವಾರ ಹುರುಗವ್ವ | ೫೦ | ವಾಲ್ಮೀಕಿ | - " - | - " - |
| ೫೦. ಹೊನ್ನೂರ ಸ್ವಾಮಿ | ೪೫ | - " - | ಕೆಲಸ | - " - |
| ೫೧. ನಬಿಸಾಬ್ | ೫೦ | ಮುಸ್ಲಿಂ | ವ್ಯಾಪಾರ | - " - |
| ೫೨. ಹೊನ್ನಯ್ಯ | ೪೮ | ಕ್ಷೌರಿಕರು | ಕ್ಷೌರಿಕ | - " - |
| ೫೩. ರಾಜಸಾಬ್ | ೪೯ | ಮುಸ್ಲಿ | ವ್ಯಾಪಾರ | - " - |
| ೫೪. ಕೊಟ್ಟಿಗಿ ಶಿವಕುಮಾರ್ | ೩೫ | ಲಿಂಗಾಯಿತ | - " - | - " - |
| ೫೫. ಮಂಜುನಾಥ | ೩೩ | ವೈಶ್ಯ | - " - | - " - |
| ೫೬. ದೇವೇಂದ್ರಪ್ಪ | ೪೭ | ವಾಲ್ಮೀಕಿ | - " - | - " - |
| ೫೭. ಕೂಡೆಳ್ಳಿ ರಾಘವೇಂದ್ರ | ೩೮ | ವೈಶ್ಯ | ಪಿಗ್ಮಿ ಕಲೆಕ್ಟರ್ | - " - |
| ೫೮. ಭೀಮಸೇನ ಶೆಟ್ಟಿ | ೩೭ | - " - | ವ್ಯಾಪಾರ | - " - |
| ೫೯. ರಾಮಣ್ಣ (ಕದ್ಲೆಶೆಟ್ಟಿ) | ೩೮ | - " - | ಹೋಟೆಲ್ ವೃತ್ತಿ | - " - |
| ೬೦. ಗೋವಿಂದರಾಜ | ೨೯ | - " - | - " - | - " - |
| ೬೧. ಅರುಣಕುಮಾರ | ೩೫ | - " - | ಕಿರಾಣಿ ಅಂಗಡಿ | - " - |
| ೬೨. ಪುರುಷೋತ್ತಮ | ೩೮ | - " - | ವ್ಯಾಪಾರಿ | - " - |
| ೬೩. ಚಿಂದಿಗಿ ಪ್ರಕಾಶ | ೩೨ | ಲಿಂಗಾಯಿತ | - " - | - " - |
| ೬೪. ಹಸ್ತಿ ಮಲ್ | ೪೯ | ಜೈನ | ಜವಳಿ ವ್ಯಾಪಾರಿ | - " - |
| ೬೫. ನರೇಶ ಕುಮಾರ | ೩೧ | - " - | - " - | - " - |
| ೬೬. ಸುಭಾಸ | ೪೮ | - " - | - " - | - " - |
| ೬೭. ರಾಜೇಶ್ವರಿ (ರಾಜಕ್ಕ) | ೪೮ | ವೈಶ್ಯ | ಮನೆಕೆಲಸ | - " - |

| | | | | |
|---|---|---|---|---|
| ೬೮. ಉಮೇಶ | ೪೭ | ವಾಲ್ಮೀಕ | ವ್ಯಾಪಾರಿ | - " - |
| ೬೯. ಭೀಮರಾಜ | ೪೮ | ವೈಶ್ಯ | ಕಿರಣಿ ವ್ಯಾಪಾರಿ | - " - |
| ೭೦. ರುದ್ರಯ್ಯ | ೪೫ | ಬುಟಗಾರ | - " - | - " - |
| ೭೧. ವಾಸು (ಮುದಗಲ್) | ೩೧ | ವೈಶ್ಯ | - " - | - " - |
| ೭೨. ಪ್ರಶಾಂತ | ೩೦ | ಲಿಂಗಾಯಿತ | ಎಸ್.ಟಿ.ಡಿ | - " - |
| ೭೩. ರಾಘವೇಂದ್ರ | ೪೪ | ಬ್ರಾಹ್ಮಣ | ವೈದ್ಯರು | - " - |
| ೭೪. ಜಿಲಾನ | ೪೬ | ಮುಸ್ಲಿಂ | ಬಿಲ್ಲ್ ಕಲೆಕ್ಟರ್ | - " - |
| ೭೫. ನಿರಹಳ್ಳಿ ಮಂಜುನಾಥ | ೪೨ | ವಾಲ್ಮೀಕಿ | ಗ್ರಾಮ ಪಂಚಾಯ್ತಿ | - " - |
| ೭೬. ಕಟವಿ ಸೋಮಣ್ಣ | ೪೮ | - " - | ವ್ಯವಸಾಯ | - " - |
| ೭೭. ಎಲ್.ಪ್ರಕಾಶ | ೩೧ | ಹರಿಜನ | ಕೆಲಸ | - " - |
| ೭೮. ಎಲ್.ಶಿವರಾಂ | ೩೨ | - " - | ವ್ಯವಸಾಯ | - " - |
| ೭೯. ಎಲ್.ಉಮೇಶ | ೩೮ | - " - | - " - | - " - |
| ೮೦. ನಟರಾಜ | ೨೯ | ಗೊಸಂಗಿ | ಬುಡಕಟ್ಟು | - " - |
| ೮೧. ರವೀಂದ್ರನಾಥ | ೪೭ | ಲಿಂಗಾಯಿತ | ಸೊಫಶೆಟ್ ಕೆಲಸ | - " - |
| ೮೨. ನಾಗರಾಜ ಹವಾಲ್ದಾರ | ೪೭ | - " - | ಶಿಕ್ಷಕ | - " - |
| ೮೩. ಶಾಂತನ ಗೌಡ್ರು | ೪೮ | - " - | - " - | - " - |
| ೮೪. ರಾಘವೇಂದ್ರ ಶೆಟ್ಟಿ | ೪೫ | ವೈಶ್ಯ | ಸೈಕಲ್ ವ್ಯಾಪಾರ | - " - |
| ೮೫. ಗಫೂರ್ ಸಾಬ್ | ೪೭ | ಮುಸ್ಲಿಂ | - " - | - " - |
| ೮೬. ಕನ್ನವ್ವ | ೪೮ | ವಾಲ್ಮೀಕಿ | ಕೆಲಸ | - " - |
| ೮೭. ವಿಜಯ ಕುಮಾರ | ೩೦ | ಲಿಂಗಾಯಿತ | ಗ್ರಾ.ಪಂ ವಾಟರ್ | - " - |
| ೮೮. ಜಿ.ಎಂ.ಕೊಟ್ರೇಶ | ೪೫ | - " - | ಗ್ರಾ.ಪಂ. ಸದಸ್ಯ | - " - |
| ೮೯. ಪ್ರಕಾಶ | ೩೪ | - " - | ವಕೀಲರು | - " - |
| ೯೦. ಶ್ರೀರಾಮ | ೩೫ | - " - | ಕಿರಾಣಿ ಅಂಗಡಿ | - " - |
| ೯೧. ಶೆರಗಾರ ರವಿ | ೪೫ | ಗೌಳಿಗರು | - " - | - " - |

| | | | | | |
|---|---|---|---|---|---|
| ೯೨. | ರಮೇಶ ಜೈನ್ | ೪೮ | ವಾಲ್ಮೀಕಿ | ವ್ಯಾಪಾರ | - " - |
| ೯೩. | ಬಿ.ಎಂ.ಎಸ್.ಗುರುಬಸವರಾಜ | ೪೮ | ಜೈನ್ | ಜವಳಿ ವ್ಯಾಪಾರ | - " - |
| ೯೪. | ಕೆ.ಮಂಜುನಾಥ | ೪೫ | ಲಿಂಗಾಯಿತರು | ಟೆಲಿಫೋನ್ ಡಿಪಾರ್ಟ್ಮೆಂಟ್ | - " - |
| ೯೫. | ಕಾಗ್ಲಿ ಅಂಕೇಶ | ೪೫ | ವಾಲ್ಮೀಕಿ | ವ್ಯಾಪಾರ | - " - |
| ೯೬. | ಬಿ.ಎಂ.ಎಸ್. ಶೇಖರಯ್ಯ | ೪೭ | - " - | - " - | - " - |
| ೯೭. | ಶಿವಕುಮಾರ (ಸಿಮಾನ) | ೪೮ | ಲಿಂಗಾಯತರು | ವ್ಯಾಪಾರ | - " - |
| ೯೮. | ಬಸವರಾಜಪ್ಪ (ಗುಂಡಪ್ಪ) | ೫೦ | - " - | - " - | - " - |
| ೯೯. | ದಳವಾಯಿ ಈರಣ್ಣ | ೫೦ | - " - | ಕೆ.ಪಿ.ಟಿ.ಸಿ.ಎಲ್ | - " - |
| ೧೦೦. | ಕೆ.ಲಕ್ಷ್ಮಣ | ೪೮ | ವಾಲ್ಮೀಕಿ | ಶಿಕ್ಷಕರು | - " - |
| ೧೦೧. | ಶ್ರೀರಾಮೂರ್ತಿ ಶೆಟ್ರು | ೪೮ | ವೈಶ್ಯ | ವ್ಯಾಪರ | - " - |
| ೧೦೨. | ಶಫಿವುಲ್ಲಾ | ೩೧ | ಮುಸ್ಲಿಂ | - " - | - " - |
| ೧೦೩. | ರಾಜಸಾಬ | ೫೨ | - " - | ಟೈಲರ್ | - " - |
| ೧೦೪. | ಜಿಲಾನ | ೨೯ | - " - | ವ್ಯಾಪಾರ | - " - |
| ೧೦೫. | ನರಸಿಂಹಮೂರ್ತಿ ಆಚಾರ | ೪೫ | ಬ್ರಾಹ್ಮಣ | ಅರ್ಚಕರು | - " - |
| ೧೦೬. | ಪದ್ಮನಾಭಯ್ಯ | ೪೫ | - " - | ಗ್ರಾಮಲೆಕ್ಕಾಧಿಕಾರಿ | - " - |
| ೧೦೭. | ಶ್ರೀಧರ ಶಾಸ್ತ್ರಿ | ೩೫ | - " - | ಕೆಲಸ | - " - |
| ೧೦೮. | ಅಣ್ಣಯ್ಯ | ೪೮ | - " - | ಶಿಕ್ಷಕರು | - " - |
| ೧೦೯. | ಗೌತಮ್‌ಕುಮಾರ | ೩೫ | ಜೈನ | ವ್ಯಾಪಾರ | - " - |
| ೧೧೦. | ರತ್ನಯ್ಯ ಶೆಟ್ರು | ೪೮ | ವೈಶ್ಯ | - " - | - " - |
| ೧೧೧. | ಎಂ.ನಾಗಪ್ಪ | ೪೫ | ಹರಿಜನ | ಕೆಲಸ | - " - |
| ೧೧೨. | ನಾಗರಾಜ ಪಾರೆಸ್ಟ್ | ೪೮ | ವಾಲ್ಮೀಕಿ | ಅರಣ್ಯಾಧಿಕಾರಿ | - " - |
| ೧೧೩. | ಯು.ವೆಂಕಟೇಶ್ | ೪೫ | - " - | ವ್ಯಾಪಾರ | - " - |
| ೧೧೪. | ರಮೇಶ ಕುಲುಕರ್ಣಿ | ೪೫ | ಬ್ರಾಹ್ಮಣ | ಪೊಲೀಸ್ ಅಧಿಕಾರಿ | - " - |
| ೧೧೫. | ಮರ್ದಾನ್ ಸಾಬ | ೪೮ | ಮುಸ್ಲಿಂ | ವ್ಯಾಪಾರ | - " - |

| | | | | |
|---|---|---|---|---|
| ೧೧೬. ಶ್ರೀರಾಮ | ೨೯ | ಪೂಜಾರ್ | ಅರ್ಚಕರು | – " – |
| ೧೧೭. ವಿಷ್ಣುಲಿಂಗಮೂರ್ತಿ | ೪೫ | ಲಿಂಗಾಯಿತರು | ಶಿಕ್ಷಕರು | – " – |
| ೧೧೮. ಕೊಟ್ರೇಶಪ್ಪ | ೪೫ | – " – | – " – | – " – |
| ೧೧೯. ಜಯಪ್ಪ ಬಿ.ಎಂ.ಎಸ್ | ೪೮ | – " – | – " – | – " – |
| ೧೨೦. ಮಂಜುನಾಥ | ೪೫ | – " – | – " – | – " – |
| ೧೨೧. ಕಮಲಮ್ಮ | ೪೮ | ಬ್ರಾಹ್ಮಣ | – " – | – " – |
| ೧೨೨. ಆನಂದಪ್ಪ ಮೇಷ್ಟ್ರು | ೪೮ | ಕ್ರಿಶ್ಚಿಯನ್ | – " – | – " – |
| ೧೨೩. ಅಲ್ಲಾಭಕ್ಷ್ ಮೇಷ್ಟ್ರು | ೪೭ | ಮುಸ್ಲಿಂ | – " – | – " – |
| ೧೨೪. ಮದೀನ ಸಾಬ | ೪೮ | – " – | – " – | – " – |
| ೧೨೫. ಕಾಸೀಂ ಸಾಬ್ | ೪೯ | – " – | – " – | – " – |
| ೧೨೬. ಹನುಮಂತಮ್ಮ | ೩೫ | ಹರಿಜನ | ಗ್ರಾ.ಪಂ.ಸದಸ್ಯರು | – " – |
| ೧೨೭. ಈಡಿಗರ ನಾಗರಾಜಪ್ಪ | ೪೬ | ಈಡಿಗರು | ವ್ಯಾಪಾರ | – " – |
| ೧೨೮. ಈಡಿಗರ ಉಮೇಶಪ್ಪ | ೪೪ | – " – | – " – | – " – |
| ೧೨೯. ಬಷೀರ ಸಾಬ್ | ೩೮ | ಮುಸ್ಲಿಂ | ಡ್ರೈವರ್ | – " – |
| ೧೩೦. ಮುರುಳೀಧರ ಆಚಾರ | ೪೮ | ಬ್ರಾಹ್ಮಣ | ಅರ್ಚಕರು | – " – |
| ೧೩೧. ಉಪ್ಪಾರ ಹುಲುಗಪ್ಪ | ೪೮ | ವಡ್ಡರು | ಬಂಡೆ ವ್ಯಾಪಾರ | – " – |
| ೧೩೨. ರವಿ ಕುಮಾರ | ೪೦ | ಕ್ರಿಶ್ಚಿಯನ್ | ಡ್ರೈವರ್ | – " – |
| ೧೩೩. ಆನಂದ ಪುಷ್ಪರತ್ನ | ೪೮ | – " – | ಶಿಕ್ಷಕಿ | – " – |
| ೧೩೪. ಚನ್ನವೀರಯ್ಯ | ೪೭ | ಲಿಂಗಯಿತರು | – " – | – " – |
| ೧೩೫. ತಳವಾರ ಸೋಮಶೇಖರ | ೩೦ | ವಾಲ್ಮೀಕಿ | ವ್ಯಾಪಾರ | – " – |
| ೧೩೬. ಜಡಿಯಪ್ಪ | ೪೯ | ವೈಶ್ಯ | – " – | – " – |
| ೧೩೭. ಮರಡಿ ರಮೇಶಪ್ಪ | ೫೦ | ವಾಲ್ಮೀಕಿ | – " – | – " – |
| ೧೩೮. ಜಹಂಗೀರ | ೩೦ | ಮುಸ್ಲಿಂ | – " – | – " – |
| ೧೩೯. ಕೀರ್ತಿರಾಜಜೈನ್ | ೪೫ | ಜೈನ | – " – | – " – |

| | | | | | |
|---|---|---|---|---|---|
| ೧೪೦. | ಜಗದೀಶ ಕೊಠಾರಿ | ೪೫ | - " - | - " - | - " - |
| ೧೪೧. | ಅಶೋಕ | ೪೦ | ಲಿಂಗಾಯತರು | ಶಿಕ್ಷಕರು | - " - |
| ೧೪೨. | ಸುಬ್ಬರಾವ್ | ೩೮ | ವೈಶ್ಯ | ಪತ್ರಕರ್ತರು | - " - |
| ೧೪೩. | ಸೋಮೇಶ್ | ೩೨ | ಉಪ್ಪಾರ | - " - | - " - |
| ೧೪೪. | S.T.D ಪ್ರಕಾಶ್ | ೩೫ | ಬೆಮಿಟೆಗರು | ವ್ಯಾಪಾರ | - " - |
| ೧೪೫. | ಸಿ.ಪ್ರಕಾಶ್ | ೩೮ | ಹರಿಜನರು | ಪತ್ರಕರ್ತರು | - " - |
| ೧೪೬. | ಹರಪ್ರಸಾದ್ | ೩೦ | ಬ್ರಾಹ್ಮಣ | ವ್ಯಾಪಾರ | - " - |
| ೧೪೭. | ಅಶೋಕ್ | ೩೭ | ಲಿಂಗಾಯಿತ | ಉಪನ್ಯಾಸಕ | - " - |
| ೧೪೮. | ರವಿ | ೨೬ | ಲಂಬಾಣಿ | ವಿದ್ಯಾರ್ಥಿ | - " - |
| ೧೪೯. | ಮಹಮ್ಮದ್ ರಫೀಕ್ | ೨೭ | ಮುಸ್ಲಿಂ | ವ್ಯಾಪಾರ | - " - |
| ೧೫೦. | ಈಶ್ವರ್ ಲಾಲ್ | ೩೧ | ಮರಾಠಿ | - " - | - " - |



ಮೂಲ ಮರಿಯಮ್ಮನ ಹಳ್ಳಿಯ ಅಗಸೆ ಬಾಗಿಲು



ಮೂಲ ಮರಿಯಮ್ಮನ ಹಳ್ಳಿಯ ಶ್ರೀ ಆಂಜನೇಯ ಸ್ವಾಮಿ
ದೇವಸ್ಥಾನ



ಲಕ್ಷ್ಮಿನಾರಾಯಣ ಮತ್ತು ಆಂಜನೇಯ ಸ್ವಾಮಿಯ ದೇವಸ್ಥಾನ



ಶ್ರೀ ಲಕ್ಷ್ಮಿನಾರಾಯಣ ಮತ್ತು ಆಂಜನೇಯ ಸ್ವಾಮಿಯ
ಜೋಡು ರಥೋತ್ಸವಗಳು



ಶ್ರೀ ಗುಡ್ಡದ ತಿಮ್ಮಪ್ಪನ ಜಾತ್ರೆ




ಶ್ರೀ ಲಕ್ಷ್ಮೀನಾರಾಯಣ ಮತ್ತು ಆಂಜನೇಯ ಸ್ವಾಮಿಯ
ಜಾತ್ರೆಯ ಅಂಗಡಿಗಳು



ರಥದಮ್ಮನ ಆಚರಣೆ



ಚೆಂಗಳೀರಮ್ಮ ಮತ್ತು ಕ್ಯಾತಪ್ಪ ಆಚರಣೆ

ಹೊಲದವ್ವನಿಗೆ ಎಡೆ ಇಟ್ಟಿರುವುದು





ಪೀರಲ್ ದೇವರುಗಳು

ಬಕ್ರೀದ್ ಹಬ್ಬದಲ್ಲಿ ಮುಸ್ಲಿಂರು ನಮಾಜಗ
ತೆರಳು ತ್ತಿರುವುದು



ಜೋಗತಿ ಕಲಾವಿದರು

ಬಯಲಾಟದ ಪಾತ್ರಧಾರಿಗಳು




ಜೋಗತಿ ನೃತ್ಯ



ಸಾಮೂಹಿಕ ವಿವಾಹಗಳು



ಕುಸ್ತಿ ಪಟುಗಳು




ಏತ ನೀರಾವರಿ ಯೋಜನೆಯ ನಕಾಶೆ




H. ಶ್ರೀನಿವಾಸ್ ರಾವ್ ರಚಿಸಿದ 'ಶಿವ ದರ್ಶನ' ತೈಲ ಚಿತ್ರ

